# ಹೊಸತು

ನೆಮ್ಮದಿಯ ನಾಳೆ ನಮ್ಮದು

ಜೂನ್ ೨೦೧೬

ಬೆಲೆ : ₹ ೨೦

ISSN 2319-7307






# 7ನೇ ಪುಸ್ತಕ ಮಳಿಗೆಯ ಶುಭಾರಂಭ ಹಾಗೂ 12 ಕೃತಿಗಳ ಲೋಕಾರ್ಪಣೆ

ನವಕರ್ನಾಟಕ ಪ್ರಕಾಶನದ 7ನೇ ಪುಸ್ತಕ ಮಳಿಗೆಯ ಉದ್ಘಾಟನೆ ಹಾಗೂ 12 ಪುಸ್ತಕಗಳ ಲೋಕಾರ್ಪಣೆಯ ಆತ್ಮೀಯ ಸಮಾರಂಭ ದಿನಾಂಕ 22–05–2016ರಂದು ಬೆಂಗಳೂರಿನ ಕೆಂಪೇಗೌಡ ರಸ್ತೆಯಲ್ಲಿರುವ ದೇವಾಂಗ ಟವರ್‌ನಲ್ಲಿ ನಡೆಯಿತು. ಕನ್ನಡ ಅಭಿವೃದ್ಧಿ ಪ್ರಾಧಿಕಾರದ ಅಧ್ಯಕ್ಷರಾದ ಡಾ॥ ಎಲ್. ಹನುಮಂತಯ್ಯ ಅವರು ಸಮಾರಂಭದ ಅಧ್ಯಕ್ಷತೆಯನ್ನು ವಹಿಸಿ ಮಳಿಗೆಯನ್ನು ಉದ್ಘಾಟಿಸಿದರು. ಕರ್ನಾಟಕ ಸಾಹಿತ್ಯ ಅಕಾಡೆಮಿ ಅಧ್ಯಕ್ಷರಾದ ಪ್ರೊ॥ ಮಾಲತಿ ಪಟ್ಟಣಶೆಟ್ಟಿಯವರು ಕೃತಿಗಳ ಲೋಕಾರ್ಪಣೆ ಮಾಡಿದರು. ಮುಖ್ಯ ಅತಿಥಿಗಳಾಗಿ ಚಲನಚಿತ್ರ ನಿರ್ದೇಶಕರಾದ ಡಾ॥ ನಾಗತಿಹಳ್ಳಿ ಚಂದ್ರಶೇಖರ್ ಅವರು ಭಾಗವಹಿಸಿದ್ದರು. ಕೃತಿಗಳ ಲೇಖಕರಾದ ಡಾ॥ ಜಿ. ರಾಮಕೃಷ್ಣ, ಶ್ರೀ ಸಿ. ಆರ್. ಕೃಷ್ಣರಾವ್, ಶ್ರೀ ಎಂ. ಸಿ. ಡೋಂಗ್ರೆ, ಡಾ॥ ಶ್ರೀನಿವಾಸ ಕಕ್ಕಿಲ್ಲಾಯ ಹಾಗೂ ಅನುವಾದಕರಾದ ಶ್ರೀ ಎಂ. ಅಬ್ದುಲ್ ರೆಹಮಾನ್ ಪಾಷ, ಡಾ॥ ಗೀತಾ ಶೆಣೈ, ಶ್ರೀ ಸ. ರಘುನಾಥ ಅವರು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಹಲವಾರು ಗಣ್ಯರು ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು ಹಾಗೂ ಸಮಾರಂಭ ಯಶಸ್ವಿಯಾಗಿ ಜರುಗಿತು.













# ಹೊಸತು

ನೆಮ್ಮದಿಯ ನಾಳೆ ನಮ್ಮದು


## ಒಳಗೇನಿದೆ?


**ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ**
*ಎಸ್. ಆರ್. ಭಟ್* ... ೧೩

**ಹುಚ್ಚು ಹೊಳೆಯಾಗಿ ಹರಿದು ಬಂದ ಗಾರ್ಮೆಂಟ್ಸ್ ಮಹಿಳೆಯರ ಆಕ್ರೋಶ**
*ದು. ಸರಸ್ವತಿ* ... ೧೯

**ಮರೆಯಲಾಗದ ಮಹಾಕವಿ ಒ. ಎನ್. ವಿ. ಕುರುಪ್**
*ಡಾ॥ ಪಾರ್ವತಿ ಜಿ. ಐತಾಳ್* ... ೨೧

**ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಸುಧಾರಣೆ ಸಾವಿನೊಂದಿಗೆ ಸರಸ**
*ಮೂಲ : ಆ್ಯಸ್ಪೆಕ್ಟ್ಸ್ ಆಫ್ ಇಂಡಿಯನ್ ಎಕಾನಮಿ*
*ಅನುವಾದ : ಮುರಳೀಧರ ಚಿಕ್ಕಮಗಳೂರು* ... ೨೩

**ಮನ್ವಂತರ** *ಪಿ. ಎಸ್. ಕೃಷ್ಣಮೂರ್ತಿ* ... ೨೭

**ಸರ್ವದೈವ ಭಂಜಕ – ಅಂಬೇಡ್ಕರ್** *ಮೂಲ : ಪ್ರತಾಪ್ ಭಾನು ಮೆಹತಾ*
*ಕನ್ನಡಕ್ಕೆ : ಡಾ॥ ಕೆ. ಸುಂದರ ರಾಜ್* ... ೩೧

**ಟಿ. ವಿ. ಲೋಕ : ಖಾಸಗೀ ಚಾನೆಲ್‌ಗಳ ಭರಾಟೆ** *ಸಿ. ಆರ್. ಕೃಷ್ಣರಾವ್* ... ೫೩

**ಕಾವ್ಯಲೋಕ** ೨೫, ೨೯, ೪೦, ೪೩, ೫೧

**ಒಳ್ಳೆತನ ಸಹಜವೇನಲ್ಲ** *ಎನ್. ಬೋರಲಿಂಗಯ್ಯ* ... ೩೯

**ವಿಳಾಸವಿಲ್ಲದವಳಿಗೆ...** *ಮಲ್ಲಿಕಾರ್ಜುನ ಗುಮ್ಮಗೋಳ* ... ೪೫

**ತುಳು ಜಾನಪದದಲ್ಲೊಂದು ಕೆರೆಗೆ ಹಾರ**
*ಡಾ॥ ಪಾಲ್ತಾಡಿ ರಾಮಕೃಷ್ಣ ಆಚಾರ್* ... ೪೭

**ರಾಷ್ಟ್ರಕವಿ ಕುವೆಂಪು ಚಿತ್ರಿಸಿದ 'ರೈತನ ದೃಷ್ಟಿ'** *ಬಿ. ಎ. ಸನದಿ* ... ೪೯

**ಭಗವದ್ಗೀತೆಯ ರಚನೆಯ ಸುತ್ತಮುತ್ತ...** *ಮ. ಶ್ರೀ. ಮುರಳಿ ಕೃಷ್ಣ* ... ೫೨

**ಪುಸ್ತಕ ಲೋಕಾರ್ಪಣೆ ಪ್ರಹಸನವು...** *ಬಿಂಡಿಗನವಿಲೆ ಭಗವಾನ್* ... ೫೫

**'ಜೀವಿವೈವಿಧ್ಯತೆ' ಭೂಮಿತಾಯ ವೈಶಿಷ್ಟ್ಯತೆ**
*ವಿ. ಚಂದ್ರಶೇಖರ ನಂಗಲಿ* ... ೫೯

**ಬಾಳೇಕಾಯಿ ಸಿದ್ದಪ್ಪನ ಗುಹೆ** *ಚಿತ್ರಲೇಖನ : ಡಿ. ಎನ್. ರವಿಕುಮಾರ್* ... ೫೭

**ನಾನು ಓದಿದ ಪುಸ್ತಕ : ಭಾರತದ ರಾಷ್ಟ್ರೀಯತೆಯ ಕುರಿತು ಗಂಭೀರ ಚರ್ಚೆ**
*ಡಾ॥ ಪುರುಷೋತ್ತಮ ಬಿಳಿಮಲೆ* ... ೪೨

**ವಿಶ್ವವೀಕ್ಷಣೆ : ಮೋದಿ ಸರಕಾರದ ವಿದೇಶೀ ನೀತಿ**
**ನೆರೆರಾಷ್ಟ್ರಗಳ ಜೊತೆ ಸುಧಾರಿಸದ ಸಂಬಂಧ** *ಸೀಯಾರ್ಕೆ* ... ೩೮
**ನಭಾವಲೋಕನ : ಬುಧ ಗ್ರಹದ ಚಲನವಲನ** *ಡಾ॥ ಬಿ. ಎಸ್. ಶೈಲಜಾ*... ೩೦
**ಹೊಸ ಓದು** *ಕಲ್ಲೇಶ್ ಕುಂಬಾರ್* ... ೧೮
**ಸಾದರ ಸ್ವೀಕಾರ** ... ೩೪
**ತಿಳಿವು: ಯಶಸ್ಸಿನ ಗುಟ್ಟು ಆತ್ಮಶಕ್ತಿಯಲ್ಲಿದೆ** *ಜ. ಹೊ. ನಾರಾಯಣಸ್ವಾಮಿ* ... ೬೨
**ಕ್ಷ–ಕಿರಣ** *ಸಾನ್ವಿ ಪಿ.* ... ೧೨



**ಚಿತ್ರಗಳು** : ಕಮಲಂ ಅರಸು, ವಿ. ಗೋಪಾಲ್, ತನು, ಗೋಪಿ,
ಜಿ. ಎಂ. ಬೊಮ್ನಳ್ಳಿ, ಏಕನಾಥ್ ಬೊಂಗಾಳೆ

**ಮುಖಪುಟ** : ಮರಳಿ ಶಾಲೆಗೆ

**ವಿನ್ಯಾಸ** : ನವಕರ್ನಾಟಕ ವಿನ್ಯಾಸ

**ಕಚೇರಿ ಸಹಕಾರ** : ಜಿ. ವಿ. ತೇಜೋವತಿ


## ಈ ತಿಂಗಳು



ಶಿವಮೊಗ್ಗ ಜಿಲ್ಲೆಯ ಮತ್ತೂರಿನಲ್ಲಿ ಬೀಡಿ ಅಂಗಡಿಯ ಮಾಲೀಕರೂ ಸಂಸ್ಕೃತದಲ್ಲೇ ಮಾತನಾಡುತ್ತಾರೆಂಬ ಸುಳ್ಳು ಸುದ್ದಿಯನ್ನು ಹಲವು ವರ್ಷಗಳಿಂದ ಹರಡುತ್ತಾ ಬರಲಾಗಿದೆ. ಅದು ಸುಮ್ಮನೆ ಹರಿಯಬಿಟ್ಟಿರುವ ಮಾತೆಂದು ಆ ಊರಿನ ಖ್ಯಾತ ವಿಜ್ಞಾನಿಗಳೊಬ್ಬರು ಹೇಳುತ್ತಾರೆ. ಸಂಸ್ಕೃತವನ್ನೇ ಮಾತನಾಡುವ ಊರಿನಲ್ಲಿ ಯಜ್ಞ ನಡೆಯಬೇಕಾದ್ದು ಸಹಜವೇ ಹೌದೇನೊ ! ಒಬ್ಬ "ಡಾಕ್ಟರ್" ಭಟ್ಟರು ಇತ್ತೀಚೆಗೆ ಅದನ್ನು ನಡೆಸಿಯೇಬಿಟ್ಟರು. ಅದು ಸೋಮಯಾಗವಂತೆ, ಸೋಮಲತೆಯನ್ನು ಹಿಮಾಲಯದಿಂದ ತಂದಿದ್ದರಂತೆ. ಅಂದರೆ, ಒಂದು ಹೊರೆ ಬಳ್ಳಿ ತಂದಿರಬೇಕು, ಇಲ್ಲದಿದ್ದರೆ ಲತೆಯಿಂದ ಅವರಿಗೆ ಕುಡಿಯಲು ಬೇಕಾಗುವಷ್ಟು ರಸ ಹೇಗೆ ದೊರೆತೀತು ! ಈವರೆಗೆ ವಿದ್ವಾಂಸರು ಹೇಳುತ್ತಾ ಬಂದಿರುವ ವಿಷಯ ಸೋಮಲತೆಯನ್ನೆಲ್ಲೂ ಕಂಡಿಲ್ಲ ಎಂದು. ಕಂಡಿದ್ದಿದ್ದರೆ ಪ್ರಸ್ತುತ ಲೇಖಕ ಹಿಮಾಲಯದಲ್ಲಿ ಅದನ್ನು ಹೀರಿಬಿಡುತ್ತಿದ್ದರು. ಯಾರಿಗೂ ಸಿಗದ ಸೋಮಲತೆ ಮತ್ತೂರಿನ ಡಾ॥ ಭಟ್ಟರಿಗೆ ಸಿಕ್ಕಿದ್ದು ಸೋಮನ ಕೃಪೆಯಿಂದ. ಸೋಮರಸವೆಂದು ವಿಜಯ ಮಲ್ಯ ಮಾರಾಟ ಮಾಡಿದ ಯಾವುದಾದರೂ ರಸವನ್ನು ಕುಡಿದು ಬಿಟ್ಟರೇನೋ ಎಂಬ ಸಂಶಯಕ್ಕೆ ಎಡೆಯಿದೆ. ರಸವನ್ನು ಕುಡಿಯುವವರಿಗೆ ಕುರುಕು ತಿಂಡಿ ಮುಂದಿರಬೇಕಂತೆ : ಹಪ್ಪಳ, ಬಜ್ಜಿ–ಬೋಂಡ, ಹುರಿಗಾಳು, ಹೀಗೆ ಏನಾದರೂ ಸರಿಯೆ. ನಮ್ಮ ಮತ್ತೂರು ಭಟ್ಟರು ಮೇಕೆಯ ಮಾಂಸವನ್ನು ಭುಂಜಿಸಿ ಸೋಮರಸ ಪಾನ ಮಾಡಿದರಂತೆ. ಶಾಭಾಸ್‌ಗಿರಿ ಅವರಿಗೆ ದಕ್ಕಲೇಬೇಕು. "ವೈದಿಕ ಸಂಸ್ಕೃತಿಯನ್ನು ನಮ್ಮದಾಗಿಸಿಕೊಳ್ಳಬೇಕು" ಎಂದು ಹಲುಬುವವರ ಮನಸ್ಸಿಗೆ ಭಟ್ಟರು ಆಹ್ಲಾದ ಉಂಟುಮಾಡಿದ್ದಾರೆ. ಏಕೆಂದರೆ ಋಗ್ವೇದದ ಮಂತ್ರಗಳನ್ನುಚ್ಚರಿಸುತ್ತಾ ಯಾವ ಕ್ರಿಯೆಗಳಲ್ಲಿ ತೊಡಗಬೇಕೆಂದು ಯಜುರ್ವೇದ ಮತ್ತು ಬ್ರಾಹ್ಮಣ ಗ್ರಂಥಗಳು ಹೇಳಿವೆ (ಅವು ಬ್ರಾಹ್ಮಣರ ಗ್ರಂಥಗಳಲ್ಲ, ವೇದಕಾಲೀನ ಗ್ರಂಥಗಳು, ಅಷ್ಟೆ ). ಮಾಂಸವು ಯಜ್ಞದ ಪ್ರಸಾದವಿದ್ದಂತೆ. ಅದನ್ನು ತಿನ್ನದೆ ಯಜ್ಞವು ಪೂರೈಸುವುದಿಲ್ಲ, ನಿರೀಕ್ಷಿತ ಫಲವು ಸಿಗುವುದಿಲ್ಲ. ಮೂರು ಸಾವಿರ ವರ್ಷಗಳ ಹಿಂದೆ ವೈದಿಕಯಜ್ಞದಲ್ಲಿ ಮಾಂಸವನ್ನು ತಿನ್ನುವುದು ಪ್ರಶ್ನಾರ್ಹವಾಗಿರಲಿಲ್ಲ, ಅದು ಯಜ್ಞದ ಭಾಗವೇ ಆಗಿತ್ತು. ಆ ನಿಟ್ಟಿನಲ್ಲಿ ಮತ್ತೂರು ಭಟ್ಟರು ವೈದಿಕ ಆಚರಣೆಯನ್ನು ಸಾಂಗವಾಗಿ ನೆರವೇರಿಸಿದ್ದಾರೆ. ಆದರೆ "ವೇದಕಾಲಕ್ಕೆ ಹಿಂದಿರುಗಬೇಕು" ಎಂದು ಆಗಾಗ್ಗೆ ಹೇಳುವ ಕೃಷ್ಣಭಕ್ತ ಪೇಜಾವರ ಸ್ವಾಮಿ "ಯಜ್ಞ ಮಾಡಿದ್ದು ಸರಿ, ಆದರೆ ಮೇಕೆ ಮಾಂಸ ತಿನ್ನಬಾರದಿತ್ತು" ಎಂದು ಹೇಳಿದರೆಂದು ವರದಿಯಾಗಿದೆ. ಮಾಂಸ ತಿನ್ನದೆ ವೇದಕಾಲಕ್ಕೆ ಹಿಂದಿರುಗಲು ಸಾಧ್ಯವಿಲ್ಲವೆಂದು ಮತ್ತೂರು ಭಟ್ಟರು ಅದನ್ನು ತಿಂದಿದ್ದಾರೆ. ಇನ್ನುಮುಂದೆ ಮತ್ತೂರಿಗೆ ಹೋಗುವ ಘನಪಾಠಿಗಳಿಗೆಲ್ಲಾ ಡಾ॥ ಭಟ್ಟರು ಮಧುಪರ್ಕವನ್ನೂ ಸಾಂಗವಾಗಿ ನೀಡಿ ಸತ್ಕರಿಸುತ್ತಾರೆಂದು ಆಶಿಸೋಣ. ಮಧುಪರ್ಕವನ್ನು ನೀಡಿ ಅತಿಥಿಗಳನ್ನು ಆದರದಿಂದ ಬರಮಾಡಿಕೊಳ್ಳುವುದು ವೈದಿಕ ಸಂಪ್ರದಾಯ. ಮಧುಪರ್ಕದಲ್ಲಿ ಸೇರಿರುವ ಸಾಮಗ್ರಿಗಳಲ್ಲಿ ಮಾಂಸದ ತುಂಡು ಸಹ ಇರಬೇಕಾದ್ದು ಶಾಸ್ತ್ರೋಕ್ತವೆಂದು ಭಾರತರತ್ನ ಪಿ. ವಿ. ಕಾಣೆಯವರು ವಿಶದವಾಗಿ ವಿವರಿಸಿದ್ದಾರೆ. ಪೇಜಾವರರು ಆಧುನಿಕರೂ ಆಗಬೇಕು, ಪ್ರಾಚೀನತೆಯ ಸ್ಮಾರಕವೂ ಆಗಿರಬೇಕೆಂದು ಬಯಸುತ್ತಾರೆ. ವೈದಿಕ ಸಂಪ್ರದಾಯವನ್ನು ಪೇಜಾವರರ ಮಾಧ್ವ ಸಂಪ್ರದಾಯವು ಮೆಟ್ಟಿನಿಂತಿದೆ. ನಿಜಕ್ಕೂ ಮತ್ತೂರಿನ ಭಟ್ಟರೇ ನೈಜ ವೈದಿಕ ಆಚರಣೆಯ ನೈಜ ಅಧ್ವರ್ಯು ಎನ್ನಬೇಕು.

ಭಟ್ಟ ಡಾಕ್ಟ್ರು ಸೋಮಯಾಗವನ್ನು ತಮ್ಮ ಖಾಸಗಿ ಲಾಭಕ್ಕೆ, ಅಂದರೆ ಕಾಮ್ಯಫಲ ಪಡೆಯಲು, ಮಾಡಿದ್ದಲ್ಲ; ಅದು ಲೋಕಕಲ್ಯಾಣಕ್ಕಾಗಿ ಮಾಡಿದ್ದಂತೆ. ಲೋಕವೆಂದರೆ ಲೋಕದ ಜನ. ಈಗ ಭಟ್ಟರು ಬೇಕಾದರೆ ಹೇಳಬಹುದು, "ನೋಡಿ, ನಾನು ಯಜ್ಞ ಮಾಡಿದ್ದರಿಂದ ಶಿವಮೊಗ್ಗ ಜಿಲ್ಲೆಯಲ್ಲಿ ಮಳೆ ಬಿದ್ದಿದೆ. ಯಜ್ಞ ಮಾಡಿದರೆ ಮಳೆ ಸುರಿಯುತ್ತದೆಂದು ಭಗವದ್ಗೀತೆಯಲ್ಲಿ ಶ್ರೀ ಭಗವಾನನೇ ಹೇಳಿದ್ದಾನೆ. ಅದರಂತೆಯೇ ಮಳೆ ಬಂದಿದೆ" ಎಂದು.


**(೬ನೇ ಪುಟಕ್ಕೆ )**



# ಸಂಪಾದಕೀಯ




ತಿಂಗಳ ಪತ್ರಿಕೆ

**ಹೊಸತು**

ನೆಮ್ಮದಿಯ ನಾಳೆ ನಮ್ಮದು

ನವಕರ್ನಾಟಕ ಪ್ರಕಾಶನ

ಸಂಪುಟ-೧೭ ಸಂಚಿಕೆ-೧೧ ಜೂನ್ ೨೦೧೬

**ಗೌರವ ಸಂಪಾದಕ**

ಜಿ. ರಾಮಕೃಷ್ಣ

**ಸಂಪಾದಕ**

ಸಿದ್ದನಗೌಡ ಪಾಟೀಲ

**ಸಹಸಂಪಾದಕರು**

ಇಂದಿರಾ ಕುಮಾರಿ
ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಲ್. ಗೋಪಾಲಕೃಷ್ಣಯ್ಯ
ರಾಮಲಿಂಗಪ್ಪ ಟಿ. ಬೇಗೂರು
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೯೫
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : navakarnataka@gmail.com**
**hosathu@gmail.com**
**hosathu.nkp@gmail.com**
**URL : www.navakarnataka.com**
**http ://navakarnataka.blogspot.in**
**http ://hosathumonthly.blogspot.in**


## ಐದು ರಾಜ್ಯಗಳ ರಾಜಕೀಯ ಪಾಠ

ಐದು ರಾಜ್ಯಗಳಲ್ಲಿ ಅಲ್ಲಿನ ಶಾಸನ ಸಭೆಗೆ ನಡೆದ ಚುನಾವಣೆಗಳ ಫಲಿತಾಂಶ ಬಂದಿದೆ. ಮುಂಬರುವ ದಿನಗಳ ಭಾರತದ ರಾಜಕೀಯ ನೀಲಿ ನಕ್ಷೆ ಈ ಚುನಾವಣಾ ಫಲಿತಾಂಶದಿಂದ ಗೋಚರವಾಗುತ್ತದೆ. ಚುನಾವಣೆಯಲ್ಲಿ ರಾಷ್ಟ್ರೀಯ ಪಕ್ಷಗಳಿಗೆ ಜನತೆ ಕೊಟ್ಟ ಸಂದೇಶ ಗಮನಾರ್ಹವಾಗಿದೆ. ಚುನಾವಣೆಯ ಸಂದರ್ಭದಲ್ಲಿ ಜಾತಿ, ಧರ್ಮ, ಆಮಿಷಗಳ ಪಾತ್ರ ಏನೇ ಇದ್ದರೂ ಅಂತಿಮವಾಗಿ ಫಲಿತಾಂಶವೇ ನಿರ್ಧಾರಕ. ಆಮಿಷದ ವಿಷಯದಲ್ಲಿ ತಮಿಳುನಾಡು ಚುನಾವಣೆಯನ್ನು ಗಮನಿಸಿದರೆ ಅಲ್ಲಿನ ಎ.ಐ.ಡಿ.ಎಂ.ಕೆ. ಮತ್ತು ಡಿ.ಎಂ.ಕೆ.ಗಳು ಪೈಪೋಟಿಯ ಮೇಲೆ ಆಮಿಷವನ್ನು ಮತದಾರರ ಮುಂದಿಟ್ಟಿದ್ದವು. ಮತದಾನೋತ್ತರ ಸಮೀಕ್ಷೆಗಳನ್ನು ಸುಳ್ಳು ಮಾಡಿ ಜಯಲಲಿತಾ ಮತ್ತೆ ಗೆದ್ದಿದ್ದಾರಾದರೂ ಅಭೂತಪೂರ್ವ ಗೆಲುವು ಎಂದು ಹೇಳಲಾಗದು. ಅವರು ನೀಡಿದ ಆಮಿಷಗಳನ್ನು ನೋಡಿದರೆ ವಿರೋಧ ಪಕ್ಷಗಳು ಚಿಂದಿಯಾಗಬೇಕಿತ್ತು. ಹಾಗಾಗದೆ ಕಳೆದ ಬಾರಿಗಿಂತ ಜಯಲಲಿತಾ ಅವರ ಶಕ್ತಿ ಕುಂದಿ ೧೬ ಸ್ಥಾನಗಳು ಕಡಿಮೆಯಾಗಿವೆ. ಪ್ರಜೆಗಳಿಗೆ ಆಮಿಷ ಒಡ್ಡುವಲ್ಲಿ ಪೈಪೋಟಿ ನಡೆಸಿದ್ದ ಡಿ.ಎಂ.ಕೆ., ಕಾಂಗ್ರೆಸ್ ಪಕ್ಷದ ಜೊತೆ ಹೊಂದಾಣಿಕೆ ಮಾಡಿಕೊಂಡೂ ಅಧಿಕಾರ ಹಿಡಿಯಲಾಗಲಿಲ್ಲ. ಆದರೆ ತನ್ನ ಸ್ಥಾನಗಳನ್ನು (೭೬) ಹೆಚ್ಚಿಸಿಕೊಳ್ಳಲು ಮಾತ್ರ ಸಾಧ್ಯವಾಯಿತು. ಎ.ಐ.ಡಿ.ಎಂ.ಕೆ. ಪ್ರತಿಶತ ೪೧ರಷ್ಟು, ಡಿ.ಎಂ.ಕೆ. ಮತ್ತು ಕಾಂಗ್ರೆಸ್ ಮೈತ್ರಿಕೂಟ ಪ್ರತಿಶತ ೪೦ರಷ್ಟು ಮತ ಪಡೆದಿವೆ. ಈ ಎರಡೂ ಪಕ್ಷಗಳಿಗೆ ಪರ್ಯಾಯ ರೂಪಿಸಲು ಹೊರಟ ಎಡಪಕ್ಷಗಳ ಮತ್ತು ಎಂ.ಡಿ.ಎಂ.ಕೆ. ಮೈತ್ರಿಕೂಟ ವಿಫಲವಾಗಿದೆ. ಕೊನೆ ಗಳಿಗೆಯಲ್ಲಿ ರಚಿಸಲ್ಪಟ್ಟ ಈ ಮೈತ್ರಿಕೂಟಕ್ಕೆ ತಾತ್ವಿಕ ತಳಪಾಯ ಇರಲಿಲ್ಲ. ಇದೇ ರೀತಿಯ ಹೊಂದಾಣಿಕೆ ಪಶ್ಚಿಮ ಬಂಗಾಳದಲ್ಲಿ ನಡೆಯಿತು. ಚುನಾವಣೆ ಘೋಷಣೆಯಾದಮೇಲೆ ಸಿ.ಪಿ.ಎಂ. ಕಾಂಗ್ರೆಸ್ ಜೊತೆ ಸ್ಥಾನ ಹೊಂದಾಣಿಕೆಗೆ ಇಳಿಯಿತು. ಎಡರಂಗದಲ್ಲಿ ಈ ಕುರಿತು ಸಂಪೂರ್ಣ ಒಪ್ಪಿಗೆ ಇರಲಿಲ್ಲ. ಅದೇನೇ ಇರಲಿ, ಸಿ.ಪಿ.ಎಂ. ನೇತೃತ್ವದಲ್ಲಿ ತೆಗೆದುಕೊಂಡ ಈ ತೀರ್ಮಾನ ಸಂಪೂರ್ಣವಾಗಿ ವಿಫಲವಾಗಿದೆ. ಯಾವುದೇ ಹೊಂದಾಣಿಕೆ, ಮೈತ್ರಿಗಳು ಆಡಳಿತ ಪಕ್ಷದ ಜನವಿರೋಧಿ ನೀತಿಗಳ ವಿರುದ್ಧದ ನಿರಂತರ ಚಳುವಳಿಗಳಲ್ಲಿ ಹುಟ್ಟಿಕೊಂಡರೆ ಅವುಗಳ ಬಾಂಧವ್ಯ ಗಟ್ಟಿಯಾಗಿರುತ್ತದೆ. ಮುನ್ನೋಟ ಸ್ಪಷ್ಟವಾಗಿರುತ್ತದೆ. ಅದು ಮೇಲು ಹಂತದಿಂದ ಕೆಳ ಹಂತದವರೆಗೆ ಕೆಲಸ ಮಾಡುತ್ತದೆ. ಕೇರಳದ ಎಡರಂಗ ಅಂಥ ಒಂದು ಮಾದರಿ ಮೈತ್ರಿಕೂಟ. ಅಲ್ಲಿ ಅದು ಯಶಸ್ಸನ್ನು ಪಡೆದಿದೆ ಮಾತ್ರವಲ್ಲ ಸ್ಥಾನಗಳಿಕೆಯಲ್ಲೂ ಹೆಚ್ಚಿನ ಮುನ್ನಡೆಯನ್ನು ಪಡೆದಿದೆ. ಪಶ್ಚಿಮ ಬಂಗಾಳದಲ್ಲಿ ಎಡರಂಗ ತೀವ್ರ ಹಿನ್ನಡೆಯನ್ನು ಅನುಭವಿಸಲು ಕಾಂಗ್ರೆಸ್ ಮತಗಳು ಎಡರಂಗಕ್ಕೆ ವರ್ಗಾವಣೆಯಾಗಿರುವ ಸಾಧ್ಯತೆ ಕಡಿಮೆ ಎಂದು ವಿಶ್ಲೇಷಿಸಲಾಗುತ್ತಿದೆ. ಇದು ಒಟ್ಟಾರೆ ಎಡರಂಗದ ನಡೆಯಾದರೂ ಸಿ.ಪಿ.ಎಂ.ನ ನಿರ್ಧಾರ ಎಡರಂಗದ ಮೇಲೆ ಹೇರಲ್ಪಟ್ಟಿದೆ ಎಂದು ಹೇಳಲಾಗುತ್ತಿದೆ. ಕೇರಳದಲ್ಲಿ ಕಾಂಗ್ರೆಸ್‌ಅನ್ನು ಎದುರಿಸುತ್ತ ಪಶ್ಚಿಮ ಬಂಗಾಳದಲ್ಲಿ ಕಾಂಗ್ರೆಸ್ ಜೊತೆ ಕೈಗೂಡಿಸಿದ ತಂತ್ರ ಚರ್ಚೆಗೆ, ಟೀಕೆಗೆ ಒಳಗಾಗಿದೆ. ಪ್ರಶ್ನೆ ಇನ್ನೂ ಆಳಕ್ಕಿಳಿದು ಸಿ.ಪಿ.ಎಂ.ನ ಇಂದಿನ ನಿಲುವು ಸರಿಯಾಗಿದ್ದರೆ ೧೯೬೪ರಲ್ಲಿ ಕಮ್ಯುನಿಸ್ಟ್ ಪಕ್ಷವನ್ನು ಒಡೆದದ್ದೇಕೆ ಎಂಬ ವಾದ ಮುನ್ನೆಲೆಗೆ ಬಂದಿದೆ. ಅದೇನೇ ಇದ್ದರೂ ಪಶ್ಚಿಮ ಬಂಗಾಳದ ನಡೆಯನ್ನು ಪ್ರಶ್ನಿಸುತ್ತಲೇ, ಕೇರಳದ ಗೆಲುವು ಪ್ರಗತಿಪರರಿಗೆ, ಒಟ್ಟಾರೆಯಾಗಿ ಎಡಪಂಥೀಯರಿಗೆ ಸಮಾಧಾನ ತಂದಿದೆ.

ಬಿ.ಜೆ.ಪಿ. ಮತ್ತು ಕಾಂಗ್ರೆಸ್‌ನ ಸ್ಥಿತಿಗಳನ್ನು ಗಮನಿಸಿದರೆ ಬಿ.ಜೆ.ಪಿ. ಅಸ್ಸಾಂನಲ್ಲಿ ಗೆಲುವು ಕಂಡಿದೆ. ಬಿ.ಜೆ.ಪಿ. (ಪ್ರತಿಶತ ೨೯.೫) ಮತಗಳಿಕೆಯಲ್ಲಿ ಕಾಂಗ್ರೆಸ್ (ಪ್ರತಿಶತ ೩೧)ಗಿಂತ ಹಿಂದಿದ್ದರೂ ಮೈತ್ರಿಕೂಟದ ಸಹಾಯದಿಂದ ಹೆಚ್ಚು ಸ್ಥಾನ ಪಡೆದಿದೆ. ಬಿ.ಜೆ.ಪಿ.ಯ ಹಿಂದುತ್ವದ ಕಾರ್ಯಸೂಚಿ, ವಲಸೆ ವಿರೋಧಿ ಅಭಿಮತದ ಕ್ರೋಢೀಕರಣ ಅದರ ಗೆಲುವಿಗೆ ಕಾರಣವಾಗಿದೆ. ಆದರೂ ಇದು ಬಿ.ಜೆ.ಪಿ.ಯ ಸ್ವಯಂಶಕ್ತಿಯಲ್ಲ, ಸ್ಥಳೀಯ, ಮೈತ್ರಿಕೂಟದ ಪಕ್ಷಗಳ ಪಾಲೂ ಅದರಲ್ಲಿದೆ. ದಕ್ಷಿಣ ಭಾರತದಲ್ಲಿ ಕರ್ನಾಟಕವನ್ನು ಹೊರತುಪಡಿಸಿ ಬೇರೆಡೆ ನೆಲೆ ಕಂಡುಕೊಳ್ಳುವಲ್ಲಿ ಬಿ.ಜೆ.ಪಿ. ವಿಫಲವಾಗಿದೆ. ತಮಿಳುನಾಡು, ಪುದುಚೇರಿಯಲ್ಲಿ ಸೊನ್ನೆ ಸುತ್ತಿದ ಆ ಪಕ್ಷ ಕೇರಳದಲ್ಲಿ ಒಂದು ಸ್ಥಾನ ಪಡೆದದ್ದನ್ನೇ ದೊಡ್ಡ ಸಾಧನೆಯೆಂದು ಹೇಳುತ್ತಿದೆ. ಅದು ಕೇರಳದಲ್ಲಿ ಅತಿ ಹೆಚ್ಚು ಸ್ಥಾನಗಳಿಗೆ ಸ್ಪರ್ಧಿಸಿದ್ದರಿಂದ ಸಹಜವಾಗಿಯೇ ಕಳೆದ ಬಾರಿಗಿಂತ ಅದರ ಶೇಕಡವಾರು ಮತ ವೃದ್ಧಿಯಾಗಿದೆ. ಪಶ್ಚಿಮ ಬಂಗಾಳದಲ್ಲಿ ಬಿ.ಜೆ.ಪಿ. ಪ್ರತಿಶತ ೧೦ರಷ್ಟು ಮತ ಮತ್ತು ಪ್ರಾತಿನಿಧ್ಯ ಪಡೆದಿರುವುದನ್ನು ಎಡ ಪಕ್ಷಗಳು ಗಂಭೀರವಾಗಿ ಪರಿಗಣಿಸಬೇಕು.

ಕಾಂಗ್ರೆಸ್ ಪಕ್ಷ ಹಲವಾರು ರಾಜ್ಯಗಳಲ್ಲಿ ತನ್ನ ಮತದಾರರ ಸಂಖ್ಯೆಯನ್ನು ಹೊಂದಿದ್ದರೂ ಅಧಿಕಾರವನ್ನು ಕಳೆದುಕೊಳ್ಳುತ್ತಿರುವ ಸಂಗತಿ ಮುಂಬರುವ ದಿನಗಳಲ್ಲಿ ಆ ಪಕ್ಷದ ಅಸ್ತಿತ್ವದ ಕುರಿತೇ ಆಲೋಚಿಸಬೇಕಾಗುವಂಥ ಸ್ಥಿತಿಯನ್ನು ಉಂಟುಮಾಡಿದೆ. ಕಾಂಗ್ರೆಸ್ ಪಕ್ಷ ಇಂದು ಮತ್ತೆ ಚೇತರಿಸಿಕೊಳ್ಳಬೇಕಾದರೆ ಅದರ ನೀತಿಯನ್ನು

ಬದಲಿಸಿಕೊಳ್ಳಬೇಕು. ವಿವಿಧ ಹಂತದ ನಾಯಕತ್ವ ಬದಲಾವಣೆಯಿಂದ ಯಾವುದೇ ಪ್ರಯೋಜನವಾಗುವುದಿಲ್ಲ. ೭೦ರ ದಶಕದಲ್ಲಿ ಇಂದಿರಾ ಗಾಂಧಿಯವರು ಕಾಂಗ್ರೆಸ್‌ನಿಂದ ಸಿಡಿದುಹೋದ ಬಲಪಂಥೀಯ ಶಕ್ತಿಗಳನ್ನು ಎದುರಿಸಲು ಎಡಪಂಥದ ಘೋಷಣೆಗಳನ್ನು ತಮ್ಮ ಕಾರ್ಯಕ್ರಮದ ಭಾಗವಾಗಿಸಿಕೊಂಡರು. ಇಂದು ಬಿ.ಜೆ.ಪಿ.ಯ ಕೋಮುವಾದಿ, ಕಾರ್ಪೊರೇಟ್ ಪರ ನೀತಿಯನ್ನು ಎದುರಿಸಬೇಕಾದರೆ ಕಾಂಗ್ರೆಸ್ ೮೦ರ ದಶಕದ ನಂತರ ಅನುಸರಿಸುತ್ತಿರುವ ತನ್ನ ಆರ್ಥಿಕ ನೀತಿಗಳನ್ನು ಕೈಬಿಟ್ಟು ಎಡ ಪಕ್ಷಗಳ ಜೊತೆ ಕೈ ಜೋಡಿಸಬೇಕು. ೨೦೦೪ರ ಯು.ಪಿ.ಎ. ಮೊದಲ ಅವಧಿಯ ಸರಕಾರದ ಅನುಭವ ಈ ಪಾಠವನ್ನು ಕಾಂಗ್ರೆಸ್‌ಗೆ ಕಲಿಸಿದೆ. ಸಾಮಾನ್ಯ ಕನಿಷ್ಠ ಕಾರ್ಯಕ್ರಮದ ಅಡಿಯಲ್ಲಿ ಎಡ ಪಕ್ಷಗಳ ಬೆಂಬಲದಿಂದ ಮಾಡಿದ ಸಾಧನೆಗಳೇ ಅದು ಮತ್ತೊಂದು ಅವಧಿಗೆ ಅಧಿಕಾರಕ್ಕೆ ಬರಲು ಕಾರಣವಾದವು. ಈಗ ಕಾಂಗ್ರೆಸ್ ತನ್ನ ನಡೆಯನ್ನು ಪುನರ್ ವಿಮರ್ಶಿಸಬೇಕು. ಕನಿಷ್ಠ ಸ್ವಾತಂತ್ರ್ಯ ಸಂಗ್ರಾಮದ ಸಂದರ್ಭದ ಕಾಂಗ್ರೆಸ್ ನೀತಿಗಳನ್ನಾದರೂ ನೋಡಬೇಕು.

ಅಸ್ಸಾಂನಲ್ಲಿ ಅಧಿಕಾರ, ಪಶ್ಚಿಮ ಬಂಗಾಳ, ಕೇರಳದಲ್ಲಿ ಪ್ರಾತಿನಿಧ್ಯ ಪಡೆದಿರುವ ಬಿ.ಜೆ.ಪಿ. ಅದನ್ನೇ ವೈಭವೀಕರಿಸುತ್ತಿದೆ. ಪ್ರಾತಿನಿಧ್ಯ ಮತ್ತು ಮತಗಳಿಕೆಯ ಪ್ರಮಾಣ ಬಿ.ಜೆ.ಪಿ.ಯ ನೀತಿಗೆ ಸಿಕ್ಕ ಮಾನ್ಯತೆಗಳಲ್ಲ. ಕೇಂದ್ರದಲ್ಲಿ ಅಧಿಕಾರದಲ್ಲಿದ್ದರೂ ತಮಿಳುನಾಡಿನಲ್ಲಿ ಒಂದು ಸ್ಥಾನವನ್ನೂ ಪಡೆಯಲಾಗದ ತನ್ನ ಸ್ಥಿತಿಯನ್ನು ವಿಮರ್ಶಿಸಿಕೊಳ್ಳುತ್ತಿಲ್ಲ. ಅದರ ಕೋಮುವಾದಿ ನಡೆ, ಜನರನ್ನು ಒಡೆದಾಳುವ ನೀತಿ, ಭಾವುಕ ಸನ್ನಿವೇಶಗಳನ್ನು ಸೃಷ್ಟಿಸಿ ಅದರ ಲಾಭ ಪಡೆವ ವಿಧಾನ ಹೆಚ್ಚು ದಿನ ನಡೆಯುವುದಿಲ್ಲ. ೮೦ರ ದಶಕದಲ್ಲಿ ಹೀಗೇ ಭಾವುಕ ಘೋಷಣೆಗಳನ್ನು ಕೊಟ್ಟು ಅಧಿಕಾರಕ್ಕೆ ಬಂದ ಅಸ್ಸಾಂನ ಎ.ಜಿ.ಪಿ. ಇಂದು ಯಾವ ಹಂತ ತಲುಪಿದೆ ಎಂಬುದು ಗಮನಾರ್ಹ, ಗುಜರಾತಿನಲ್ಲಿ ಪ್ರಶ್ನಾತೀತವಾಗಿದ್ದ ಬಿ.ಜೆ.ಪಿ. ಸ್ಥಳೀಯ ಸಂಸ್ಥೆಗಳಲ್ಲಿ ಸೋಲುತ್ತಿದೆ. ಅಸ್ಸಾಂನಲ್ಲಿ ಕಾಂಗ್ರೆಸ್‌ನ ೧೫ ವರ್ಷಗಳ ಆಡಳಿತಕ್ಕೆ ವಿರೋಧದ ಅಲೆ ಇತ್ತು ಎನ್ನುವುದಾದರೆ ಬಿ.ಜೆ.ಪಿ.ಗೂ ಅಂಥ ಸ್ಥಿತಿ ಕೇಂದ್ರ ಮತ್ತು ರಾಜ್ಯಗಳಲ್ಲಿ ಬಂದೇ ಬರುತ್ತದೆ. ಕರ್ನಾಟಕದಲ್ಲಿ ಅದರ ಪ್ರಯೋಗವೂ ಆಗಿದೆ. ಬಿ.ಜೆ.ಪಿ.ಯ ಕೋಮುವಾದ ಆಧಾರಿತ ಕಾರ್ಯಸೂಚಿ ಮುಂದುವರಿದದ್ದೇ ಆದರೆ, ಅದು ಜನಾಂಗೀಯ ಸಂಘರ್ಷಕ್ಕೆ ಕಾರಣವಾಗುವುದೇ ಅಲ್ಲದೆ, ಆ ಪಕ್ಷ ತನ್ನ ನಾಶಕ್ಕೆ ತಾನೇ ಮುನ್ನುಡಿ ಬರೆಯುವಂತಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಈ ಎಲ್ಲ ಪಾಠಗಳು ಈ ಐದು ರಾಜ್ಯಗಳ ಚುನಾವಣೆಗಳ ಜನಾದೇಶದಲ್ಲಿವೆ. ಆದರೆ ಆ ಪಾಠಗಳ ಅಧ್ಯಯನ ರಾಜಕಾರಣಿಗಳಿಂದ ಆಗಬೇಕು. ಇದೇ ಸಂದರ್ಭದಲ್ಲಿ ಪ್ರಸ್ತುತ ಚುನಾವಣಾ ಪದ್ಧತಿಯ ಕುರಿತೂ ವಿಮರ್ಶೆ ನಡೆಯಬೇಕು.

## ವರ್ಷಗಳು ಉರುಳಿದರೂ ಸಾಧನೆ ಮಾತ್ರ ಸೊನ್ನೆ

**ಯಾ**ವುದೇ ಪತ್ರಿಕೆ ನೋಡಿದರೂ, ಟೆಲಿವಿಷನ್ ವೀಕ್ಷಿಸಿದರೂ ಕೇಂದ್ರ ಹಾಗೂ ರಾಜ್ಯ ಸರಕಾರದ ಸಾಧನೆಗಳದ್ದೇ ಸಮಾಚಾರ. ಪುಟಗಟ್ಟಲೆ ಜಾಹೀರಾತುಗಳು ಪತ್ರಿಕೆಗಳಲ್ಲಾದರೆ, ಟೆಲಿವಿಷನ್‌ನಲ್ಲಿ ಗಂಟೆಗಟ್ಟಲೆ ಚರ್ಚೆ. ಕೇಂದ್ರದಲ್ಲಿ ಮೋದಿ ಸರಕಾರ ಎರಡು ವರ್ಷ ಮುಗಿಸಿದೆ, ರಾಜ್ಯದಲ್ಲಿ ಸಿದ್ದರಾಮಯ್ಯ ಸರಕಾರ ಮೂರು ವರ್ಷ ಮುಗಿಸಿದೆ. ಎರಡೂ ಕಡೆ ಸಾಧನೆಗಳು ಅಷ್ಟಕ್ಕಷ್ಟೆ. ಹೇಳಿಕೊಳ್ಳುವಂಥ ಮಹತ್ತರವಾದ್ದೇನಿಲ್ಲ. ದೇಶದ ಹಲವು ರಾಜ್ಯಗಳಲ್ಲಿ, ರಾಜ್ಯದ ಹಲವು ಜಿಲ್ಲೆಗಳಲ್ಲಿ ತೀವ್ರವಾದ ಬರಗಾಲವಿದ್ದರೂ ಸರಕಾರದ ಸಾಧನೆಗಳನ್ನು ಪ್ರಚುರಪಡಿಸಲು ಕೋಟಿಗಟ್ಟಲೆ ಹಣ ಖರ್ಚು ಮಾಡಲಾಗುತ್ತಿದೆ.

ಮೋದಿ ಸರಕಾರದ ಮೊದಲನೇ ವರ್ಷದಲ್ಲಿ ಅಸಹಿಷ್ಣುತೆ ಪ್ರಮುಖ ವಿಷಯವಾಗಿತ್ತಾದರೆ, ಎರಡನೇ ವರ್ಷದಲ್ಲೂ ಅದೇನೂ ಕಡಿಮೆಯಾಗಲಿಲ್ಲ. ಹೈದರಾಬಾದ್ ವಿಶ್ವವಿದ್ಯಾನಿಲಯದಲ್ಲಿ ದಲಿತ ವಿದ್ಯಾರ್ಥಿ ವೇಮುಲನ ಆತ್ಮಹತ್ಯೆ, ದೆಹಲಿಯ ಜವಹರಲಾಲ್ ನೆಹರೂ ವಿಶ್ವವಿದ್ಯಾನಿಲಯದ ಪ್ರಕರಣಗಳೇ ಸಾಕ್ಷಿ. ಚುನಾವಣೆಗಳ ಕಾಲದಲ್ಲಿ ನೀಡಿದ್ದ ಭರವಸೆಗಳೆಲ್ಲ ಇನ್ನೂ ಕನಸಾಗಿಯೇ ಉಳಿದಿವೆ. ಬಡಜನರ ಸ್ಥಿತಿ ಇನ್ನಷ್ಟು ದುರ್ಭರವಾಗಿದೆ. ಒಂದೇ ಸಮನಾಗಿ ಏರುತ್ತಿರುವ ಬೆಲೆಗಳಿಂದ. ಬೇಳೆಕಾಳುಗಳ ಬೆಲೆ ಮುಗಿಲು ಮುಟ್ಟಿದೆ. ಅಧಿಕಾರಕ್ಕೆ ಬಂದ ಹೊಸದರಲ್ಲಿ ಮೋದಿ ಯಾವತ್ತಿನ ಹಾವಭಾವಗಳಿಂದ ಘೋಷಿಸಿದ 'ಭಾರತದಲ್ಲೇ ತಯಾರಿಸಿ', 'ಸ್ವಚ್ಛ ಭಾರತ' ಮುಂತಾದವು ನಿರರ್ಥಕವಾಗಿವೆ. ಆರ್ಥಿಕ ಕ್ಷೇತ್ರದಲ್ಲಿ ಹಣದುಬ್ಬರ ನಿರೀಕ್ಷಿತ ಮಟ್ಟಕ್ಕಿಂತ ಹೆಚ್ಚಾಗಿದೆ. ರೈತರ ಆತ್ಮಹತ್ಯೆ ಒಂದೇ ಸಮನಾಗಿ ಮುಂದುವರಿಯುತ್ತಿದೆ. ಭಾಜಪ ಸರಕಾರದ ಆಡಳಿತದಲ್ಲಿ ಶ್ರೀಮಂತರು ಮತ್ತು ಬಡವರ ಅಂತರ ಹೆಚ್ಚಾಗುತ್ತಿದೆ. ಸೆಂಟರ್ ಫಾರ್ ಮೀಡಿಯ ಸ್ಟಡೀಸ್ ನಡೆಸಿರುವ ಸಮೀಕ್ಷೆಯ ಪ್ರಕಾರ ಶೇ. ೪೯ರಷ್ಟು ಜನರ ಪರಿಸ್ಥಿತಿಯಲ್ಲಿ ಏನೇನೂ ವ್ಯತ್ಯಾಸವಾಗಿಲ್ಲ, ಬಡತನದಲ್ಲೇ ಬದುಕು ಸಾಗಿಸುತ್ತಿದ್ದಾರೆ. ಇನ್ನೂ ಶೇ. ೧೫ರಷ್ಟು ಜನ ಬಡತನದ ರೇಖೆಗಿಂತ ಕಡಿಮೆ ಮಟ್ಟದಲ್ಲಿದ್ದಾರೆ.

ಸರಕಾರದ ಕಾರ್ಮಿಕ ವಿರೋಧಿ ನೀತಿಯನ್ನು, ಕಾರ್ಪೊರೇಟ್ ಧಣಿಗಳ ಪರ ನೀತಿಯನ್ನು ಟ್ರೇಡ್ ಯೂನಿಯನ್‌ಗಳು ಸಾರ್ವತ್ರಿಕ ಮುಷ್ಕರ ನಡೆಸಿ ವಿರೋಧಿಸಿವೆ. ಇದರಲ್ಲಿ ಸಂಘಪರಿವಾರಕ್ಕೆ ಸೇರಿದ



ತಿಂಗಳ ಪತ್ರಿಕೆ
ಹೊಸತು
ನೆಮ್ಮದಿಯ ನಾಳೆ ನಮ್ಮದು
ನವಕರ್ನಾಟಕ ಪ್ರಕಾಶನ





**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ₹ ೨೦/- |
| ವಾರ್ಷಿಕ ಚಂದಾ | ₹ ೨೫೦/- |
| ಮೂರು ವರ್ಷಕ್ಕೆ | ₹ ೫೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ , ಗಾಂಧಿನಗರ
ಬೆಂಗಳೂರು – ೫೬೦ ೦೦೯
✆ : ೦೮೦-೨೨೨೫೧೩೮೨

ಕೆಂಪೇಗೌಡ ರಸ್ತೆ
ಬೆಂಗಳೂರು – ೫೬೦ ೦೦೯
✆ : ೦೮೦-೨೩೩೦೩೧೦೬

ಕೆ. ಎಸ್. ಆರ್. ರಸ್ತೆ
ಮಂಗಳೂರು – ೫೭೫ ೦೦೧
✆ : ೦೮೨೪-೨೪೪೧೦೧೬

ಶರಾವತಿ ಕಟ್ಟಡ, ಬಲ್ಮಠ
ಮಂಗಳೂರು – ೫೭೫ ೦೦೧
✆ : ೦೮೨೪-೨೪೨೫೧೬೧

ರಾಮಸ್ವಾಮಿ ವೃತ್ತ
ಮೈಸೂರು – ೫೭೦ ೦೨೪
✆ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಕಲಬುರಗಿ – ೫೮೫ ೧೦೨
✆ : ೦೮೪೭೨-೨೨೪೩೦೨

ಯೂನಿಯನ್‌ಗಳೂ ಭಾಗವಹಿಸಿದ್ದುದು ಗಮನಿಸಬೇಕಾದ ಸಂಗತಿ. ಕಾರ್ಮಿಕರ ಭವಿಷ್ಯನಿಧಿ ವಿಚಾರದಲ್ಲಿ ಚೆಲ್ಲಾಟ ನಡೆಸಿ ಸರಕಾರ ಹಿಮ್ಮೆಟ್ಟಬೇಕಾಗಿ ಬಂತು ಒಂದೇ ದಿನದಲ್ಲಿ. ಒಂದು ಕೋಟಿ ಉದ್ಯೋಗ ಸೃಷ್ಟಿಸುವ ಆಶ್ವಾಸನೆ ನೀಡಿದ್ದ ಭಾಜಪ ಎರಡು ವರ್ಷಗಳ ಅವಧಿಯಲ್ಲಿ ಉದ್ಯೋಗ ಹೆಚ್ಚುವುದಕ್ಕಿಂತ ಕಡಿಮೆಯಾಗಿದೆ. ಕೇಂದ್ರದ ಕಾರ್ಮಿಕ ಬ್ಯೂರೋ ೨೦೧೬ರ ಪ್ರಾರಂಭದಲ್ಲಿ ಬಿಡುಗಡೆ ಮಾಡಿರುವ ಸಮೀಕ್ಷೆಯಂತೆ ಆಟೋಮೊಬೈಲ್, ಚರ್ಮ, ಜವುಳಿ, ಮಾಹಿತಿ ತಂತ್ರಜ್ಞಾನ, ಕೈಮಗ್ಗ ಮೊದಲಾದ ಉದ್ಯಮಗಳಲ್ಲಿ ಉದ್ಯೋಗಾವಕಾಶಗಳು ಕಡಿಮೆಯಾಗಿವೆ. ಗೋಮಾಂಸ ನಿಷೇಧ, ಗೋಹತ್ಯೆ ನಿಷೇಧಗಳ ಪರಿಣಾಮವಾಗಿ ದೇಶದಲ್ಲಿ ಚರ್ಮದ ಉದ್ಯಮದಲ್ಲಿ ತೊಡಗಿಕೊಂಡಿದ್ದ ಸಹಸ್ರ ಸಹಸ್ರ ಮಂದಿ ಬೀದಿ ಪಾಲಾಗಿದ್ದಾರೆ. ಕಳೆದೆರಡು ವರ್ಷಗಳಲ್ಲಿ ದೇಶದಲ್ಲಿ ಹೊಸ ದೊಡ್ಡ ಉದ್ಯಮಗಳಾವುವೂ ಪ್ರಾರಂಭವಾಗಿರುವುದು ಕಂಡುಬಂದಿಲ್ಲ.

ಮಾತಿನ ಮೋಡಿಯಿಂದ ಗಳಿಸಿದ ಜನಪ್ರಿಯತೆ ಹೆಚ್ಚುಕಾಲ ಉಳಿಯದು ಎನ್ನುವುದನ್ನು ಮೋದಿ ಸರಕಾರ ಅರಿಯಬೇಕು. ಪ್ರಧಾನಿ ಮೋದಿಯ ನೆಚ್ಚಿನ ಭಂಟ ಹಣಕಾಸಿನ ಸಚಿವ ಅರುಣ್ ಜೇಟ್ಲಿ ಮಂಡಿಸಿದ ಎರಡೂ ಬಜೆಟ್‌ಗಳು ಸಾಮಾಜಿಕ ಕ್ಷೇತ್ರಗಳಲ್ಲಿ ವಿನಿಯೋಗವನ್ನು ಕಡಿತಗೊಳಿಸಿದೆ. ಸಾರ್ವಜನಿಕ ಆರೋಗ್ಯ, ಶಿಕ್ಷಣ ಮುಂತಾದ ಕ್ಷೇತ್ರಗಳಲ್ಲಿ, ಹಾಗೂ ರೈತ ಕುಟುಂಬಗಳಿಗೆ ಕನಿಷ್ಠ ನೂರು ದಿನ ಉದ್ಯೋಗ ನೀಡುವ ಯೋಜನೆಗೆ ವಿನಿಯೋಗವನ್ನು ಕಡಿಮೆ ಮಾಡಿರುವುದೇ ಉದಾಹರಣೆ. ಪಾರ್ಲಿಮೆಂಟ್‌ನಲ್ಲಿ ಬಹುಮತ ಇದ್ದರೂ ಭಾಜಪ ಇನ್ನೂ ಹಿಂದಿನ ಸರಕಾರದ ಅವ್ಯವಹಾರಗಳನ್ನು ಕೆದಕುವುದರಲ್ಲೇ ತೃಪ್ತಿಪಟ್ಟುಕೊಳ್ಳುತ್ತಿದೆ. ಮೋದಿ ಸಂಪುಟದಲ್ಲಿ ನಾಲ್ಕೈದು ಸಚಿವರುಗಳು ಆಪ್ತವಲಯದಲ್ಲಿದ್ದರೆ, ಉಳಿದ ಸಚಿವರಾರೂ ಚಕಾರ ಎತ್ತುವಂತಿಲ್ಲ. ಎಲ್ಲವೂ ಪ್ರಧಾನಿಯ ಕೇಂದ್ರಿತ. ಪ್ರಧಾನಿ ಕಚೇರಿ ಕಣ್ಣುತಪ್ಪಿಸಿ ಯಾವ ಕಾರ್ಯವೂ ನಡೆಯುವಂತಿಲ್ಲ. ಒಂದು ರೀತಿಯಲ್ಲಿ ಏಕವ್ಯಕ್ತಿ ಕೇಂದ್ರಿತ ಆಡಳಿತ ನಡೆಸಲು ಹೊರಟಿದ್ದಾರೆ ಮೋದಿ. ಅದು ಸಂಘಪರಿವಾರದ ಪರಂಪರೆ ಕೂಡ. ಆರೆಸ್ಸೆಸ್ ಸಂಘ ಚಾಲಕ ಹೇಳಿದ್ದೆ ವೇದವಾಕ್ಯ ಇದ್ದ ಹಾಗೆ. ಮೋದಿ ತಿಂಗಳಿಗೊಮ್ಮೆ ಮನ್ ಕಿ ಬಾತ್ ಚಿಂತನೆಗೆ ಗ್ರಾಸ ಭಾಜಪದವರಿಗೆ. ಪಾಲಿಮೆಂಟಿನಲ್ಲಿ ಆಗೊಮ್ಮೆ ಈಗೊಮ್ಮೆ ಭಾಷಣ ಬಿಗಿಯುವುದು ಬಿಟ್ಟರೆ, ಯಾವುದೇ ವಿವಾದಾತ್ಮಕ ಹೇಳಿಕೆಗಳ ವಿಚಾರದಲ್ಲೂ ದಿವ್ಯಮೌನ. ಇದು ಆಡಳಿತದ ವೈಖರಿ ಮೋದಿಯದು.

ಚುನಾವಣೆಗಳಲ್ಲಿ ಸೋಲು ಗೆಲುವು ರಾಜಕೀಯದಲ್ಲಿ ಇದ್ದದ್ದೇ. ಮೋದಿ–ಅಮಿತ್ ಷಾ ಭಾಜಪವನ್ನು ರಾಜ್ಯಗಳಲ್ಲಿ ಅಧಿಕಾರಕ್ಕೆ ತರಲು ನಡೆಸಿರುವ ಪ್ರಯತ್ನ ಮಹತ್ವದ್ದೇನಲ್ಲ. ಆಡಳಿತದಲ್ಲಿರುವ ಪಕ್ಷ ಅದನ್ನು ಬಯಸುವುದು ಸಹಜ. ಆದರೆ ಅಡ್ಡದಾರಿ ಹಿಡಿದಾಗ ನ್ಯಾಯಾಲಯದ ಮಧ್ಯಪ್ರವೇಶ ಅನಿವಾರ್ಯ. ಉತ್ತರಾಖಂಡದ ಪ್ರಕರಣ ಅದಕ್ಕೆ ಸಾಕ್ಷಿ. ಹಾಗೆಯೇ ಮದ್ಯದ ದೊರೆಯ ಪರಾರಿಯೂ ಕೂಡ ಕೇಂದ್ರ ಸರಕಾರಕ್ಕೆ ಕಪ್ಪು ಚುಕ್ಕೆ. ಇನ್ನೂ ಮೂರು ವರ್ಷ ಬಾಕಿ ಇದೆ. ಅದೆಷ್ಟು ಕಪ್ಪು ಹಣ ಹಿಂದಕ್ಕೆ ತರುತ್ತಾರೆ, ಚುನಾವಣೆ ಸಮಯದಲ್ಲಿ ನೀಡಿದ ಭರವಸೆಗಳನ್ನು ಈಡೇರಿಸುತ್ತಾರೆ ನೋಡಬೇಕು.

ರಾಜ್ಯದಲ್ಲಿ ಸಿದ್ದರಾಮಯ್ಯ ಮೂರು ವರ್ಷ ಅಧಿಕಾರದಲ್ಲಿ ಉಳಿದಿರುವುದೇ ವಿಸ್ಮಯ. ಕಾಂಗ್ರೆಸ್ಸಿನ ಪರಂಪರೆಯಲ್ಲಿ. ಮುಂದಿನ ಚುನಾವಣೆಯವರೆಗೆ ಐದು ವರ್ಷ ನಾನೇ ಮುಖ್ಯಮಂತ್ರಿ ಎಂದು ಅದೆಷ್ಟು ಬಾರಿ ಹೇಳಿಕೊಂಡಿದ್ದಾರೊ ಲೆಕ್ಕವಿಲ್ಲ. ಇನ್ನೆರಡು ವರ್ಷ ಕೂಡ ಹಾಗೇ ಮುಗಿದೀತು. ಮತ್ತೆ ಅಧಿಕಾರಕ್ಕೆ ಕಾಂಗ್ರೆಸ್ಸನ್ನು ತರುತ್ತಾರೋ ಇಲ್ಲವೊ ಅದು ಬೇರೆಯದೇ ವಿಷಯ. ಮೂರು ವರ್ಷಗಳಲ್ಲಿ ಸಾಧನೆ ಮಾತ್ರ ಸೊನ್ನೆ. ಉತ್ತಮ ಆಡಳಿತ ನಿರೀಕ್ಷಿಸುತ್ತಿದ್ದ ರಾಜ್ಯದ ಜನರಿಗೆ ನಿರಾಸೆಯಾಗಿದೆ. ನಾಲ್ಕಾರು ಜನಪ್ರಿಯ ಯೋಜನೆಗಳನ್ನು ಬಿಟ್ಟರೆ ಬೇರೇನೂ ಇಲ್ಲ. ಅಷ್ಟೇ ಭ್ರಷ್ಟಾಚಾರದ ಆಪಾದನೆಗಳೂ ಇವೆ ಮುಖ್ಯಮಂತ್ರಿಗಳೂ ಸೇರಿದಂತೆ. ಈಚೆಗೆ ನಡೆದ ಪಂಚಾಯಿತಿ ಚುನಾವಣೆಗಳಲ್ಲಿ ಕಾಂಗ್ರೆಸ್ಸಿಗೆ ನಿರೀಕ್ಷಿತ ಯಶಸ್ಸೇನೂ ದೊರೆಯಲಿಲ್ಲ. ಸಂಪುಟ ಪುನಾರಚನೆ, ಆಡಳಿತವನ್ನು ಚುರುಕುಗೊಳಿಸುವುದು, ನಿಗಮ ಮಂಡಳಿಗಳಿಗೆ ನೇಮಕಾತಿ ಎಲ್ಲವೂ ಮುಂದೆ ಹೋಗುತ್ತಿದೆ. ಪ್ರಶ್ನೆಪತ್ರಿಕೆ ಸೋರಿಕೆ, ರಾಜ್ಯದಲ್ಲಿ ಬರಗಾಲದ ಪರಿಸ್ಥಿತಿ, ರೈತರ ಆತ್ಮಹತ್ಯೆ ಪ್ರಕರಣಗಳು ಆಡಳಿತದ ನಿಷ್ಕ್ರಿಯತೆಗೆ ನಿದರ್ಶನವಾಗಿವೆ. ಕಾಂಗ್ರೆಸ್ಸಿನಲ್ಲಿ ಯಾವತ್ತೂ ಇರುವ ಒಳಜಗಳ, ಗುಂಪುಗಾರಿಕೆ, ದಲಿತ ಮುಖ್ಯಮಂತ್ರಿಗಾಗಿ ಹಂಬಲ ಮುಂತಾದುವು ಆಡಳಿತವನ್ನು ಮತ್ತಷ್ಟು ಶಿಥಿಲಗೊಳಿಸಿವೆ. ಮೂರು ವರ್ಷಗಳಲ್ಲಿ ಲೋಕಾಯುಕ್ತ ಸಂಸ್ಥೆಯನ್ನು ನಿರ್ನಾಮ ಮಾಡಿದ್ದು, ಲೋಕಾಯುಕ್ತ ಪೊಲೀಸರ ಮೇಲೆ 'ಎಸಿಬಿ' ಎಂಬ ವ್ಯವಸ್ಥೆ ತಂದಿದ್ದೇ ಸಾಧನೆ ಎನ್ನಬೇಕು.

---

*(ಈ ತಿಂಗಳು : ೩ನೇ ಪುಟದಿಂದ)*

ಶ್ರೀಯುತರು ಮುಂದಿನ ಏಪ್ರಿಲ್–ಮೇ ತಿಂಗಳುಗಳಲ್ಲಿ ರಾಜಸ್ತಾನದ ಮರಳುಗಾಡಿಗೆ ಹೋಗಿ ದಯವಿಟ್ಟು ಅಲ್ಲಿಯೂ ಯಜ್ಞ ಮಾಡಲಿ, ಮೇಕೆ ಮಾಂಸದ ಬದಲು ಒಂಟೆ ಮಾಂಸ ತಿನ್ನಲಿ, ಒಂದು ಪೀಪಾಯಿ ಸೋಮರಸ ಕುಡಿಯಲಿ. ಮಳೆ ಸುರಿಯುತ್ತದೆಯೋ ಭಟ್ಟರು ಬೆವೆತು ಓಡಿಬರುತ್ತಾರೋ ನೋಡೋಣ.

* * *

ಅರುಣ್ ಶೌರಿ ಒಬ್ಬ ಕೋಪಗೊಂಡ ಮುದುಕ. ಪ್ರಧಾನಿ ಮೋದಿಗೆ ಸರ್ಕಾರ ನಡೆಸಲು ಬರುವುದಿಲ್ಲ, ಸರ್ಕಾರದ ಮೇಲೆ ಹಿಡಿತವಿಲ್ಲ, ಒಬ್ಬ ಸರ್ವಾಧಿಕಾರಿಯಂತೆ ವರ್ತಿಸುತ್ತಾರೆ, ಯಾವೊಂದು ಆಶ್ವಾಸನೆಯನ್ನೂ ಪೂರೈಸಿಲ್ಲ, ಕೇವಲ 'ಬೂಸಿ ಮಾಸ್ಟರ್' ಆಗಿದ್ದಾರೆ, ಇತ್ಯಾದಿ ಮಾತುಗಳ ಬಿರುಗಾಳಿಯನ್ನೆಬ್ಬಿಸಿದ್ದಾನೆ ಆತ. ಅವರ ಮಾತಿನಲ್ಲಿ ಬೇಕಾದಷ್ಟು ಸತ್ಯವಿದೆ. ವಿದೇಶಗಳಿಂದ ಕಪ್ಪುಹಣ ತರುವುದಾಗಿ ಕೂಗಾಡಿ ಈವರೆಗೆ ಒಂದು ರೂಪಾಯಿಯನ್ನು ಸಹ ತಂದಿಲ್ಲವೆಂಬುದನ್ನು ಶೌರಿ ಹೇಳಿಲ್ಲ, ಆದರೆ ಜನಕ್ಕೆ ಅದು ತಿಳಿದಿದೆ. ಅಪರೂಪಕ್ಕೊಮ್ಮೆ ಶೌರಿ ಸತ್ಯವನ್ನು ಬಿಚ್ಚಿಟ್ಟಾಗ ಅವರ ಪಕ್ಷದಲ್ಲಿ ಒಂದು ಟೀಕೆಯೂ ಬರಲಿಲ್ಲ. ಸಮರ್ಥನೆಯಂತೂ ಇಲ್ಲವೇ ಇಲ್ಲ. ಆತ ಮತ್ತು ಆತನ ಮಾತು ನಗಣ್ಯವೆಂಬಂತೆ ಮಾಧ್ಯಮಗಳೂ ಸಹ ತುಟಿಪಿಟಕ್ಕೆನ್ನಲಿಲ್ಲ. ಪರಮೋಚ್ಚ ನಾಯಕರನ್ನು ಮೆಚ್ಚಿಸುವ ವಿಧಾನ ಇದು. ಇಷ್ಟು ದಿನ ಬೇಕಾಯಿತೆ ಶೌರಿ ಅವರಿಗೆ ಒಂದು ಸರಳ ಸತ್ಯ ತಿಳಿಯಲು ? ಅವರಿಗೆ ಮುನಿಸು ಬರಲು ಎರಡು ಕಾರಣಗಳಿವೆ : (ಅ) ಅವರಿಗೆ ಈವರೆಗೆ ಪ್ರಧಾನಿಯು ಯಾವ ಅಧಿಕಾರ ಸ್ಥಾನವನ್ನೂ ನೀಡಿಲ್ಲ, ಎಂದೂ ಯಾವ ಸಲಹೆಯನ್ನೂ ಪಡೆಯಲಿಲ್ಲ. ಸಾರ್ವಜನಿಕ ಉದ್ದಿಮೆಗಳನ್ನು ಖಾಸಗೀಕರಿಸಿ ತಮ್ಮ ಜೊತೆಯ ಮಂತ್ರಿಗಳನೇಕರಿಗೆ ಹಣದ ಮಳೆ ಸುರಿಸಿದ ಶೌರಿ ಈಗ ಲೆಕ್ಕಕ್ಕೇ ಇಲ್ಲ. ಇಂತಹ ಅವಗಣನೆಯನ್ನು ಆತ ಹೇಗೆ ಸಹಿಸಿಯಾನು ? (ಆ) ಡಾ॥ ಬಾಬಾಸಾಹೇಬ್ ಅಂಬೇಡ್ಕರರನ್ನು "ಸುಳ್ಳು ದೇವತೆ" ಎಂದು ಮೂದಲಿಸಿ ದೊಡ್ಡ ಗ್ರಂಥವನ್ನೇ ರಚಿಸಿದ ಮಹಾಪಂಡಿತ ಈ ಶೌರಿ. ಆ ಸುಳ್ಳು ಸರಮಾಲೆಗಳ ಪುಸ್ತಕ ಪ್ರಕಟವಾದಾಗ ಆರೆಸ್ಸೆಸ್ ಶೌರಿಯನ್ನು ಹೊಗಳಿದ್ದುದುಂಟು. ಶೌರಿ ಒಬ್ಬ ಮಹಾನ್ ವಿಮರ್ಶಕನೆಂಬ ಬಿರುದು ಪಡೆದದ್ದೂ ಉಂಟು. ಆದರೆ ಅದೇ ಡಾ॥ ಅಂಬೇಡ್ಕರರನ್ನು ಈಗ ಮೋದಿ ಮತ್ತು ಮೋಹನ ಭಾಗವತರು ಹಿಗ್ಗಾಮುಗ್ಗಾ ಪ್ರಶಂಸಿಸುತ್ತಿದ್ದಾರೆ, ಅವರ ಪಟಕ್ಕೆ ಹಾರ ಹಾಕಿ ಪೂಜಿಸಿದ್ದಾರೆ ಮತ್ತು ಅವರ ದೊಡ್ಡ ಪ್ರತಿಮೆಯನ್ನು ಕಡೆಸಿ ಪ್ರತಿಷ್ಠಾಪಿಸುವುದಾಗಿ ಮೋದಿ ಘೋಷಿಸಿದ್ದಾರೆ. "ಮಹಾನ್ ಚರಿತ್ರಕಾರ" ಶೌರಿ ಈಗ ಯಾವ ಸಿದ್ಧಾಂತಿಯ ಪಟ್ಟವನ್ನೂ ಪಡೆಯದೆ ಕಾಲಿನ ಕಸವಾಗಿ ಹೋಗಿದ್ದಾರೆ. ಅಂದು ಅಂಬೇಡ್ಕರ್ ಬೇಕಿರಲಿಲ್ಲ, ಆದರೆ ಇಂದು ದಲಿತರ ಬೆಂಬಲ ಬಹಳ ಅಗತ್ಯವಿದೆಯಾದ್ದರಿಂದ ಮೋದಿ ತಿಪ್ಪರಲಾಗ ಹಾಕಿ ಅಂಬೇಡ್ಕರರಿಗೆ ದೇವತ್ವದ ಕಾಂತಿಯನ್ನು ಕರುಣಿಸಿದ್ದಾರೆ. ಕನ್ನಡದ 'ಉತ್ಥಾನ' ಮಾಸಪತ್ರಿಕೆಯೂ ಸೇರಿದಂತೆ ಆರೆಸ್ಸೆಸ್ ಎಲ್ಲ ಭಾಷೆಗಳಲ್ಲೂ ಅಂಬೇಡ್ಕರ್ ವಿಶೇಷಾಂಕ ಹೊರತಂದು ಹಿಂದಿನ ಪಾಪ ತೊಳೆದುಕೊಳ್ಳಲು ಯತ್ನಿಸಿದೆ. ಮಾನ್ಯೆ ಮಾಯಾವತಿಯವರು ಇದನ್ನು ಕುರಿತು

ಯಾವ ಅಭಿಪ್ರಾಯವನ್ನು ಪ್ರಕಟಿಸಿಲ್ಲದಿರುವುದು ಮತ್ತು ಕನ್ಹಯ್ಯ ದಲಿತನಾಗಿಲ್ಲದಾಗ ದಲಿತರ ಸಮಸ್ಯೆಗಳ ವಿಶ್ಲೇಷಣೆಗೆ ತೊಡಗುವುದು ಅಪ್ರಕೃತವೆಂಬ ಅರ್ಥ ಬರುವ ಮಾತುಗಳನ್ನು ಹೇಳಿರುವುದು ಅವರಿಗೆ ಭವಿಷ್ಯದ ಲೆಕ್ಕಾಚಾರದ ಬಗೆಗಿನ ಆಸಕ್ತಿಯ ಸೂಚಕವಾಗಿದೆ. ಏನೇ ಇರಲಿ, ವ್ಯಕ್ತಿಗತ ಅಸಮಾಧಾನವು ಅರುಣ್ ಶೌರಿಯ ಮಾತಿನಲ್ಲಿ ಸತ್ಯದ ಛಾಯೆಯನ್ನು ಬಿಂಬಿಸಿರುವುದು ಸ್ವಾಗತಾರ್ಹ.

* * *

ನಮ್ಮ ರಾಜ್ಯದ ಮತ್ತು ದೇಶದ ವೈದ್ಯಕೀಯ ಶಿಕ್ಷಣದಲ್ಲಿ ಅಪಾರ ಮಾರ್ಪಾಟುಗಳು ನಡೆಯಲಿವೆ. ಅದಕ್ಕೆ ಆ ದೇಶವು ಸರ್ವೋಚ್ಚ ನ್ಯಾಯಾಲಯದಿಂದ ಬಂದಿದೆ. ಸರ್ವೋಚ್ಚ ನ್ಯಾಯಾಲಯಕ್ಕೆ ಕಡಿವಾಣವೆಂಬುದಿಲ್ಲ. ದೇಶದ ವಿದ್ಯಾರ್ಥಿಗಳ ಹಕ್ಕು ರಕ್ಷಣೆಗೆ ತನ್ನಲ್ಲಿ ಪರಮೌಷಧಿ ಇದೆಯೆಂದು ಭಾವಿಸಿ ಈಗ ದೇಶಕ್ಕೆಲ್ಲಾ ಒಂದೇ ಪ್ರವೇಶ ಪರೀಕ್ಷೆಯನ್ನು ವಿಧಿಸಿದೆ. ಅದು ಅನುಲ್ಲಂಘನೀಯ. ನೂರು ಕೋಟಿ ಜನರಿರುವ ದೇಶದಲ್ಲಿ ಒಂದು ಪರೀಕ್ಷೆಯನ್ನು ಇಡೀ ದೇಶಕ್ಕೆ ವಿಧಿಸುವಂತಹ ಕ್ರೂರ ಕೇಂದ್ರೀಕರಣವು ಅಸ್ವೀಕಾರಾರ್ಹವಾದ್ದು. ವಿದ್ಯಾರ್ಥಿಗಳ ಮತ್ತು ಪೋಷಕರ ಮಾನಸಿಕ ಆರೋಗ್ಯ ಇದರಿಂದಾಗಿ ಆಗಲೇ ಕ್ಷೀಣಿಸಿದೆ. ಮುಂದೆ ಅವರ ಆರ್ಥಿಕ ಆರೋಗ್ಯಕ್ಕೂ ಪೆಟ್ಟು ಬೀಳಲಿದೆ.

ನಮ್ಮ ರಾಜ್ಯದ ಸರ್ಕಾರಿ ಸೀಟುಗಳಲ್ಲಿ ಇಂತಿಷ್ಟನ್ನು ಹೊರರಾಜ್ಯಗಳಿಗೆ ನೀಡಬೇಕೆಂಬ ಆದೇಶ ಒಂದು ಕಡೆ, ನಮ್ಮ ರಾಜ್ಯದ ವಿದ್ಯಾರ್ಥಿಗಳು ಬೇರೆ ರಾಜ್ಯಗಳಿಗೆ ಹೋಗಿ ವ್ಯಾಸಂಗ ಮಾಡಬೇಕಾಗುವ ಅನಿವಾರ್ಯತೆ ಇನ್ನೊಂದು ಕಡೆ. ಖಾಸಗಿ ವೈದ್ಯಕೀಯ ಕಾಲೇಜುಗಳು ಯಾವ ಆಧಾರದ ಮೇಲೆ ವಿದ್ಯಾರ್ಥಿಗಳ ಆಯ್ಕೆ ಮಾಡಿಕೊಳ್ಳುತ್ತವೋ ಈಗಿನ್ನೂ ಸ್ಪಷ್ಟವಾಗಿಲ್ಲ. ಕೇಂದ್ರೀಕೃತ ಪ್ರವೇಶ ಪರೀಕ್ಷೆಯು ಇನ್ನೆರಡು ತಿಂಗಳುಗಳ ನಂತರ. ಆಮೇಲೆ ವಿದ್ಯಾರ್ಥಿಗಳ ದಾಖಲಾತಿ, ಅಂದರೆ ಸೆಪ್ಟೆಂಬರ್ ಮಧ್ಯಭಾಗಕ್ಕೆ ಮುನ್ನ ವೈದ್ಯಕೀಯ ಕಾಲೇಜುಗಳಲ್ಲಿ ಬೋಧನೆ ಆರಂಭವಾಗುವುದಿಲ್ಲ. ಮೇ ತಿಂಗಳಲ್ಲಿ ಸರ್ವೋಚ್ಚ ನ್ಯಾಯಾಲಯವು ಇಂತಹ ತೀರ್ಪು ನೀಡಿ ಅದನ್ನು ಈ ಕ್ಷಣದಲ್ಲಿಯೇ ಜಾರಿಗೊಳಿಸ ಬೇಕೆಂದು ಆದೇಶಿಸಿರುವುದು ಗೊಂದಲದ ಗೂಡಿನ ಸೃಷ್ಟಿಯೇ ಆಗಿದೆ.

* * *

ರಾಜಕೀಯ ಚತುರ ಮಾನ್ಯ ಎಚ್. ಡಿ. ದೇವೇಗೌಡರು ಮಾಜಿ ಪ್ರಧಾನಿ. ಅವರು ಅಡ್ಡಂಬುಡಿಕೆ ರಾಜಕೀಯದಲ್ಲಿ ವಿಶ್ವಾಸ ಹೊಂದಿದ್ದಾರೆ. ಯಾವ ನೀತಿ–ನಿಯಮ ಮತ್ತು ಸಿದ್ಧಾಂತಕ್ಕೂ ಕಟ್ಟುಬೀಳದ ಈ ನಾಯಕರು ಯಾವಾಗ ಯಾರ ಜೊತೆ ಮೈತ್ರಿ ಬೆಳೆಸಿ ಅಧಿಕಾರ ಸವಿಯಬೇಕೆಂದು ತಿಳಿಯುವ ಪ್ರಜ್ಞೆಯನ್ನು ವಿಶಾಲವಾಗಿ ರೂಢಿಸಿಕೊಂಡಿದ್ದಾರೆ. ಬೆಂಗಳೂರು ಮಹಾನಗರಪಾಲಿಕೆಯಲ್ಲಿ ಕಾಂಗ್ರೆಸ್ ಸಖ್ಯ, ಬೆಂಗಳೂರು ಮತ್ತು ತುಮಕೂರು ಜಿಲ್ಲಾ ಪಂಚಾಯಿತಿಗಳಲ್ಲಿ ಬಿಜೆಪಿ ಸಖ್ಯ ಅವರಿಗೆ ತಮಾಷೆಯಾಗಿ ಕಾಣುವುದಿಲ್ಲ. ಅವರು ಪ್ರಧಾನಿಯಾಗಿ ಇನ್ನಷ್ಟು ಕಾಲ ಉಳಿದಿದ್ದರೆ ಅಡ್ಡಂಬುಡಿಕೆ ನೀತಿಯನ್ನು ವಿದೇಶಾಂಗ ವ್ಯವಹಾರಗಳಲ್ಲೂ ಜಾರಿಗೆ ತಂದುಬಿಡುತ್ತಿದ್ದರೇನೋ ! ಪುತ್ರವಾತ್ಸಲ್ಯವು ಅವರನ್ನೊಮ್ಮೆ ಭಾಜಪದ ಖಾಸಾ ಸ್ನೇಹಿತನನ್ನಾಗಿಸುತ್ತದೆ, ಇನ್ನೊಮ್ಮೆ ಕಟ್ಟಾ ವಿರೋಧಿಯನ್ನಾಗಿಸುತ್ತದೆ. ಕುದುರೆ ರಾಮಸ್ವಾಮಿ, ವಿಜಯ ಮಲ್ಯ, ರಾಜೀವ ಚಂದ್ರಶೇಖರರಂತಹ "ಮಹಾನ್ ಮುತ್ಸದ್ದಿಗಳು" ರಾಜ್ಯಸಭೆಯಲ್ಲಿ ಸ್ಥಾನ ಗಳಿಸಲು ಮಾನ್ಯ ದೇವೇಗೌಡರ ಪಾದಸೇವೆಯನ್ನು ಭರ್ಜರಿಯಾಗಿ ಮಾಡಿದ್ದರೆಂಬುದು ನಮ್ಮ ಮಾಜಿ ಪ್ರಧಾನಿಯವರ ಮನಸ್ಸನ್ನು ಎಳ್ಳಷ್ಟೂ ಕಲಕಿಲ್ಲ. ರಾಜಕೀಯದಲ್ಲಿ ಸ್ಥಿತಪ್ರಜ್ಞನೆಂದರೆ ಹೀಗಿರಬೇಕೆಂಬ ಮಾದರಿಯನ್ನವರು ಜನತೆಯ ಮುಂದಿಟ್ಟಿದ್ದಾರೆ ! ಹಾಲಿ ಪ್ರಧಾನಿಯು ಮಾಜಿ ಪ್ರಧಾನಿಯ ವಿಶಿಷ್ಟ ಗುಣಗಳನ್ನು ಅರಗಿಸಿಕೊಂಡು ನೂತನ ಸ್ನೇಹಮಯ ರಾಜಕೀಯ ಸಂಬಂಧಗಳನ್ನು ಬೆಳೆಸಿಕೊಳ್ಳಲು ಅಡ್ಡಿಯಿಲ್ಲ.

* * *

ಹಿಂದೆ ಅರುಣ್ ಶೌರಿ ಮಾಡುತ್ತಿದ್ದ ಹೀನ ಕೆಲಸವನ್ನು ಈಗ ಕೇಂದ್ರ ಮಂತ್ರಿಗಳಾದ ಅನಂತಕುಮಾರ್ ಮತ್ತು ನಿತಿನ್ ಗಡ್ಕರಿಯವರಿಗೆ ವಹಿಸಲಾಗಿದೆ. ಸಾರ್ವಜನಿಕ ಉದ್ದಿಮೆಗಳನ್ನು ಮುಚ್ಚಿ, ಆ ಉದ್ಯಮಗಳ ಭೂಮಿಯನ್ನು ಖಾಸಗಿಯವರಿಗೆ ದಾನ ಮಾಡಿ, ಇಲ್ಲವೆ ಇನ್ನಾವುದಾದರೂ ಪರ್ಯಾಯವನ್ನು ಗುರುತಿಸಿ, ಯೋಜನೆಯನ್ನು ಸಿದ್ಧಗೊಳಿಸಲು ಅನಂತಕುಮಾರ್ ಮತ್ತು ನಿತಿನ್ ಗಡ್ಕರಿ ನೇಮಿಸಲ್ಪಟ್ಟಿದ್ದಾರೆ. ಇದೇನೂ ಆಪಾದನೆಯಲ್ಲವೆಂಬುದು ಪತ್ರಿಕಾ ವರದಿಗಳನ್ನು ಗಮನಿಸುತ್ತಿರುವವರಿಗೆ ಸುಲಭವಾಗಿ ತಿಳಿಯುತ್ತದೆ. ಸಾರ್ವಜನಿಕ ಆಸ್ತಿಯ ಖಂಡನೀಯ ಲೂಟಿ ಇದೆಂದು ಹೇಳಿದರೆ ತಪ್ಪಾಗಲಾರದು.

ಸಮಾಚಾರ ಸ್ಥೂಲವಾಗಿ ಹೀಗಿದೆ : ನಮ್ಮ ಅನೇಕ ಸಾರ್ವಜನಿಕ ಉದ್ದಿಮೆಗಳು ನಿರೀಕ್ಷೆಗೆ ತಕ್ಕಂತೆ ಲಾಭ ಗಳಿಸುತ್ತಿಲ್ಲ. ಲಾಭ ಗಳಿಸುವಂತೆ ಮಾಡಲು ಯಾವ ಪ್ರಯತ್ನ ನಡೆದಿದೆಯೋ ತಿಳಿಯದು, ಆದರೆ ಅವೆಂದೂ ಲಾಭ ಗಳಿಸಲಾರವೆಂಬ ತೀರ್ಮಾನಕ್ಕೆ ಕೇಂದ್ರ ಸರ್ಕಾರವು ಬಂದಿದೆ. ಹಾಗೇನಾದರೂ ಅವಕ್ಕೆ ಜೀವ ತುಂಬಲು ಸಾಧ್ಯವೆ ಎಂಬುದನ್ನು ಪರೀಕ್ಷಿಸಲು ಕೇಂದ್ರ ಸಚಿವ ಸಂಪುಟದ ಇಬ್ಬರು ಸಚಿವರಿಗೆ ಜವಾಬ್ದಾರಿ ನೀಡಲಾಗಿದೆ. ಅವರಿಬ್ಬರೂ ಇನ್ನೂ ಅಂತಿಮ ತೀರ್ಮಾನ ಪ್ರಕಟಿಸಿಲ್ಲ, ಆದರೆ ಹೇಗೆ ಮುಂದಡಿ ಇಡಬಹುದೆಂಬ ಸ್ಥೂಲ ಸೂಚನೆ ನೀಡಿದ್ದಾರೆ. ಇಂತಿಷ್ಟು ಹಣವನ್ನು ಬಂಡವಾಳವನ್ನಾಗಿ ನೀಡಿ ಈ "ಸೋಲುತ್ತಿರುವ" ಸಾರ್ವಜನಿಕ ಉದ್ದಿಮೆಗಳಿಗೆ ಪುನಶ್ಚೇತನ ನೀಡಬಹುದಲ್ಲವೇ ಎಂಬುದು ಈ ಸಚಿವದ್ವಯರ ಒಂದು ಚಿಂತನಾಲಹರಿ. ಆದರೆ ಬಂಡವಾಳವನ್ನು ಒದಗಿಸುವುದು ಹೇಗೆ ? ಸೊರಗುತ್ತಿರುವ ಈ ಉದ್ದಿಮೆಗಳ ಬಳಿ ಬೇಕಾದಷ್ಟು ಭೂಮಿ ಇದೆ. ಉದಾಹರಣೆಗೆ, ಬೆಂಗಳೂರಿನ ಎಚ್‌ಎಂಟಿ, ಋಷಿಕೇಶದ ಆ್ಯಂಟಿಬಯೊಟಿಕ್ಸ್, ಇತ್ಯಾದಿ. ಅವುಗಳ ಒಂದಂಶದ ಭೂಮಿಯನ್ನು ಮಾರಿದರೆ ಸಾಕಷ್ಟು ಹಣ ಬರುತ್ತದೆ, ಅದನ್ನು ಈ ಉದ್ದಿಮೆಗಳಿಗೆ ಹೊಸ ಬಂಡವಾಳದ ರೂಪದಲ್ಲಿ ಕೊಡಬಹುದು. ಅಷ್ಟು ಬಂಡವಾಳದಿಂದ ಯಾವ ಸಾರ್ವಜನಿಕ ಉದ್ದಿಮೆಗಳಿಗೆ ಜೀವ ತುಂಬಲು ಸಾಧ್ಯವೆಂಬುದನ್ನು ಪರಾಮರ್ಶಿಸಿದಾಗ, ಅಷ್ಟೇ ಬಂಡವಾಳದಿಂದ ಪುನಶ್ಚೇತನವು ಸಾಧ್ಯವಾಗದೆಂದು ತೋರಿದರೆ ಅಂತಹ ಉದ್ದಿಮೆಯನ್ನು ಮುಚ್ಚಿ ಅದರ ಭೂಮಿಯನ್ನೆಲ್ಲಾ ಸರ್ಕಾರ ಪಡೆಯಬಹುದು ಮತ್ತು ಮುಂದೊಂದು ದಿನ ಅದನ್ನು ಪುಡಿಕಾಸಿನ ಲೆಕ್ಕದಲ್ಲಿ ಯಾವುದಾದರೂ ದೇಶಭಕ್ತರಿಗೆ ಮಾರಬಹುದು. ಋಷಿಕೇಶದ ಭೂಮಿಯನ್ನು ಪಡೆಯಲು ಯೋಗಿ ರಾಮದೇವ್ ಈಗಾಗಲೆ ತುದಿಗಾಲಲ್ಲಿ ನಿಂತಿದ್ದಾರೆ. ಬೇರೆಡೆಗಳಲ್ಲೂ ಭೂಮಿಗೆ ಯಾವನೋ ಕಂತ್ರಿ ಡೆವಲಪರ್ ಮುಗಿಬೀಳುವುದು ಖಚಿತ.

ಒಟ್ಟಿನಲ್ಲಿ ಸಾರ್ವಜನಿಕ ಉದ್ದಿಮೆಗಳನ್ನು ನಾಶಮಾಡಿ, 'ಮೇಕ್ ಇನ್ ಇಂಡಿಯಾ' ಎಂಬ ಅಪ್ರತಿಮ ಅಭಿವೃದ್ಧಿ ಸೂತ್ರಕ್ಕೆ ಇಂಬುನೀಡಬೇಕೆಂಬ ಉದ್ದೇಶವು ತೆರೆಮರೆಯಲ್ಲಿ ಗೋಚರಿಸುತ್ತಿದೆ. ದುಡಿಯುವ ಜನ ಇದರ ಪೂರ್ವಾಪರಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಸಾರ್ವಜನಿಕ ಸಂಪತ್ತನ್ನು ಸಾರ್ವಜನಿಕ ಹತೋಟಿಯಲ್ಲಿಯೇ ಇರುವಂತೆ ಮಾಡಲು ಮುಂದಾಗಬೇಕಾಗಿದೆ. ಭಾರತಮಾತಾ ಕಿ ಜೈ ಎಂದು ಏಕಕಂಠದಿಂದ ಘೋಷಿಸಲು ಇದೊಂದೇ ಸೂಕ್ತವಾದ ಕ್ರಮ.

* * *

ಶ್ರೀ ಸ್ಕ್ವೇರ್ ರವಿಶಂಕರ ಗೊತ್ತಲ್ಲ ? ಆತನನ್ನು ಕೆಲವರು ಗುರೂಜಿ ಎನ್ನುತ್ತಾರೆ. ಆತ ಎಂತಹ ಖದೀಮ (ಶಬ್ದಕೋಶದಲ್ಲಿ ಇದರರ್ಥ 'ಪ್ರಚಂಡ' ಎಂದು) ಎಂಬುದನ್ನರಿಯಲು ಎರಡು ಈಚಿನ ಸಂಗತಿಗಳನ್ನು ತಿಳಿಯಬೇಕು : (ಅ) ಯಮುನಾ ನದಿಯ ಪಾತ್ರದಲ್ಲಿ ಈತ ವಿಶ್ವಸಂಸ್ಕೃತಿಯೆಂಬ ತಮಾಷೆಯನ್ನು ಆಯೋಜಿಸಿದ್ದ. ರಾಷ್ಟ್ರೀಯ ಹಸಿರು ಮಂಡಲಿಯು ಅದಕ್ಕೆ ಆಕ್ಷೇಪವೆತ್ತಿ ಕೋಟಿಗಟ್ಟಲೆ ದಂಡ ವಿಧಿಸಿತು. ಕಾರ್ಯಕ್ರಮಕ್ಕೆ ಮುಂಚೆ ಈತ ಇಪ್ಪತ್ತೈದು ಲಕ್ಷ ರೂಪಾಯಿ ಕಟ್ಟಿದ. ಆಮೇಲೆ ಒಂದು ಕಾಸನ್ನೂ ಕೊಡಲಿಲ್ಲ. ಕೊಡುವುದೂ ಇಲ್ಲವೆಂದು ತಿಳಿಸಿದ್ದಾನೆಂದು ವರದಿ. ಆತನನ್ನು ಕೇಳುವವರುಂಟೆ ? ಕರಿಗಡ್ಡ ಮತ್ತು ಎಳಸು ಮಾತಿನ ಮೋಡಿ ಅಷ್ಟು ಪ್ರಬಲವಿದೆ. ಇಂತಹ ಪಟಿಂಗನಿಗೆ ಮೋದಿ ಸರ್ಕಾರ ಪದ್ಮವಿಭೂಷಣ ಪದಕ ನೀಡಿದೆ ! (ಆ) ತನ್ನ ಕಾಣಿಕೆಯು ವಿಶ್ವಕ್ಕೆಲ್ಲಾ ಸಂದಿದೆಯೆಂದು ಭ್ರಮಿಸುವ ಈ ಮಹಾತ್ಮ ಈಚೆಗೆ ಒಂದು ಹೇಳಿಕೆ ನೀಡಿದ್ದರು : ಸ್ವೀಡನ್ನಿನ ನೊಬೆಲ್ ಪಾರಿತೋಷಕ ಸಮಿತಿಯು ಈತನಿಗೆ ನೊಬೆಲ್ ಶಾಂತಿ ಪದಕ ಕೊಡಮಾಡುವ ಸಲುವಾಗಿ ದೂರವಾಣಿಯ ಮೂಲಕ ಕೇಳಿತಂತೆ.

ಈತ ಅದನ್ನು ಶಾಂತಚಿತ್ತದಿಂದ ನಿರಾಕರಿಸಿದರಂತೆ. ಇದು ಅಪ್ಪಟ ಸುಳ್ಳು. ನೊಬೆಲ್ ಸಮಿತಿ ಈವರೆಗೆ ಯಾರನ್ನೂ ಪೂರ್ವ ಒಪ್ಪಿಗೆಗಾಗಿ ಸಂಪರ್ಕಿಸಿಲ್ಲ. ಸಂಪರ್ಕಿಸದಿರುವುದು ಅದರ ಪದ್ಧತಿ. ನಿರಾಕರಣೆಯು ಘೋಷಣೆಯ ನಂತರವೇ ಆಗಬೇಕು. ಸಾರ್ತ್ರ್ ಅಂಥವರು ಹಾಗೆ ಮಾಡಿದ್ದರು. ನಮ್ಮ ಶ್ರೀ ಸ್ಕ್ವೇರ್ ಲಾತೂರಿಗೆ ನೀರು ಕೊಡುವುದಾಗಿ ಹೇಳಿ ಅಲ್ಲಿಗೆ ಹೋಗಿದ್ದಾಗ ಬಹಿರಂಗ ಮಾಡಿದ್ದ ಸುದ್ದಿ ತನಗೆ ನೊಬೆಲ್ ಪಾರಿತೋಷಕ ಕೊಡಲಿದ್ದರೆಂದು !

* * *

ಸುಬ್ರಮಣ್ಯಸ್ವಾಮಿ ಭಾಜಪ ಸರಕಾರದ 'ಸ್ಟಾರ್ಮ್‌ಟ್ರೂಪರ್,' ಶುದ್ಧ ಕನ್ನಡದಲ್ಲಿ ಹೇಳ ಬೇಕೆಂದರೆ 'ಮುಂದಳದಲ್ಲಿರುವ ಯೋಧ.' ನೆಹರು ಕುಟುಂಬ, ಸೋನಿಯಾ ಗಾಂಧಿ, ರಾಹುಲ್ ಗಾಂಧಿ ಇವರುಗಳ ಮೇಲೆ ಯದ್ವಾತದ್ವಾ ಆರೋಪಗಳನ್ನು ಹೊರಿಸುವುದೆಂದರೆ ಈತನಿಗೆ. ಆರೆಸ್ಸೆಸ್ ಮೂಲದ ಸ್ವಾಮಿ ಅಂತಿಂಥವರಲ್ಲ, ಅಮೆರಿಕದ ಖ್ಯಾತ ವಿಶ್ವವಿದ್ಯಾನಿಲಯ ಹಾರ್ವರ್ಡ್‌ನಲ್ಲಿ ವ್ಯಾಸಂಗ ಮಾಡಿ, ಸಂದರ್ಶಕ ಪ್ರಾಧ್ಯಾಪಕ. ಕಮ್ಯೂನಿಸ್ಟರನ್ನು ವಿರೋಧಿಸುವುದೆಂದರೆ ಅತ್ಯಂತ ಪ್ರಿಯ. ತಮಿಳುನಾಡಿನ ಈತ ಈಗ ಮೋದಿ–ಜೇಟ್ಲಿ ಕಂಬೈನ್‌ಗೆ ಬ್ರಹ್ಮಾಸ್ತ್ರ ಕಾಂಗ್ರೆಸ್ ಮೇಲೆ ಹರಿಹಾಯಲು. ಪ್ರತಿ ಲೋಕಸಭಾ ಅಧಿವೇಶನದಲ್ಲೂ ಸ್ವಾಮಿ ಭಾಜಪ ಇಕ್ಕಟ್ಟಿನಲ್ಲಿ ಸಿಕ್ಕಿಕೊಂಡಾಗ ಗಮನ ಬೇರೆ ಕಡೆ ಹರಿಸಲು ಮೋದಿ ಸರಕಾರದಿಂದ ನಕಲಿ–ಅಸಲಿ ಮಾಹಿತಿ ಪಡೆದುಕೊಂಡು ಗುಲ್ಲೆಬ್ಬಿಸುವುದರಲ್ಲಿ ಪ್ರವೀಣ. 'ನ್ಯಾಷನಲ್ ಹೆರಾಲ್ಡ್' ಪತ್ರಿಕೆಯ ಅವ್ಯವಹಾರದ ಮೊಕದ್ದಮೆ ಹೂಡಿರುವ ಈತ ಸೋನಿಯಾ ಗಾಂಧಿ ಕಾಂಗ್ರೆಸ್ ಅಧ್ಯಕ್ಷರಾದಾಗಿನಿಂದ ಒಂದೇ ಸಮನಾಗಿ ಒಂದಲ್ಲ ಒಂದು ಆಪಾದನೆ ಮಾಡುತ್ತಲೇ ಇದ್ದಾನೆ. ಬರೀ ಗುಡುಗು ಅಷ್ಟೆ, ಇದುವರೆಗೂ ಯಾವುದೂ ಸಾಬೀತಾಗಿಲ್ಲ. ಇಂದಿರಾ ಗಾಂಧಿ, ಅಧಿಕಾರಾವಧಿಯಲ್ಲಿ ಜೇಟ್ಮಲಾನಿ ಎಂಬಾತ ನಾನು 'ಸಿಐಎ' ಏಜೆಂಟ್ ಎಂದು ಲೇಬಲ್ ಹಚ್ಚಿಕೊಂಡು ಸರಕಾರದ ಮೇಲೆ ಬೇಕಾದಷ್ಟು ಆರೋಪಗಳನ್ನು ಮಾಡುತ್ತಿದ್ದ. ಈಗ ಆ ಪಾತ್ರವನ್ನು ಸುಬ್ರಮಣ್ಯಸ್ವಾಮಿ ವಹಿಸಿಕೊಂಡಿದ್ದಾರೆ. ಒಂದು ರೀತಿಯಲ್ಲಿ ಸ್ವಾಮಿ ಅರ್ಥಶಾಸ್ತ್ರಿಯ ಎನಿಸಿಕೊಂಡಿರುವುದರಿಂದ ಖಜಾಂಚಿ ಜೇಟ್ಲಿಯ ಬಲಗೈ ಭಂಟನಾಗಿದ್ದಾರೆ. ಮೊನ್ನೆ ಮುಗಿದ ಲೋಕಸಭಾ ಅಧಿವೇಶನದಲ್ಲಿ ವೆಸ್ಟ್‌ಲ್ಯಾಂಡ್ ಹೆಲಿಕಾಪ್ಟರ್ ಖರೀದಿಯಲ್ಲಿ ಸೋನಿಯಾಗೆ ಸಾವಿರಾರು ಕೋಟಿ ಕಮೀಶನ್ ಹರಿದುಬಂದಿದೆ ಎಂದು ಈತ ಭಾರಿ ಗದ್ದಲ ಎಬ್ಬಿಸಿದ. ಎಲ್ಲ ಖಾಲಿ ಗಲಾಟೆ. ಉತ್ತರಾಖಂಡ್‌ನಲ್ಲಿ ಬಿಸಿತುಪ್ಪ ನುಂಗಲಾಗದೆ ಒದ್ದಾಡುತ್ತಿದ್ದ ಭಾಜಪ ಬಚಾವ್ ಮಾಡಲು ಎರಡನೇ ಬೋಫೋರ್ಸ್ ಪ್ರಕರಣ ಇದಾಗಿತ್ತು. ಈಗ ಸ್ವಾಮಿ ಭಾರತೀಯ ರಿಸರ್ವ್ ಬ್ಯಾಂಕ್ ಗವರ್ನರ್ ರಘುರಾಮ ರಾಜನ್ ಹಿಂದೆ ಬಿದ್ದಿದ್ದಾರೆ. ಹಣಕಾಸಿನ ಸಚಿವ ಜೇಟ್ಲಿ ಹಾಗೂ ರಾಜನ್ ನಡುವೆ ಸಂಬಂಧ ಚೆನ್ನಾಗಿಲ್ಲ ಎನ್ನುವುದು ರಹಸ್ಯವೇನಲ್ಲ. ಸರಕಾರದ ಹಣಕಾಸಿನ ನೀತಿಗಳಿಗೆ ರಾಜನ್ ಪೂರಕವಾಗಿ ಸ್ಪಂದಿಸುತ್ತಿಲ್ಲ ಎನ್ನುವುದೂ ನಿಜ. ಈ ವರ್ಷ ಸೆಪ್ಟೆಂಬರ್ ತಿಂಗಳಲ್ಲಿ ನಿವೃತ್ತರಾಗಲಿರುವ ಈತ ಅಧಿಕಾರದಲ್ಲಿ ಎರಡನೇ ಸಲ ಮುಂದುವರಿಯುವುದು ಅನುಮಾನ. ಈಚೆಗೆ ಸುಬ್ರಮಣ್ಯಸ್ವಾಮಿ ರಾಜನ್ ಮುಂದುವರಿಯುವುದಿಲ್ಲ ಎನ್ನುವ ಸುಳಿವು ನೀಡಿದ್ದಾರೆ. ಈತ ನಿವೃತ್ತನಾದ ಮೇಲೆ ಅಮೆರಿಕಾದ ಶಿಕಾಗೋ ವಿಶ್ವವಿದ್ಯಾನಿಲಯಕ್ಕೇ ಹೋಗಬೇಕೆಂದು ಶಿಫಾರಸು ಮಾಡಿದ್ದಾರೆ. ಹಾಗೆಯೇ ಸುಬ್ರಮಣ್ಯಸ್ವಾಮಿ ಕೂಡ ಹಾರ್ವರ್ಡ್‌ಗೇ ಹೋದರೆ ಒಂದು ಪೀಡೆ ತೊಲಗಿದಂತೆ.

* * *

ಚುನಾಯಿತ ರಾಜ್ಯ ಸರಕಾರಗಳನ್ನು ಪಲ್ಲಟಗೊಳಿಸುವ ಪರಿಪಾಠ ಇಂದು ನಿನ್ನೆಯದಲ್ಲ. ಹಿಂದಿನಿಂದ ಬಂದದ್ದು. ರಾಜ್ಯದಲ್ಲಿ ಸಂವಿಧಾನ ರೀತ್ಯ ಆಡಳಿತ ಸುಸೂತ್ರವಾಗಿ ನಡೆಯುತ್ತಿಲ್ಲ, ಕಾನೂನು ಶಿಸ್ತು ಅಸ್ತವ್ಯಸ್ತಗೊಂಡಿದೆ ಇಲ್ಲವೆ ರಾಜ್ಯ ಸರಕಾರ ಬಹುಮತ ಕಳೆದುಕೊಂಡಿದೆ ಎಂದು ರಾಜ್ಯಪಾಲರಿಂದ ಶಿಫಾರಸು ಪಡೆದುಕೊಂಡು ಸರಕಾರವನ್ನು ಪದಚ್ಯುತಗೊಳಿಸುವ ಕಾರ್ಯ ೧೯೫೭ರಲ್ಲೇ ಪ್ರಾರಂಭವಾಯಿತು. ಕೇರಳ ರಾಜ್ಯದಲ್ಲಿ ಸ್ಥಾಪನೆಗೊಂಡ ಕಮ್ಯೂನಿಸ್ಟ್ ಸರಕಾರ ಸಂವಿಧಾನದ ೩೫೬ನೇ ವಿಧಿಯ ದುರ್ಬಳಕೆಗೆ ಆಹುತಿಯಾಯಿತು. ಕಾಂಗ್ರೆಸ್ ಇದನ್ನೇ ಅಸ್ತ್ರವಾಗಿ ಬಳಸಿಕೊಂಡ ಪ್ರತಿಪಕ್ಷಗಳ ಆಡಳಿತವನ್ನು ವಜಾಮಾಡುತ್ತಿತ್ತು. ದೇಶದ ಸರ್ವೋಚ್ಚ ನ್ಯಾಯಾಲಯ ಮಧ್ಯ ಪ್ರವೇಶಿಸಿ ಬಹುಮತ ಹೊಂದಿರುವ ರಾಜ್ಯ ಸರಕಾರವನ್ನು ವಜಾ ಮಾಡುವಂತಿಲ್ಲ, ಸರಕಾರಕ್ಕೆ ಬಹುಮತ ಇದೆಯೇ ಇಲ್ಲವೆ ಎನ್ನುವುದು ಸದನದಲ್ಲೇ ನಿರ್ಧಾರವಾಗಬೇಕು ಎಂದು ತೀರ್ಪು ನೀಡಿದ ಮೇಲೆ ಕೇಂದ್ರ ಸರಕಾರ ಎಚ್ಚೆತ್ತುಕೊಂಡಿತು. ಶಾಸಕರನ್ನು ಕೊಳ್ಳುವ ವ್ಯವಹಾರಕ್ಕೆ ತಕ್ಕಮಟ್ಟಿಗೆ ಕಡಿಮೆಯಾದ್ದು ಕಾಯಿದೆಗೆ ತಿದ್ದುಪಡಿ ಆದಮೇಲೆ. ಆದರೂ ನಮ್ಮ ರಾಜಕೀಯದಲ್ಲಿ ಪಕ್ಷಾಂತರದ ಪಿಡುಗು ತೊಲಗಿಲ್ಲ. ಅದು ನಾನಾ ಸ್ವರೂಪವನ್ನು ಪಡೆದುಕೊಂಡಿದೆ.

ಇತ್ತೀಚೆಗೆ ಉತ್ತರಾಖಂಡದಲ್ಲಿ ಕಾಂಗ್ರೆಸ್ ಈ ಹಿಂದೆ ತಾನು ಮಾಡಿದ್ದ ದುಷ್ಕೃತ್ಯಕ್ಕೆ ತಿರುಗುಬಾಣವನ್ನು ಅನುಭವಿಸಬೇಕಾಗಿ ಬಂತು. ಭಾಜಪ ನೇತೃತ್ವದ ಕೇಂದ್ರ ಸರಕಾರ ಕಾಂಗ್ರೆಸ್ಸಿನ ರೀತಿಯನ್ನೇ ಅನುಸರಿಸಿ ಉತ್ತರಾಖಂಡದಲ್ಲಿ ಕಾಂಗ್ರೆಸ್ ಪಾಳ್ಯದಿಂದ ೯ ಶಾಸಕರು ಪಕ್ಷಾಂತರ ಮಾಡುವಂತೆ ಪ್ರಚೋದಿಸುವುದರಲ್ಲಿ ಸಫಲ ಗೊಂಡಿತು. ಉತ್ತರಾಖಂಡದ ಕಾಂಗ್ರೆಸ್ ಸರಕಾರ ಬಹುಮತ ಕಳೆದುಕೊಂಡಿದೆ ಎಂದು ಆರೋಪಿಸಿ ಸರಕಾರವನ್ನು ವಜಾಮಾಡಿ ರಾಜ್ಯದ ಮೇಲೆ ಕೇಂದ್ರಾಡಳಿತ ಹೊರಿಸಿತು. ಹಿಂದಿನಿಂದ ಭಾಜಪವನ್ನು ಅಧಿಕಾರಕ್ಕೆ ತರಲು ನಡೆಸಿದ ಹುನ್ನಾರ ಇದು. ಸುಪ್ರೀಮ್ ಕೋರ್ಟಿನಲ್ಲಿ ಎರಡೂ ಕಡೆ ಜಟಾಪಟಿ. ಶಾಸಕರ ಅಮಾನತನ್ನು ಎತ್ತಿಹಿಡಿದ ನ್ಯಾಯಾಲಯ ಕೇಂದ್ರ ಸರಕಾರಕ್ಕೆ ಬಿಸಿಮುಟ್ಟಿಸಿ, ಬಹುಮತದ ಸಾಬೀತು ಸದನದಲ್ಲಾಗಬೇಕು ಎಂದು ನೀಡಿದ ತೀರ್ಪು ಹಾಗೂ ತದನಂತರ ನಡೆದ ಮತದಾನ ಸದ್ಯಕ್ಕೆ ಕಾಂಗ್ರೆಸ್ಸಿನಲ್ಲಿ ಉಲ್ಲಾಸ ಮೂಡಿಸಿದೆ. ಎರಡನೇ ವರ್ಷಕ್ಕೆ ಕಾಲಿರಿಸುತ್ತಿದ್ದ ಮೋದಿ ಸರಕಾರಕ್ಕೆ ತೀವ್ರವಾದ ಮುಖಭಂಗವಾಗಿದೆ. ಭಾಜಪದ ಮೋದಿ–ಅಮಿತ್ ಷಾ ಪಟ್ಟಿಗೆ ಸೋಲಾಗಿದೆ. ಸದ್ಯಕ್ಕೆ ಉತ್ತರಾಖಂಡದ ಕಾಂಗ್ರೆಸ್ ಸರಕಾರ ಬಚಾವ್, ಮುಂದೆ ಏನು ಕಾದಿದೆಯೋ ನೋಡಬೇಕು.

* * *

ಎಂಟು ವರ್ಷಗಳ ಹಿಂದೆ ೨೦೦೮ರಲ್ಲಿ ಮಹಾರಾಷ್ಟ್ರದ ಮಾಲೆಗಾಂವ್ ಎಂಬಲ್ಲಿ ನಡೆದ ಬಾಂಬು ಸ್ಫೋಟದಲ್ಲಿ ಏಳು ಮಂದಿ ಮೃತಪಟ್ಟರು. ಸತ್ತವರೆಲ್ಲ ಅಲ್ಪಸಂಖ್ಯಾತರು. ಮಹಾರಾಷ್ಟ್ರ ಪೊಲೀಸಿನ ಭಯೋತ್ಪಾದನಾ ನಿರೋಧ ತಂಡದ ಪ್ರಕಾರ ಅದು ಹಿಂದೂ ಸಂಘಟನೆಗಳು ನಡೆಸಿದ ಸಂಚು. ಹಾಗಾಗಿ ಅದು ತನಿಖೆ ನಡೆಸಿ, ಆರೆಸ್ಸೆಸ್‌ನ ವಿದ್ಯಾರ್ಥಿ ಸಂಘಟನೆ ಅಖಿಲ ಭಾರತ ವಿದ್ಯಾರ್ಥಿ ಪರಿಷತ್ತಿನ ಪ್ರಮುಖ ಕಾರ್ಯ ಸಾಧಿಸಿ ಪ್ರಗ್ಯಾ ಸಿಂಗ್

ಮತ್ತು ಹಲವರನ್ನು ಬಂಧಿಸಿತ್ತು. ಈಗ ಮೋದಿ ಸರಕಾರ ಅಧಿಕಾರ ವಹಿಸಿಕೊಂಡನಂತರ ಎರಡು ವರ್ಷವಾಗುತ್ತಿದ್ದಂತೆ ಬಂಧನದಲ್ಲಿರುವವರಿಗೆ ಬಿಡುಗಡೆಯ ಭಾಗ್ಯ ದೊರೆತಿದೆ. ಮಹಾರಾಷ್ಟ್ರದ ಸರಕಾರದಿಂದ ನೇಮಿತವಾಗಿದ್ದ ಭಯೋತ್ಪಾದನಾ ನಿರೋಧ ತಂಡದ ತನಿಖೆಯನ್ನು ರಾಷ್ಟ್ರೀಯ ತನಿಖಾ ಸಂಸ್ಥೆಯು ಪೂರ್ಣವಾಗಿ ತಿರಸ್ಕರಿಸಿದೆ. ೨೦೧೧ರಲ್ಲಿ ತನಿಖೆ ಪ್ರಾರಂಭಿಸಿದ ರಾಷ್ಟ್ರೀಯ ತನಿಖಾ ಸಂಸ್ಥೆಯು ಎಲ್ಲ ಆಪಾದಿತರನ್ನೂ ದೋಷಮುಕ್ತರು ಎಂದು ಘೋಷಿಸಿದೆ. ಸಾಕ್ಷ್ಯಾಧಾರದ ಕೊರತೆಯೇ ಈ ತೀರ್ಮಾನಕ್ಕೆ ಕಾರಣ. ಮಾಲೆಗಾಂವ್ ಬಾಂಬ್‌ಸ್ಫೋಟ ಪ್ರಕರಣ ಹಲವು ತಿರುವುಗಳನ್ನು ಪಡೆದುಕೊಂಡಿದೆ. ಈ ಪ್ರಕರಣದ ತನಿಖೆ ನಡೆಸುತ್ತಿದ್ದ ಪೊಲೀಸ್ ಅಧಿಕಾರಿ ಹೇಮಂತ್ ಕರ್ಕರೆ ನಡೆಸುತ್ತಿದ್ದರು. ಮುಂಬಯಿಯಲ್ಲಿ ನಡೆದ ಭಯೋತ್ಪಾದಕರ ದಾಳಿಯಲ್ಲಿ ಕರ್ಕರೆ ಗುಂಡಿಗೆ ಬಲಿಯಾದರು. ಅನಂತರ ರಾಷ್ಟ್ರೀಯ ತನಿಖಾದಳ ತನಿಖೆಯನ್ನು ಕೈಗೆತ್ತಿಕೊಂಡಿತು. ಈಗ ಮೋದಿ ಸರಕಾರ ಬಂದ ನಂತರ ಆಗಿರುವ ಬೆಳವಣಿಗೆ. ಸಂಘಪರಿವಾರದವರ ಕೈವಾಡವನ್ನೂ ಅಲ್ಲಗಳೆದು, ಅವರನ್ನು ರಕ್ಷಿಸುವುದೇ ಇತರ ಹಿಂದಿರುವ ಉದ್ದೇಶ. ಈ ಪ್ರಕರಣದ ಪಬ್ಲಿಕ್ ಪ್ರಾಸಿಕ್ಯೂಟರ್ ಈ ಹೊಸ ಬೆಳವಣಿಗೆಯಿಂದ ಬೇಸರಗೊಂಡಿದ್ದಾರೆ. ಆಪಾದಿತರೆಲ್ಲ ಖುಲಾಸು, ಹಾಗಿದ್ದರೆ ಏಳು ಮಂದಿಯನ್ನು ಆಹುತಿ ತೆಗೆದುಕೊಂಡ ಸ್ಫೋಟದ ಹಿಂದೆ ಯಾರ ಕೈವಾಡ ಇದೆ. ಇದಕ್ಕೆ ಉತ್ತರ ಇಲ್ಲ. ಗುಜರಾತ್‌ನಲ್ಲಿ ನಡೆದ ಹತ್ಯಾಕಾಂಡದಲ್ಲಿ ದೋಷಮುಕ್ತರು ನರೇಂದ್ರ ಮೋದಿ ಪ್ರಧಾನಿಯಾಗಿರುವಾಗ ಇನ್ನೇನು ನಿರೀಕ್ಷಿಸಲು ಸಾಧ್ಯ. ಒಂದೊಂದಾಗಿ ಹಳೆಯ ಆಪಾದನೆಗಳನ್ನೆಲ್ಲ ಗುಡಿಸಿ ಹಾಕಲಾಗುತ್ತಿದೆ. ಯಾವುದೇ ತನಿಖೆಯನ್ನು ತಿರುಗುಮುರುಗು ಮಾಡಲು ಸಾಧ್ಯ ಎನ್ನುವುದಕ್ಕೆ ಮಾಲೆಗಾಂವ್ ಪ್ರಕರಣ ಸಾಕ್ಷಿ.

* * *

"ಬ್ರೆಜಿಲ್‌ನ ಹಿಂದಿನ ಅಧ್ಯಕ್ಷರು (ಲೂಲಾ ಡಿಸಿಲ್ವಾ) ನಡೆದ ಹಾದಿಯಲ್ಲೇ ನಡೆದವಳು ನಾನು. ನಾನು ತಪ್ಪು ಮಾಡಿರಬಹುದು, ಆದರೆ ಯಾವುದೇ ಅಪರಾಧವನ್ನೂ ಎಸಗಿಲ್ಲ. ನನ್ನನ್ನು ತಪ್ಪಾಗಿ ಅರ್ಥಮಾಡಿಕೊಳ್ಳಲಾಗಿದೆ. ಈ ಪದಚ್ಯುತಿ ನನ್ನ ವಿರುದ್ಧ ನಡೆದ ಕ್ಷಿಪ್ರಕ್ರಾಂತಿ. ಒಂದು ಮಹಾನ್ ಅನ್ಯಾಯಕ್ಕೆ ಬಲಿಯಾಗಿದ್ದೇನೆ." ಇದು ಬ್ರೆಜಿಲ್‌ನ ಪ್ರಥಮ ಮಹಿಳಾ ಅಧ್ಯಕ್ಷರಾದ ದಿಲ್ಮಾ ರೌಸೆಫ್ ಪದಚ್ಯುತಗೊಂಡಮೇಲೆ ಹೇಳಿರುವ ಮಾತು. ಹೋರಾಟದ ಬದುಕಿನಿಂದ ಬಂದ ದಿಲ್ಮಾ ರೌಸೆಫ್ ೨೦೧೧ರಲ್ಲಿ ರಕ್ಷಣ ಅಮೆರಿಕದ ಅತಿ ದೊಡ್ಡ ದೇಶ ಬ್ರೆಜಿಲ್‌ನ ಅಧ್ಯಕ್ಷರಾದರು. ೨೦೧೩ರಲ್ಲಿ ಫೋರ್ಬ್ಸ್ ಪಟ್ಟಿಯಲ್ಲಿ ಜಗತ್ತಿನ ಮೂರನೇ ಅತಿ ಪ್ರಭಾವಿ ಮಹಿಳೆ ಎಂದು ಗುರುತಿಸಿಕೊಂಡವರು. ಎಡಪಂಥೀಯ ನಾಯಕಿಯಾದ ಈಕೆ ಎರಡನೇ ಅವಧಿಯಲ್ಲಿ ಎರಡು ವರ್ಷಗಳ ನಂತರ ಪದಚ್ಯುತಗೊಂಡಿದ್ದಾರೆ. ಕಳೆದ ೧೩ ವರ್ಷಗಳಿಂದ ಬ್ರೆಜಿಲ್‌ನಲ್ಲಿ ಎಡಪಂಥೀಯ ಆಡಳಿತ ಇದೆ. ಎಲ್ಲ ಪಂಗಡಗಳವರಿಗೂ ಸರಕಾರದಲ್ಲಿ ಪ್ರಾತಿನಿಧ್ಯ ಬೇಕು ಎಂಬ ಧೋರಣೆಯನ್ನು ಅನುಸರಿಸಿದ ದಿಲ್ಮಾ ತಮ್ಮ ಸಂಪುಟದಲ್ಲಿ ಮಹಿಳೆಯರಿಗೆ ಶೇ. ೨೪ರಷ್ಟು ಪ್ರಾತಿನಿಧ್ಯ ನೀಡಿ ಈ ಹಿಂದಿನ ೩೫ ಅಧ್ಯಕ್ಷರು ಮಾಡಿರದಂತಹ ಸಾಧನೆ ಮಾಡಿದವರು 'ಬ್ರಿಕ್ಸ್'ನ ಸದಸ್ಯರಾಷ್ಟ್ರವಾಗಿರುವ ಬ್ರೆಜಿಲ್ ಇನ್ನು ಮೂರು ತಿಂಗಳಲ್ಲಿ ನಡೆಯುವ ಒಲಿಂಪಿಕ್ಸ್ ಪಂದ್ಯಗಳಿಗೆ ಆತಿಥೇಯ ರಾಷ್ಟ್ರ. ಇಂಥ ಸನ್ನಿವೇಶದಲ್ಲಿ ಬ್ರೆಜಿಲ್‌ನಲ್ಲಿ ಒಂದು ರೀತಿಯ ಕ್ಷಿಪ್ರಕ್ರಾಂತಿ ಸಂಭವಿಸಿ ಅಧ್ಯಕ್ಷರ ಪದಚ್ಯುತಿಯಾಗಿದೆ. ಆರ್ಥಿಕ ಸಂಕಷ್ಟವನ್ನು ಎದುರಿಸುತ್ತಿರುವ ಬ್ರೆಜಿಲ್ ಬಲಪಂಥೀಯರ ಕುತಂತ್ರಗಳಿಗೆ. ದಕ್ಷಿಣ ಅಮೆರಿಕದ ರಾಷ್ಟ್ರಗಳಲ್ಲಿ ಎಡಪಂಥೀಯ ಆಡಳಿತ ಇರುವ ರಾಷ್ಟ್ರಗಳಲ್ಲಿ ಸರಕಾರಗಳನ್ನು ಉರುಳಿಸಲು ಅಮೆರಿಕ ಸಾಕಷ್ಟು ಹಣ ಖರ್ಚು ಮಾಡುತ್ತಿದೆ. ಕುತಂತ್ರಕ್ಕೆ ಮೊದಲ ಬಲಿಪಶು ಬ್ರೆಜಿಲ್. ಮುಂದಿನ ಸರದಿ ವೆನಿಜುವೇಲಾ ಎಂದು ಹೇಳಬಹುದು. ದಕ್ಷಿಣ ಅಮೆರಿಕದ ರಾಜ್ಯಗಳಲ್ಲಿ ಜನ ಅಮೆರಿಕ ಕೃಪಾಪೋಷಿತ ಸರ್ವಾಧಿಕಾರಿ ಆಡಳಿತಗಳನ್ನು ಪದಚ್ಯುತಗೊಳಿಸಿ ಎಡಪಂಥೀಯ ಸರಕಾರವನ್ನು ಸ್ಥಾಪಿಸುವ ಪ್ರವೃತ್ತಿ ಎರಡು ದಶಕಗಳಿಂದಲೂ ನಡೆದುಕೊಂಡು ಬಂದಿದೆ. ಅಮೆರಿಕದ ಮುಕ್ತಮಾರುಕಟ್ಟೆ, ಜಾಗತೀಕರಣದಂಥ ನೀತಿಗಳಿಗೆ ಪರ್ಯಾಯ ವ್ಯವಸ್ಥೆ ನಿರ್ಮಿಸುವ ಹಾದಿಯಲ್ಲಿ ಅಡಿಯಿರಿಸಿದ ಬ್ರೆಜಿಲ್, ವೆನಿಜುವೇಲ, ನಿಕರಾಗುವ ಮುಂತಾದ ದೇಶಗಳು ಅಮೆರಿಕದ ಕೆಂಗಣ್ಣಿಗೆ ಗುರಿಯಾಗಿದ್ದುವು. ಅಮೆರಿಕದ ಪಾರುಪತ್ಯವೇ ಅಧಿಕವಾಗಿದ್ದ ಈ ದೇಶಗಳು ಸ್ವಾವಲಂಬನೆ ಮಾರ್ಗ ಹಿಡಿದದ್ದು ಅಮೆರಿಕ ಆಡಳಿತಕ್ಕೆ ಸ್ವಲ್ಪವೂ ಹಿಡಿಸಿರಲಿಲ್ಲ. ಆರ್ಥಿಕ ಸಂಕಷ್ಟದಲ್ಲಿ ಸಿಲುಕಿಕೊಂಡಿರುವ ಈ ದೇಶಗಳ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಅಮೆರಿಕ ಸಂಚು ನಡೆಸುತ್ತಿದೆ.

* * *




✉ **ಆಂತರ್ಯದಲ್ಲಿ ಒಡಮೂಡಿದ ಅಭಿಪ್ರಾಯಗಳು :** ಸಮಾಜದಲ್ಲಿ ಕೀಳುಜಾತಿ ಎಂಬ ಹಣೆಪಟ್ಟಿಯ ಬಾವಿಯೊಳಗೆ ಹುಟ್ಟಿದ ಹೆಣ್ಣಗಳೊಬ್ಬಳ ಆಂತರಿಕ ಅನಿಸಿಕೆಗಳಿಗೆ ವೇದಿಕೆಯಾಗಿ ತೋರಿಬಂದ 'ಸೊಲ್ಲದಾರಿ' ಎಂಬ ಬಿ. ಟಿ. ಜಾಹ್ನವಿ ಅವರ ಲೇಖನ ೧೨ನೇ ಶತಮಾನದ ವಚನಕಾರಿಣಿ ಎಂದು ಹೆಸರು ಗಳಿಸಿದ ಅತ್ತಿಮಬ್ಬೆ, ಅಕ್ಕಮಹಾದೇವಿ, ನೀಲಾಂಬರಿಯರ ನೆನಪು ಮರುಕಳಿಸಿದ ಮಹಾ ಲೇಖನಕ್ಕೆ (ಹೊಸತು ಫೆಬ್ರವರಿ ಸಂಚಿಕೆ) ಶರಣು.

ದೈಹಿಕ ಮಿತಿಯನ್ನು ಮೆಟ್ಟಿನಿಂತ ಛಲಗಾತಿ ಡಾ॥ ಮಹಾಜಬೀನ್ ಅವರ ಬಗ್ಗೆ ಎಸ್. ನಾಗರಾಜು ಅವರಿಂದ ಮೂಡಿಬಂದ ಸವಿವರಗಳಿಂದ ಕೂಡಿರುವ ಬರಹ ಸಮಾಜದ ಕಣ್ಣು ತೆರೆಸುವಂತಹುದು. ಹಾಗೆಯೇ ನಮ್ಮ ನೆಲದ ಹೆಮ್ಮೆಯ ವಿಜ್ಞಾನಿ ಪದ್ಮಶ್ರೀ ಎ. ಎಸ್. ಕಿರಣಕುಮಾರ ಎಂಬ ಇಸ್ರೋ ಸಂಸ್ಥೆಯ ಮುಖ್ಯಸ್ಥರ ಕುರಿತಾದ ಸಂದರ್ಶನ ಸಚಿತ್ರ ಬರಹ ಮನಮುಟ್ಟುವಂತಿತ್ತು. ಸಂದರ್ಶಕರಾದ ಡಾ॥ ಬಿ. ಎಸ್. ಶೈಲಜಾ, ಪ್ರೊ॥ ಸಂಪಿಗೆ ತೋಂಟದಾರ್ಯ, ಡಾ॥ ಸಿದ್ದನಗೌಡ ಪಾಟೀಲ, ಶ್ರೀ ಎ. ಆರ್. ಉಡುಪ ಅವರ ಶ್ರಮ ಶ್ಲಾಘನೀಯ.

ಅಲ್ಲಲ್ಲಿ ಮಿಂಚಿ ಕಿರು ಕವಿತೆಯಿಂದ ಹಿರಿದರ್ಥತೆಯನುಣ್ಣಿಸಿದ ಮಹಾರಾಷ್ಟ್ರದ ಸಹೋದರಿ ಶೋಭಾ ಪ್ರಮೋದ್ ಕರ್ನಾಟಕದ ಹೆಮ್ಮೆಯ ಪುತ್ರಿ ಅನ್ನಿಸಿದ್ದಾರೆ.

ಸಂಪಾದಕೀಯ ಕುರಿತಾಗಿ ಹೇಳುವುದಿದ್ದರೆ, ಈ ತಿಂಗಳು ವಿಭಾಗದಲ್ಲಿ ರಾಮಮಂದಿರ ಅಯೋಧ್ಯೆಯಲ್ಲಿ ಮಾತ್ರವಲ್ಲ, ಪ್ರತಿ ಗ್ರಾಮ ಗ್ರಾಮಗಳಲ್ಲೂ ಕಿರಿದಾದ ಸಂಕೇತವನ್ನು ಒಡಮೂಡಿಸುವ ಉದ್ದೇಶದಿಂದ ನಾವು ಕಟ್ಟಿಸಿಯೇ ವಿರಮಿಸುವವರು ಎಂದೆಂಬ ಇಂದಿನ ಸರಕಾರಿ ನೀತಿಯ ಪ್ರಜಾಪ್ರಭುತ್ವ ಆಡಳಿತದ ವಿಭಿನ್ನ ಧೋರಣೆಗಳಿಗೆ ಎಡೆಕೊಡುವುದಾದರೂ ಹೇಗೆಂಬ ಕುರಿತಾಗಿ ಸಂಪಾದಕೀಯದ ಧ್ವನಿಮೊಳಗಿದುದು ಸಾರ್ವಜನಿಕರೆಲ್ಲರ ಚಿಂತನೆಗೆ ಅರ್ಹವೆನಿಸಿದೆ. ಅಭಿನಂದನೆಗಳು.

*ಕಾಸರಗೋಡು* ***ಕೀರಿಕ್ಕಾಡು ವನಮಾಲಾ ಕೇಶವ ಭಟ್ಟ***

### 'ಸಂದರ್ಶನ'

✉ ಏಪ್ರಿಲ್ ತಿಂಗಳ 'ಹೊಸತು' ಪತ್ರಿಕೆಯಲ್ಲಿ ಡಾ॥ ಎನ್. ಗಾಯತ್ರಿಯವರು ಉಮಾ ಚಕ್ರವರ್ತಿಯವರೊಡನೆ ನಡೆಸಿದ ಸಂದರ್ಶನ ಓದಿ ಬಹಳ ಖುಷಿಯಾಯಿತು. ಉಮಾ ಚಕ್ರವರ್ತಿಯವರು ಭಾರತದ ಸ್ತ್ರೀವಾದಿ ಚರಿತ್ರೆಯ ಲೋಕಕ್ಕೆ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾರೆ. ಇವರು ಇನ್ನೂ ಹಲವಾರು ಕೊಡುಗೆಗಳನ್ನು ನೀಡಲಿ ಎಂದು ಹಾರೈಸುತ್ತೇನೆ. 'ಹೊಸತು' ಪತ್ರಿಕೆಯು ಇನ್ನು ಹೆಚ್ಚಿನ ವಿಷಯವನ್ನು ತಿಳಿಯಪಡಿಸಬೇಕೆಂದು ಕೋರುತ್ತೇನೆ.

*ಬೆಳ್ತಂಗಡಿ* ***ಪ್ರಶಾಂತ ಬಿ.***

### ಒಂದನೇ ತರಗತಿಯಿಂದ ಇಂಗ್ಲಿಷ್ ಬೇಕಿಲ್ಲ

✉ ಇಂಗ್ಲಿಷ್ ಕಲಿಯದಿದ್ದರೆ ಮಾಹಿತಿ ತಂತ್ರಜ್ಞಾನಾರ್ಜನೆ ಅಸಾಧ್ಯವೆಂದು ಭಾವಿಸಿದವರು ಒಂದನೇ ತರಗತಿಯಿಂದಲೆ ಇಂಗ್ಲಿಷಿನ "ಕಡುಬನ್ನು ನೀರಿಳಿಯದ ಗಂಟಲಲ್ಲಿ" ತುರುಕುವ ಪ್ರಯತ್ನವನ್ನು




ಭರದಿಂದ ಮಾಡುತ್ತಿದ್ದಾರೆ. ಈ ವಾದ ನಿರಾಧಾರ ಎಂಬುದನ್ನು ಸಾಬೀತುಪಡಿಸಲು ಐದನೇ ತರಗತಿಯಿಂದ ಇಂಗ್ಲಿಷ್ ಕಲಿತವರು ಮಾಹಿತಿ ತಂತ್ರಜ್ಞಾನದಲ್ಲಿ ಪರಿಣತರೆಂಬುದನ್ನು ರಾಜ್ಯದ ಪ್ರಖ್ಯಾತ ಗುಬ್ಬಿ ತೋಟದಪ್ಪ ಧರ್ಮಸಂಸ್ಥೆಯ ಉಚಿತ ಪ್ರಸಾದನಿಲಯದಲ್ಲಿರುವ ವಿದ್ಯಾರ್ಥಿಗಳ ಸಿ.ಇ.ಟಿ. ಪರೀಕ್ಷೆಯ ಫಲಿತಾಂಶದಿಂದ ದಿಟಪಡಿಸಬಹುದು. ಬಾಲಕರ ಪ್ರಸಾದನಿಲಯದ ೧೮೫ ವಿದ್ಯಾರ್ಥಿಗಳ ಸಿ.ಇ.ಟಿ. ಫಲಿತಾಂಶಗಳು ಮತ್ತು ಅದೇ ಧರ್ಮಸಂಸ್ಥೆಯ ಬಾಲಕಿಯರ ಪ್ರಸಾದ ನಿಲಯದಲ್ಲಿ ಅಭ್ಯಾಸ ಮಾಡುವ ವಿದ್ಯಾರ್ಥಿನಿಯರ ಫಲಿತಾಂಶಗಳ ಅಂಕಿಅಂಶಗಳನ್ನು ಪರಿಶೀಲಿಸಿದರೆ ಒಂದನೇ ತರಗತಿಯಿಂದಲೆ ಇಂಗ್ಲಿಷ್ ಕಲಿಯ ಬೇಕಾದ ಅಗತ್ಯವಿಲ್ಲ ಎಂಬುದು ಎದ್ದು ಕಾಣುತ್ತದೆ. ಒಂದನೇ ತರಗತಿಯಿಂದಲೇ ಇಂಗ್ಲಿಷ್ ಕಲಿತವರು ಐದನೇ ತರಗತಿಯಿಂದ ಕಲಿತವರಿಂದ ಮೇಲು ಎಂಬುದನ್ನು ಸಾಬೀತುಪಡಿಸಲು ಈಗ ವಿಪ್ರೊ ಅಥವಾ ಇನ್ಫೋಸಿಸ್ ಸಂಸ್ಥೆಗಳಲ್ಲಿ ಕೆಲಸ ಮಾಡುವವರ ವಿವರಗಳನ್ನು ಸರ್ಕಾರ ಮತ್ತು ಇಂಗ್ಲಿಷ್ ವ್ಯಾಮೋಹಿಗಳು ಒದಗಿಸಬೇಕು. ಅದನ್ನು ಬಿಟ್ಟು ಪ್ರಾಥಮಿಕ ಶಿಕ್ಷಣ ಮಂತ್ರಿಗಳು "ವಿಧಾನಸಭೆಯ ಇಬ್ಬರು ಸದಸ್ಯರು ವಿಧಾನ ಪರಿಷತ್ತಿನ ಇಬ್ಬರು ಮಾತ್ರ ಒಂದನೇ ತರಗತಿ – ಇಂಗ್ಲಿಷಿಗೆ ವಿರೋಧವಾಗಿದ್ದಾರೆ," ಎಂದು ವಾದಿಸುವುದು ತರ್ಕಹೀನ.

ಈಗ ಕನ್ನಡಪರ ಸಂಘಸಂಸ್ಥೆಗಳು ಈ ದಿಕ್ಕಿನಲ್ಲಿ ಮಾಹಿತಿ ಸಂಗ್ರಹಿಸಬೇಕು. ಸಾರ್ವಜನಿಕರ ವಿದ್ಯಾರ್ಥಿ ನಿಲಯಗಳಲ್ಲಿ, ಎಸ್.ಸಿ., ಎಸ್.ಟಿ. ಹಾಸ್ಟೆಲ್‌ಗಳಲ್ಲಿ, ಐಟಿ ಬಿಟಿ ಸಂಸ್ಥೆಗಳಲ್ಲಿ, ಕೆಲಸ ಮಾಡುವವರಿಂದ ಮಾಹಿತಿ ಸಂಗ್ರಹ ಮಾಡಿ ಮಂತ್ರಿಗಳ ಮುಖಕ್ಕೆ ಎತ್ತಿ ತೋರಿಸಬೇಕು. ಈ ಕ್ಷೇತ್ರ ಕಾರ್ಯವನ್ನು ನಿಷ್ಠೆ, ಶ್ರದ್ಧೆ, ಪರಿಶ್ರಮದಿಂದ ಮಾಡಿ ಕನ್ನಡಕ್ಕೆ ಭದ್ರವಾದ ಬುನಾದಿಯನ್ನು ಸಿದ್ಧಪಡಿಸಬೇಕೆಂದು ವಿನಂತಿ.

*ಬೆಂಗಳೂರು* ***ಕೋ. ಚೆನ್ನಬಸಪ್ಪ***

✉ ಪ್ರೊ॥ ಬಿ. ಸುರೇಂದ್ರ ರಾವ್ ಅವರ 'ಧರ್ಮ, ದೇವರು, ನಾವು... ಇತ್ಯಾದಿ' ಲೇಖನದ ಕುರಿತು ಎರಡು ಮಾತು.

ಆಸ್ತಿಕತೆ–ನಾಸ್ತಿಕತೆಗಳ ಅಂತರಂಗ–ಬಹಿರಂಗಗಳನ್ನು ವಾಸ್ತವತೆಯ ನೆಲೆಗಟ್ಟಿನಲ್ಲಿ ವಿಶ್ಲೇಷಿಸಿರುವ ಪ್ರೊ॥ ಬಿ. ಸುರೇಂದ್ರ ರಾವ್ ಅವರ ಲೇಖನ ಸಮಯೋಚಿತ ಹಾಗೂ ಸಂದರ್ಭೋಚಿತ. ಆಸ್ತಿಕ – ನಾಸ್ತಿಕರ ಮಧ್ಯೆ ಆರಂಭವಾಗಿರುವ ಶೀತಲ ಸಮರಕ್ಕೆ ದೊಡ್ಡ ಚಾರಿತ್ರಿಕ ಹಿನ್ನೆಲೆಯೇ ಇದೆ. ಅದೊಂದು ಜಾಗತಿಕ ವಿದ್ಯಮಾನ. ಚರಿತ್ರೆಯಲ್ಲಿ ಈ ವಿದ್ಯಮಾನದ ವಿಜೃಂಭಣೆಯೂ ನಡೆದಿದೆ, ಅದೇ ರೀತಿ ಕೊನೆಗಾಣಿಸುವ ಪ್ರಯತ್ನವೂ ನಡೆದಿದೆ. ಬಹುತ್ವದ ನೆಲೆಯಲ್ಲಿ ರೂಪುಗೊಂಡಿರುವ ಭಾರತದಲ್ಲಿ ಇದೊಂದು ಪಿಡುಗಷ್ಟೇ ಆಗದೆ ಸಾಮಾಜಿಕ ಬಿಕ್ಕಟ್ಟನ್ನು ಸೃಷ್ಟಿ ಮಾಡಿದೆ. ಆಸ್ತಿಕ – ನಾಸ್ತಿಕ ಎನ್ನುವ ಮಾನಸಿಕ ಸ್ಥಿತಿ ದೈಹಿಕ ಹೊಡೆದಾಟಕ್ಕೆ ಪ್ರಚೋದನೆ ನೀಡುವ ಮೂಲಕ ಮಾನಸಿಕ ನೆಮ್ಮದಿಯನ್ನು ಕೆಡಿಸಿ ಸಮಾಜದಲ್ಲಿ ಸಂಶಯ, ಸಂದೇಹ ಹಾಗೂ ಆತಂಕದ ಪರಿಸರವನ್ನು ನಿರ್ಮಿಸುತ್ತಲೇ ಇರುತ್ತದೆ.

ಜಾತಿ, ಮತ, ಪಂಥ, ಧರ್ಮ, ಜನಾಂಗಗಳೆನ್ನುವ ಗೋಡೆಗಳಿಂದಾಚೆಗೆ ಮಾನವೀಯತೆ, ಮಾನವ ಸಂಬಂಧ, ಮಾನವ ಪ್ರೀತಿಯೆನ್ನುವ ಮಾನವ ಧರ್ಮದ ಪ್ರಜ್ಞೆ ಮೂಡಿದರೆ ಮಾತ್ರ ಮಾನವ ಸಮಾಜಜೀವಿಯಾಗಿ ಈ ಜಗತ್ತಿನಲ್ಲಿ ಬದುಕಲು ಸಾಧ್ಯ. ನಾವೇ ಹುಟ್ಟುಹಾಕಿದ ಧರ್ಮ – ದೇವರು ಎನ್ನುವ ವ್ಯವಸ್ಥೆ ನಮ್ಮ ಬದುಕಿಗೇ ಅಡ್ಡಿಯಾಗುತ್ತದೆ ಎನ್ನುವುದು ಮನವರಿಕೆಯಾದಾಗ ಅದನ್ನು ನಾವೇ ಸರಿಪಡಿಸಬೇಕೇ ಹೊರತು ಇನ್ಯಾವ

ಜೀವಿಯೂ ಅಲ್ಲ. ಈ ಸರಳ ಸತ್ಯದ ಅರಿವಾದರೆ ನಮ್ಮೆಲ್ಲರ ಬದುಕು ದೊಡ್ಡ ಕಂಟಕದಿಂದ ಪಾರಾಗ ಬಹುದು ಎನ್ನುವ ಈ ಲೇಖನದ ತಿರುಳು ಅರ್ಥಪೂರ್ಣ. ಜಾತಿ/ಧರ್ಮದ ಅಮಲಿನಲ್ಲಿರುವ ಜನರಿಗೆ ತಿಳಿಹೇಳುವ ಹಾಗೂ ತಪ್ಪು ತೀರ್ಮಾನ ಗಳಿಂದಾಗಿ ಹುಟ್ಟಿಕೊಂಡಿರುವ ದ್ವೇಷ ಮನೋಭಾವದ ಕುರಿತು ಮರುಚಿಂತನೆ ನಡೆಸಿ ವಾಸ್ತವವನ್ನು ಅರ್ಥ ಮಾಡಿಸುವ ಪ್ರಯತ್ನ ಈ ಲೇಖನದಲ್ಲಿದೆ.

*ಹಂಪಿ* ***ಡಾ॥ ಕೆ. ಮೋಹನ್‌ಕೃಷ್ಣ ರೈ***

## ಹೋರಾಟ ಭವಿಷ್ಯಕ್ಕಾಗಿ ಭವಿಷ್ಯ ನಿಧಿ ನೆಪಮಾತ್ರ

✉ ಮಾರುಕಟ್ಟೆ ಆರ್ಥಿಕತೆಯ ಭಾರತದಲ್ಲಿ **'ಕಾರ್ಮಿಕ'** ಎಂಬ ಪದದ ವ್ಯಾಖ್ಯಾನ ಮತ್ತು ವ್ಯಾಪ್ತಿ ಬದಲಾಗಿದೆ. ಲಕ್ಷಾಂತರ ರೂ.ಗಳ ಬೆನ್ನಟ್ಟಿ ತಂತ್ರಜ್ಞಾನ ಮಾರುಕಟ್ಟೆಯಲ್ಲಿ ತಮ್ಮ ಜೀವನ ಮಾರ್ಗವನ್ನರಸಿ ನಡೆದ ಕೋಟ್ಯಂತರ ಯುವಕರು, ಯುವತಿಯರು ಇಂದು ತಮ್ಮ ಭವಿಷ್ಯದ ನೆಲೆಗಾಗಿ ಪರದಾಡುತ್ತಿದ್ದಾರೆ. ಉದ್ಯೋಗ ನೀಡುವ ತನ್ನ ಸಾಂವಿಧಾನಿಕ ಹೊಣೆಗಾರಿಕೆಯಿಂದ ಕ್ರಮೇಣ ನುಣುಚಿಕೊಳ್ಳುತ್ತಿರುವ ಪ್ರಭುತ್ವದ ನೀತಿಯ ಅಂತರಂಗವನ್ನು ಗ್ರಹಿಸಲಾರದೆ ತಮ್ಮ ಭವಿಷ್ಯದ ನಿರ್ಮಾಣಕ್ಕಾಗಿ ದೇಶದ ಯುವಜನತೆ ಕ್ಷಣಿಕ ಸುಖದ ಲಾಲಸೆಗೆ ಬಲಿಯಾಗುತ್ತಿದ್ದಾರೆ. ಮತ್ತೊಂದೆಡೆ, ಕಾರ್ಮಿಕ ಎಂದರೆ ಕೇವಲ ಔದ್ಯಮಿಕ ಕ್ಷೇತ್ರವನ್ನು ಮಾತ್ರ ಪರಿಗಣಿಸುವ ಪರಂಪರೆಯಿಂದ ಹೊರಬರುತ್ತಿರುವ ಭಾರತೀಯ ಸಮಾಜ ಕೃಷಿ ಕ್ಷೇತ್ರದಲ್ಲಿ ಬಳಲಿ ಬೆಂಡಾಗುತ್ತಿರುವ ಕೃಷಿ ಕಾರ್ಮಿಕರ ಬವಣೆಯನ್ನು ಕ್ರಮೇಣ ಗ್ರಹಿಸುತ್ತಿದೆ. ಆದರೆ ಕೃಷಿ ಕಾರ್ಮಿಕರ ಭವಿಷ್ಯವನ್ನು ಕುರಿತು ಯಾವುದೇ ಸಕಾರಾತ್ಮಕ ಕ್ರಮ ಕೈಗೊಳ್ಳುತ್ತಿಲ್ಲ. ರೈತರ ಸಮಸ್ಯೆಗಳಿಗೆ ಕಿವಿ ಅಗಲಿಸಿ ಆಲಿಸುವ ಆಳುವ ವರ್ಗಗಳು ರೈತರ ಉತ್ಪಾದನಾ ಸಾಮರ್ಥ್ಯಕ್ಕೆ ಸಾಧನವಾದ ಕೃಷಿ ಕಾರ್ಮಿಕರ ಸಮಸ್ಯೆಗಳಿಗೆ ಕಿವಿಗೊಡುತ್ತಿಲ್ಲ. ಹಾಗಾಗಿಯೇ ರೈತರ ಆತ್ಮಹತ್ಯೆ ಸಾರ್ವಜನಿಕ ಚರ್ಚೆಗೊಳಗಾಗುತ್ತದೆ, ಕೃಷಿ ಕಾರ್ಮಿಕನ ಸಾವು ತೆರೆಮರೆಗೆ ಸರಿಯುತ್ತದೆ.

ದೇಶದ ಗ್ರಾಮೀಣ ಪ್ರದೇಶಗಳಿಂದ ನಗರ ಪ್ರದೇಶಗಳಿಗೆ ದಿನದಿಂದ ದಿನಕ್ಕೆ ಹೆಚ್ಚಾಗುತ್ತಿರುವ ವಲಸೆ ಪ್ರಮಾಣ ಕೃಷಿ ಕಾರ್ಮಿಕರ ಬವಣೆಗೆ ಸಾಕ್ಷಿಯಾಗಿದೆ. ತಮ್ಮ ಮೂಲ ನೆಲೆಯಲ್ಲಿ ಬಾಳಲಾಗದೆ ಅನಿವಾರ್ಯತೆಯಿಂದ ನಗರವಾಸಿ ಗಳಾಗುವ ಕೃಷಿ ಕಾರ್ಮಿಕರು, ಗ್ರಾಮೀಣ ಬಡ ಜನತೆ ನಗರಗಳ ಕೊಳೆಗೇರಿಗಳಲ್ಲಿ ಜೀವನ ಸವೆಸುತ್ತಿದ್ದಾರೆ. ಭಾರತ ಜಾಗತಿಕ ಮಟ್ಟದಲ್ಲಿ ತನ್ನದೇ ಆದ ಸ್ಥಾನ ಪಡೆಯಲು ಅವಶ್ಯವಾದ ಚತುಷ್ಪಥ ರಸ್ತೆ, ಮೆಟ್ರೋ, ಬುಲೆಟ್ ರೈಲು, ಮೇಲ್‌ಸೇತುವೆಗಳು, ಗಗನ ಚುಂಬಿ ಕಟ್ಟಡಗಳು ಮತ್ತು ಐಟಿ ಪಾರ್ಕ್‌ಗಳ ನಿರ್ಮಾಣದ ಸಂದರ್ಭದಲ್ಲಿ ಈ ವಲಸೆ ಕಾರ್ಮಿಕರ ಬೆವರು ಮತ್ತು ನೆತ್ತರು ಪ್ರತಿಯೊಂದು ಮರಳಿನ ಕಣದಲ್ಲೂ ಬೆರೆತಿರುತ್ತದೆ. ದೇಶ, ಭಾಷೆಗಳ ಅಸ್ಮಿತೆಗಳನ್ನು ತೊರೆದು ರಾಷ್ಟ್ರ ನಿರ್ಮಾಣ (?)ಕ್ಕಾಗಿ ತಮ್ಮ ಬೆವರು ಸುರಿಸುವ ಈ ಕಾರ್ಮಿಕರು ನಾಳಿನ ಕೂಳಿಗಾಗಿ ಚಿಂತಿಸುವ ಪರಿಸ್ಥಿತಿ ಉಂಟಾಗಿದೆ. ನಿಜ, ಇವರು ನಿರುದ್ಯೋಗಿಗಳಾಗಿಲ್ಲ. ಆದರೆ ದಿನಗೂಲಿ ನೀಡುವ ಉದ್ಯೋಗ ಇವರ ಜೀವನವನ್ನು ಸುಸ್ಥಿರಗೊಳಿಸುವುದಿಲ್ಲ. ಭೂಮಿಯನ್ನೇ ನಂಬಿ ಬದುಕಲು ಸಿದ್ಧರಾಗಿರುವ ಸಣ್ಣ ರೈತರು, ಕೃಷಿ ಕಾರ್ಮಿಕರು ತಾವು ನಿಂತ ನೆಲ ಕ್ರಮೇಣ ಕುಸಿಯುತ್ತಿರುವುದನ್ನು ಗಮನಿಸದೆ ದೇಶದ ಪ್ರಗತಿಗಾಗಿ (?) ಬೆವರು ಸುರಿಸುತ್ತಿದ್ದಾರೆ. ಶ್ರಮ ಇವರ ನಿಧಿ, ಅದೇ ಅವರ ಭವಿಷ್ಯದ ನಿಧಿ. ಆದರೆ ಇವರಿಗೆ ಭವಿಷ್ಯವೂ ಇರುವುದಿಲ್ಲ, ಭವಿಷ್ಯ ನಿಧಿಯೂ ಇರುವುದಿಲ್ಲ. ಇದು ವಾಸ್ತವ.

ನರೇಂದ್ರ ಮೋದಿ ಸರ್ಕಾರದ ನೂತನ ಭವಿಷ್ಯ ನಿಧಿ ಕಾಯ್ದೆಯನ್ನು ವಿರೋಧಿಸಿ ಉಗ್ರ ಹೋರಾಟ ನಡೆಸಿದ ಬೆಂಗಳೂರಿನ ಗಾರ್ಮೆಂಟ್ ಕಾರ್ಮಿಕರ ಹೋರಾಟಕ್ಕೆ ಸಿಕ್ಕ ಪ್ರತಿಫಲ ಪೊಲೀಸರ ಲಾಠಿ ಏಟು, ಗೋಲಿಬಾರ್ ಮತ್ತು ಕೋರ್ಟ್ ಕಟಕಟೆ. ನಿಜ, ಒತ್ತಡಕ್ಕೆ ಮಣಿದು ಕೇಂದ್ರ ಸರ್ಕಾರ ತನ್ನ ನೀತಿಯನ್ನು ಹಿಂಪಡೆದಿದೆ. ಆದರೆ ಇದು ಸಮಸ್ಯೆಯ ಪರಿಹಾರವಲ್ಲ. ಭವಿಷ್ಯ ನಿಧಿ ದುಡಿಯುವ ವರ್ಗಗಳ ಆಶಾಕಿರಣವಷ್ಟೆ. ಇವರ ಭವಿಷ್ಯ ಇರುವುದು ನಿಧಿಯಲ್ಲಿ ಅಲ್ಲ, ಸುಸ್ಥಿರ ಬದುಕಿನಲ್ಲಿ. ಈ ದೇಶದಲ್ಲಿ ಕಳೆದ ಮೂರು ದಶಕಗಳಲ್ಲಿ ಭಯೋತ್ಪಾದನೆಗೆ ಳಳ ಸಾವಿರ ಜನ ಬಲಿಯಾಗಿದ್ದಾರೆ. ನೈಸರ್ಗಿಕ ವಿಕೋಪಗಳಿಗೆ ಹಲವು ಸಾವಿರ ಜನರು ಬಲಿಯಾಗಿದ್ದಾರೆ. ಬರಗಾಲ ಮತ್ತು ಕ್ಷಾಮಕ್ಕೆ ಸಾವಿರಾರು ಜನರು ಬಲಿಯಾಗಿದ್ದಾರೆ. ಆದರೆ ಜಾಗತೀಕರಣ ನೀತಿಯ ಪರಿಣಾಮ ಉಂಟಾಗಿರುವ ಕೃಷಿ ಬಿಕ್ಕಟ್ಟಿಗೆ ಸಿಲುಕಿ ಲಕ್ಷಾಂತರ ರೈತರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಆದರೂ ಭಾರತೀಯ ಪ್ರಭುತ್ವದ ದೃಷ್ಟಿಯಲ್ಲಿ ಭಯೋತ್ಪಾದನೆ ಮುಖ್ಯ ಸವಾಲಾಗಿದೆ. ಕೃಷಿ ಬಿಕ್ಕಟ್ಟು ಅಲ್ಲ. ಏಕೆಂದರೆ ರೈತರ ಆತ್ಮಹತ್ಯೆಗೆ ಕಾರಣಕರ್ತರಾರು ಎಂಬ ಪ್ರಶ್ನೆಗೆ ಉತ್ತರ ದೊರೆಯುವುದಿಲ್ಲ. ದೊರೆತರೂ ಶಿಕ್ಷೆ ಸಲಾಗುವುದಿಲ್ಲ. ನವ ಉದಾರವಾದದ ಪ್ರತಿಫಲವನ್ನು ದೇಶದ ಕಾರ್ಮಿಕರು ಅನುಭವಿಸುತ್ತಿದ್ದಾರೆ. ಭ್ರಮಾಲೋಕದಲ್ಲಿ ವಿಹರಿಸುತ್ತಿರುವ ಭಾರತದ ಸುಶಿಕ್ಷಿತ ಮೇಲ್ವರ್ಗಗಳು ತಮ್ಮ ಹಿತಕರ ವಲಯಗಳಲ್ಲಿ ನೆಮ್ಮದಿಯಿಂದಿದ್ದಾರೆ. ದುಡಿಯುವ ವರ್ಗಗಳು ನಾಳಿನ ಚಿಂತೆಯಲ್ಲಿ ಬಸವಳಿಯುತ್ತಿವೆ.

ಬೆಂಗಳೂರಿನ ಗಾರ್ಮೆಂಟ್ ನೌಕರರ ಪ್ರತಿಭಟನೆಯ ಹಿಂದೆ ಮಡುಗಟ್ಟಿರುವ ಶ್ರಮಿಕ ವರ್ಗಗಳ ಆಕ್ರೋಶವನ್ನು ಆಳುವ ವರ್ಗಗಳು ಗ್ರಹಿಸುತ್ತವೆಯೇ ? ಇದು ಮೂರ್ತ ಪ್ರಶ್ನೆ.

ಮೈಸೂರು **ನಾ. ದಿವಾಕರ**

## ಡಾ॥ ಕಲಬುರ್ಗಿಯವರನ್ನು ಕೊಲ್ಲಬಹುದು ವಿಚಾರಗಳನ್ನು ಕೊಲ್ಲಬಹುದೆ ?

*ಕೊಲ್ಲಬಹುದು ವ್ಯಕ್ತಿಯನ್ನು,*
*ವಿಚಾರ ಕೊಲ್ಲಬಹುದೇನಯ್ಯಾ*
*ಗುಂಡು ಹಾಕಬಹುದು ವ್ಯಕ್ತಿಗೆ, ವಿಚಾರಕ್ಕೆ*
*ಗುಂಡು ಹೊಡೆಯಬಹುದೇನಯ್ಯಾ ?*
*ಜ್ಯೋತಿಯ ಆರಿಸಬಹುದು,*
*ಸೂರ್ಯನ ಆರಿಸಲಾದೀತೆ ?*
*ಬೆಳಕ ಮರೆಮಾಡಬಹುದು,*
*ಚಂದ್ರನ ಬೆಳದಿಂಗಳ ನಂದಿಸಬಹುದೇನಯ್ಯಾ*
*ವಿಶ್ವ ಸತ್ಯಂಪೇಟೆ ಪ್ರಿಯ ಬಸವಣ್ಣ*

ರಾಷ್ಟ್ರವ್ಯಾಪಿಯಾಗಿಯೂ ಕಲಬುರಗಿಯವರ ಹತ್ಯೆಯನ್ನು ವಿಚಾರವಾದಿಗಳು, ಮನುಷ್ಯತ್ವ ಉಳ್ಳವರು ಖಂಡಿಸಿದರು. ಈವರೆಗೂ ಕಲಬುರಗಿಯವರನ್ನು ಹತ್ಯೆ ಮಾಡಿದ ಹಂತಕರು ಸಿಕ್ಕಿಲ್ಲ. ಸಿಗುವ ಯಾವ ಲಕ್ಷಣಗಳೂ ಗೋಚರಿಸುತ್ತಿಲ್ಲ. ಅವರ ಕೊಲೆಯನ್ನು ಯಾರು ಮಾಡಿಸಿದ್ದಾರೆ ಎಂಬುದು ಸೂರ್ಯ ಪ್ರಕಾಶದಷ್ಟೆ ಸ್ಪಷ್ಟವಾಗುತ್ತಿದೆ. ಆದರೆ ಜನಸಾಮಾನ್ಯನಿಗೆ ಈ ನೀಚ ಕೃತ್ಯದ ಹಿಂದೆ ಇರುವವರು ಯಾರು ಎಂಬುದು ಮನದಟ್ಟಾಗ ಬೇಕೆಂಬುದು ನನ್ನ ಬಯಕೆ.

ಹಿಂದೆ ಸಾಕ್ರೆಟಿಸ್‌ಗೆ ವಿಷಪ್ರಾಶನ ಮಾಡಿಸಿದವರು, ಗೆಲಿಲಿಯೋನ ಗಲ್ಲಿಗೇರಿಸಿದವರು, ಚಾರ್ವಾಕನ ಕೊಂದವರು, ಕಲಬುರಗಿಯ ಕಡಕೋಳ ಮಡಿವಾಳಪ್ಪನನ್ನು ಊರು ಬಿಟ್ಟು ಓಡಿಸಿದವರು, ಕಲಬುರಗಿ ಶರಣ ಬಸವನನ್ನು ಬೆನ್ನಟ್ಟಿ ಕಾಡಿ ಪೀಡಿಸಿದವರು, ಜೇವರ್ಗಿಯ ಕೊನೆಯ ವಚನಕಾರ ಷಣ್ಮುಖ ಶಿವಯೋಗಿಗಳನ್ನು ಕೊಂದವರು ಯಾರು ? ಎಂಬುದು ಇತಿಹಾಸ ದಾಖಲಿಸಿ ಇಟ್ಟಿದೆ. ಡಾ॥ ಕಲಬುರಗಿಯವರ ಸಾವು ಸಹ ಅದೇ ಶಕ್ತಿಗಳೇ ನುಂಗಿಹಾಕಿವೆ ಎಂಬ ಗುಮಾನಿ ನನಗೆ. ಇದು ಸ್ಪಷ್ಟವಾಗಬೇಕಿದೆ.

ಬದುಕಿರುವ ಕಲಬುರಗಿಯವರು ದೈಹಿಕವಾಗಿ ನಮ್ಮೊಂದಿಗೆ ಇಂದು ಇಲ್ಲದಂತೆ ಕಾಣುತ್ತಾರಾದರೂ 'ಎತ್ತೆತ್ತ ನೋಡಿದರತ್ತ ಅವರದೆ ಬಳ್ಳಿ, ಎತ್ತಿ ನೋಡಿದರೆ ಶರಣರ ವಿಚಾರವಯ್ಯಾ' ಎಂಬಂತೆ ಅವರೆ ಎಲ್ಲೆಡೆ ಹರಡಿಕೊಂಡಿದ್ದಾರೆ. ಕಲಬುರಗಿಯವರು ಮನುಕುಲ ಮರೆಯದಂತೆ ಅಮರರಾಗಿದ್ದಾರೆ. 'ಎಮ್ಮರಿಗೆ ಸಾವಿಲ್ಲ. ಎಮ್ಮವರು ಸಾವನರಿಯರು. ಅರಿತವನು ಎಂತು ಸತ್ತನು ?' ಎಂಬಂತೆ ಕಲಬುರಗಿಯವರ ವಿಚಾರಗಳು ಜೀವಂತವಾಗಿವೆ. ಎಲ್ಲರ ಎದೆಯೊಳಗೂ ಅವರು ಸದಾ ಧಿಮಿಗುಡುವ ಜಲಧಾರೆಯಾಗಿದ್ದಾರೆ. ಜೀವಜಲ ಮನುಷ್ಯನಲ್ಲಿ ಎಂದು ಬತ್ತುತ್ತದೋ ಅಂದೇ ಕಲಬುರಗಿಯವರಿಗೆ ಸಾವು. ಅದು ಇರುವವರೆಗೂ ಕಲಬುರಗಿಯವರು ಜೀವಂತವಾಗಿರುತ್ತಾರೆ.

*ಶಹಾಪುರ* ***ವಿಶ್ವಾರಾಧ್ಯ ಸತ್ಯಂಪೇಟೆ***

# ವ್ಯಂಗ್ಯ - ಕಿರಣ

- ಸಾನ್ವಿ ಪಿ.







## ಚುನಾವಣಾ ಫಲಿತಾಂಶ : 'ಪಂಚಕರ್ಮ ಚಿಕಿತ್ಸೆ'

ಅಸ್ಸಾಂ ಶಕ್ತಿವರ್ಧಕ ಚಾಯ್







# ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ

○ ಎಸ್. ಆರ್. ಭಟ್

ದಿವಂಗತ ಎಸ್. ರಾಮಚಂದ್ರ ಭಟ್ಟರು ನವಕರ್ನಾಟಕ ಪ್ರಕಾಶನ ಸಂಸ್ಥೆಯ ಸ್ಥಾಪಕರಲ್ಲೊಬ್ಬರು ಹಾಗೂ ಸ್ಥಾಪಕ ಕಾರ್ಯದರ್ಶಿ. ಸಂಸ್ಥೆಯಲ್ಲಿ ಹಲವಾರು ವರ್ಷಗಳು ಕಾರ್ಯ ನಿರ್ವಹಿಸಿ ಭದ್ರವಾದ ನೆಲೆ ಸೃಷ್ಟಿಸಿದವರು. ಕೆಲಕಾಲ 'ಕೆಂಬಾವುಟ' ಪತ್ರಿಕೆಯ ಸಂಪಾದಕರಾಗಿದ್ದ ಭಟ್ಟರು ಬೆಂಗಳೂರಿನಿಂದ ಪ್ರಕಟವಾದ ಸೈದ್ಧಾಂತಿಕ ಮಾಸಪತ್ರಿಕೆ 'ಅರುಣ'ದ ಸಂಪಾದಕರೂ ಆಗಿದ್ದರು. ಕನ್ನಡ, ಸಂಸ್ಕೃತ, ಇಂಗ್ಲಿಷಿನಲ್ಲಿ ಪ್ರಬುದ್ಧರಾಗಿದ್ದ ಅವರು ವಿದ್ವಾಂಸರು. ವೇದಾಧ್ಯಯನ ಮಾಡಿದ್ದರು. ಭಾರತದ ಪ್ರಾಚೀನ ಇತಿಹಾಸವನ್ನು ಚೆನ್ನಾಗಿ ಬಲ್ಲವರಾಗಿದ್ದರು. 'ಕುಮಾರವ್ಯಾಸ ಭಾರತ' ಕಂಠಪಾಠ ಮಾಡಿಕೊಂಡಿದ್ದರು, ಅಧ್ಯಯನಶೀಲರಾಗಿದ್ದ ಭಟ್ಟರು ಆಳವಾದ ವಿಶ್ಲೇಷಣೆಗೆ ಹೆಸರಾಗಿದ್ದರು. ೧೯೭೭ರ ಅಕ್ಟೋಬರ್ ತಿಂಗಳಲ್ಲಿ ಅವರು ಬರೆದ 'ಕರ್ನಾಟಕದಲ್ಲಿ ಕಾರ್ಮಿಕ ಚಳವಳಿ ನಡೆದುಬಂದ ದಾರಿ' ಪ್ರಕಟಿಸುತ್ತಿದ್ದೇವೆ.

– ಸಂ.

## ರಾಷ್ಟ್ರೀಯ ಹಿನ್ನೆಲೆ

'ವಿಶ್ವದ ಕಾರ್ಮಿಕರೇ ಒಂದಾಗಿರಿ' ಎಂದು ೧೮೪೮ರಲ್ಲಿ ಕಾರ್ಲ್ ಮಾರ್ಕ್ಸ್ ಮತ್ತು ಫ್ರೆಡರಿಕ್ ಎಂಗೆಲ್ಸ್‌ರವರು ತಮ್ಮ 'ಕಮ್ಯೂನಿಸ್ಟ್ ಪ್ರಣಾಳಿಕೆ'ಯಲ್ಲಿ ಕರೆ ನೀಡಿದಾಗ ಕರ್ನಾಟಕದ ಸಮೇತ ಭಾರತದಲ್ಲಿ ಎಲ್ಲಿಯೂ, ಯಾವ ವಿಧವಾದ ಟ್ರೇಡ್ ಯೂನಿಯನ್ ಚಳವಳಿಯೂ ಇದ್ದಿರಲಿಲ್ಲ. ಇರುವುದಾದರೂ ಹೇಗೆ ? ಭಾರತದಲ್ಲಿ ಆಗ ಯಂತ್ರ ಕೈಗಾರಿಕೆ ಇನ್ನೂ ತಲೆ ಎತ್ತಿರಲಿಲ್ಲ. ಆದುದರಿಂದ ಆಧುನಿಕ ಕೈಗಾರಿಕಾ ಕಾರ್ಮಿಕ ವರ್ಗವೂ ಅಸ್ತಿತ್ವಕ್ಕೆ ಬಂದಿರಲಿಲ್ಲ. ೧೭೫೭ರ ಪ್ಲಾಸಿಯ ಕದನದಲ್ಲಿ ಪ್ರಾರಂಭವಾದ ಕ್ರಿಯಾಸರಣಿ ಆಗ ತಾನೇ ಪೂರ್ಣಗೊಂಡಿದ್ದು, ನಮ್ಮ ದೇಶ ಸಾಮಾನ್ಯ ಸಮಗ್ರವಾಗಿ ಬ್ರಿಟಿಷರ ಅಧೀನಕ್ಕೆ ಬಂದಿದ್ದ ಕಾಲವದು.

ಬ್ರಿಟಿಷರು ಬಹಳ ಸುಲಭವಾಗಿ ಭಾರತವನ್ನು ಜಯಿಸಿದರು. ಭಾರತದ ಅಂದಿನ ರಾಜಕೀಯ–ಸಾಮಾಜಿಕ ಪರಿಸ್ಥಿತಿ ಅವರ ವಿಜಯಕ್ಕೆ ಅನುಕೂಲಕರವಾಗಿತ್ತು.

### ಗ್ರಾಮೀಣ ಸಮಾಜಗಳು

ಭಾರತವು ಇಂದಿನಂತೆಯೆ ಅಂದು ಕೂಡ ಗ್ರಾಮ ಪ್ರಧಾನವಾದ ದೇಶವಾಗಿತ್ತು. ಆದರೆ, ಅಂದಿನ ಗ್ರಾಮೀಣ ಸಮಾಜಗಳು ಇಂದಿಗಿಂತ ಭಿನ್ನವಾಗಿದ್ದವು. ಗ್ರಾಮದ ಭೂಮಿ ಅಂದು ಹೆಚ್ಚಾಗಿ ಸಮಗ್ರ ಗ್ರಾಮಸ್ಥರ ಒಡೆತನಕ್ಕೆ ಸೇರಿತ್ತು. ಶ್ರಮ ವಿಭಜನೆ ಮತ್ತು ಉತ್ಪಾದನೆಯ ವಿತರಣೆಗಳು ಜಾತಿ ಪದ್ಧತಿಯ ಮೇಲೆ ಆಧರಿತವಾಗಿದ್ದವು. ಬೇಸಾಯ ಮತ್ತು ನೇಯ್ಗೆಯೇ ಮುಂತಾದ ಕೆಲವು ಪರಂಪರಾಗತ ಕುಶಲ ಕಸುಬುಗಳ (ಇವು ಕುಲ ಕಸುಬುಗಳೂ ಆಗಿದ್ದವು) ಆರ್ಥಿಕ ತಳಹದಿಯ ಮೇಲೆ ಗ್ರಾಮಜೀವನ ನಿಂತಿತ್ತು. ಒಂದೊಂದು ಗ್ರಾಮದಲ್ಲೂ ಬಡಗಿ, ಕಮ್ಮಾರ, ಅಕ್ಕಸಾಲಿಗ, ಕುಂಬಾರ, ಗಾಣಿಗ, ಮಡಿವಾಳ, ಕ್ಷೌರಿಕ, ಮೊದಲಾದ ಕುಶಲ ಕರ್ಮಿಗಳ ಒಂದೊಂದು ಕುಟುಂಬಗಳಾದರೂ ಇದ್ದು, ಈ ಗ್ರಾಮೀಣ ಸಮಾಜಗಳು ತಮ್ಮ ಅವಶ್ಯಕತೆಗಳನ್ನು ಹೆಚ್ಚು ಕಡಿಮೆ ತಾವೇ ಪೂರೈಸಿಕೊಳ್ಳುತ್ತಿದ್ದ ಪುಟ್ಟ ಪುಟ್ಟ ಸ್ವಯಂಪೂರ್ಣ ಜಗತ್ತುಗಳಾಗಿದ್ದವು. ರಾಜನಿಗೆ ಸಲ್ಲಬೇಕಾದ ಕಂದಾಯ ಪಾವತಿಯ ಹೊರತು, ಗ್ರಾಮದ ಹೊರಗಿನ ಜಗತ್ತಿನೊಂದಿಗೆ ಅವುಗಳಿಗೆ ವಿಶೇಷ ಸಂಬಂಧಗಳಿರಲಿಲ್ಲ. ವಿದೇಶೀ ಆಕ್ರಮಣಗಳು, ಸ್ವದೇಶೀ ಯುದ್ಧಗಳು,







ರಾಜ ವಂಶಗಳ ಅಳಿವು ಉಳಿವುಗಳೂ, ರಾಜ್ಯಗಳ ಹಸ್ತಾಂತರ ಅಥವಾ ಸಾಮ್ರಾಜ್ಯಗಳ ಹುಟ್ಟು ಸಾವುಗಳು, ಅವುಗಳ ಆಂತರಿಕ ರಚನೆಯ ಮೇಲೆ ಹೆಚ್ಚಿನ ಪರಿಣಾಮ ಬೀರಿರಲಿಲ್ಲ. ದೇಶದ ರಾಜಕೀಯ ವಾತಾವರಣದಲ್ಲಿ ಆಗಾಗ ಸುಳಿದು ಮಾಯವಾಗುತ್ತಿದ್ದ ಈ ರಾಜಕೀಯ ಕಾರ್ಮೋಡಗಳು ಅವುಗಳ ತಲೆಯ ಮೇಲೆ ಹಾದು ಹೋಗುತ್ತಿದ್ದವು. ತಲೆ ತಲಾಂತರಗಳಿಂದ ಹೀಗೆ ವಿಶೇಷ ವ್ಯತ್ಯಾಸಗಳಿಲ್ಲದೆ, ತಮ್ಮ ಪಾಡಿಗೆ ತಾವು ಬಾಳಿ ಬದುಕಿಕೊಂಡು ಬಂದಿದ್ದ ಈ ಸ್ವಯಂಪೂರ್ಣ ಗ್ರಾಮೀಣ ಸಮಾಜಗಳಿಗೆ ಇಂತಹ ರಾಜಕೀಯ ಬದಲಾವಣೆಗಳಲ್ಲಿ ಹೆಚ್ಚಿನ ಆಸಕ್ತಿಯೂ ಇರಲಿಲ್ಲ.

**ರಾಜಕೀಯ ಅವ್ಯವಸ್ಥೆ**

ಭಾರತದಲ್ಲಿ ಬ್ರಿಟಿಷರು ತಮ್ಮ ವಿಜಯ ಯಾತ್ರೆಯನ್ನು ಆರಂಭಿಸಿದ ಈ ಕಾಲದಲ್ಲಿ ದೇಶದ ತಳಮಟ್ಟದಲ್ಲಿ ಇಂತಹ ಪರಿಸ್ಥಿತಿಯಿದ್ದರೆ, ಮೇಲ್ಮಟ್ಟದಲ್ಲಿ ರಾಜಕೀಯ ಅವ್ಯವಸ್ಥೆ ತಲೆದೋರಿತ್ತು. ಆಗ ಯಾವ ಕೇಂದ್ರೀಯ ಪ್ರಭುತ್ವವೂ ಇರಲಿಲ್ಲ. ಮೊಗಲ್ ಸಾಮ್ರಾಜ್ಯ ಅವನತಿ ಹೊಂದಿತ್ತು. 'ಮೊಗಲ್ ಪ್ರಾಂತಪಾಲರು ಪ್ರಬಲರಾಗಿ, ತಮ್ಮ ಸ್ವಾತಂತ್ರ್ಯವನ್ನು ಸಾರಿ, ಸಾಮ್ರಾಜ್ಯದ ಅಧಿಕಾರವನ್ನು ಮುರಿದಿದ್ದರು. ಈ ಪ್ರಾಂತಪಾಲರ ಪ್ರಾಬಲ್ಯವನ್ನು ಮರಾಠರು ಮುರಿದರು. ಮರಾಠರ ಅಧಿಕಾರವನ್ನು (ಮೂರನೇ ಪಾಣಿಪತ ಯುದ್ಧದಲ್ಲಿ) ಪಠಾಣರು ಮುರಿದರು. ಹೀಗೆ ಎಲ್ಲರೂ ಎಲ್ಲರೊಂದಿಗೆ ಕಾದಾಡುತ್ತಿದ್ದ ಇಂತಹ ಸನ್ನಿವೇಶದಲ್ಲಿ, ಆಗತಾನೇ ರಂಗಪ್ರವೇಶ ಮಾಡಿದ್ದ ಬ್ರಿಟಿಷರಿಗೆ ಎಲ್ಲರನ್ನೂ ಸುಲಭವಾಗಿ ನಿಗ್ರಹಿಸಲು ಸಾಧ್ಯವಾಯಿತು.' (ಮಾರ್ಕ್ಸ್ : ಭಾರತದಲ್ಲಿ ಬ್ರಿಟಿಷ್ ಆಡಳಿತೆಯ ಭಾವೀ ಪರಿಣಾಮಗಳು.)

**ಬ್ರಿಟಿಷ್ ಆಡಳಿತೆಯ ಪರಿಣಾಮ**

ಬ್ರಿಟಿಷರು ಭಾರತವನ್ನು ನಿರ್ದಯವಾಗಿ ಕೊಳ್ಳೆ ಹೊಡೆದರು. ಭಾರತದ ಸಂಪತ್ತನ್ನು ಬೊಗಸೆ ಬೊಗಸೆಯಾಗಿ ದೋಚಿದರು. ಅಂದಿನ ಪ್ರಧಾನ ಸಂಪನ್ಮೂಲವಾದ ಭೂಮಿಯಿಂದ ಎಷ್ಟು ಹಣ ಹಿಂಡಲು ಸಾಧ್ಯವೋ, ಅಷ್ಟನ್ನು ಹಿಂಡುವ ಸಲುವಾಗಿ, ಭೂ ಕಂದಾಯವನ್ನು ಹಿಂದಿಗಿಂತ ಮೂರು, ನಾಲ್ಕು ಪಾಲುಗಳಷ್ಟು ಹೆಚ್ಚಿಸಿದರು. ಇದಕ್ಕೋಸ್ಕರ, ಶತಮಾನಗಳಿಂದ ಅಸ್ತಿತ್ವದಲ್ಲಿದ್ದ ಗ್ರಾಮೀಣ ಭೂ ಸಂಬಂಧಗಳನ್ನು ಅಡಿಮೇಲು ಮಾಡಿ, ಗ್ರಾಮ ಸಮಾಜಕ್ಕೆ ಭೂಮಿಯ ಮೇಲಿದ್ದ ಸಾಮೂಹಿಕ ಒಡೆತನವನ್ನು ನಾಶ ಮಾಡಿದರು. ಜಮೀನುದಾರಿ ಮತ್ತು ರಯತ್ವಾರಿ ಪದ್ಧತಿಗಳನ್ನು ಸ್ಥಾಪಿಸಿ, ಬ್ರಿಟಿಷ್ ಮಾದರಿಯಲ್ಲಿ ಹೊಸ ಭೂ ಮಾಲಕ ವರ್ಗ ಒಂದನ್ನು ನಿರ್ಮಿಸಿದರು. ಇವುಗಳ ಪರಿಣಾಮವಾಗಿ ರೈತರು ಭೂಮಿಯ ಮೇಲಣ ತಮ್ಮ ಪರಂಪರಾಗತ ಹಕ್ಕನ್ನು ಕಳೆದುಕೊಂಡು, ಒಂದೋ ಗೇಣಿದಾರರಾಗಿ ಅಥವಾ ಭೂಹೀನ ಕೃಷಿ ಕೂಲಿಗಾರರಾಗಿ ಪರಿವರ್ತಿಸಲ್ಪಟ್ಟರು.

**ಗುಡಿ ಕೈಗಾರಿಕೆಗಳ ನಾಶ**

ಇದರೊಂದಿಗೆ, ಆಗ ಉದಯೋನ್ಮುಖವಾಗಿದ್ದ ಬ್ರಿಟಿಷ್ ಯಂತ್ರ ಕೈಗಾರಿಕೆಗೆ ಭಾರತವನ್ನು ಒಂದು ಮಾರುಕಟ್ಟೆಯಾಗಿ ಮಾರ್ಪಡಿಸುವ ಉದ್ದೇಶದಿಂದ, ಇಲ್ಲಿನ ಗುಡಿ ಕೈಗಾರಿಕೆಗಳನ್ನು – ಮುಖ್ಯವಾಗಿ ನೇಯ್ಗೆ ಕೈಗಾರಿಕೆಯನ್ನು – ಬ್ರಿಟಿಷರು ಸಂಘಟಿತವಾಗಿ ನಿರ್ನಾಮ ಮಾಡಿದರು. ಭಾರತದಿಂದ ರಫ್ತು ಮಾಡಲ್ಪಡುತ್ತಿದ್ದ ಹತ್ತಿ ಬಟ್ಟೆಯ ಮೇಲೆ ವಿಪರೀತ ಸುಂಕ ಏರಿಸಿ, ಹೊರ ದೇಶಗಳಲ್ಲಿ ಅದು ಮಾರಾಟವಾಗದಂತೆ ತಡೆಹಿಡಿಯಲಾಯಿತು. ಬ್ರಿಟಿಷ್ ಬಟ್ಟೆಗಳ ಮೇಲಿನ ಸುಂಕವನ್ನು ಇಳಿಸಲಾಯಿತು. ಇದು ಸಾಲದ್ದಕ್ಕೆ ಜಗತ್ಪ್ರಸಿದ್ಧ ಢಾಕ್ಕಾ ಮಸ್ಲಿನ್ ಕೆಲಸಗಾರರಂತಹ ಕುಶಲ ಕರ್ಮಿಗಳ ಬೆರಳುಗಳನ್ನೇ ಕತ್ತರಿಸಿ, ಆ ಕೈಗಾರಿಕೆಯನ್ನೇ ನಾಶ ಮಾಡಲಾಯಿತು. ೧೮೨೪ರಲ್ಲಿ ೧,೫೦,೦೦೦ದಷ್ಟಿದ್ದ ಢಾಕ್ಕಾದ ಜನಸಂಖ್ಯೆ, ೧೮೩೭ರಲ್ಲಿ ೨೦,೦೦೦ಕ್ಕೆ ಇಳಿಯಿತು. ಲೋಹೋದ್ಯಮ ಮುಂತಾದ ಇತರ ಕುಶಲ ಕಸುಬುಗಳ ಅವಸ್ಥೆಯೂ ಇದೇ ಆಗಿತ್ತು. ಹೀಗೆ ತಮ್ಮ ಪಾರಂಪರಿಕ ಉದ್ಯೋಗಗಳನ್ನು ಕಳಕೊಂಡ ಈ ಕುಶಲ ಕರ್ಮಿಗಳು, ಜೀವನೋಪಾಯಕ್ಕೆ ಬೇರೆ ಗತಿಯಿಲ್ಲದೆ, ಭೂಹೀನ ರೈತರ ಅಥವಾ ಕೃಷಿ ಕೂಲಿಗಾರರ ಸಾಲವನ್ನು ಸೇರಿ ಹಳ್ಳಿಗಳ ಮೇಲಿನ ಹೊರೆಯನ್ನು ಇನ್ನಷ್ಟು ಹೆಚ್ಚಿಸಿದರು.

ಮುಂದೆ ಆಧುನಿಕ ಯಂತ್ರ ಕೈಗಾರಿಕೆ ಭಾರತವನ್ನು ಪ್ರವೇಶಿಸಿದಾಗ, ಈ ಭೂಹೀನ ಜನಸಮುದಾಯದ ಒಂದು ಭಾಗವೇ ಪೇಟೆಗಳನ್ನು ಸೇರಿ, ಭಾರತದ ಪ್ರಥಮ ಕೈಗಾರಿಕಾ ಕಾರ್ಮಿಕರಾಗಿ ರೂಪಾಂತರಗೊಂಡರು.

**ಆಧುನಿಕ ಕೈಗಾರಿಕೆಯ ಜನನ**

೧೯ನೇ ಶತಮಾನದ ಮಧ್ಯಭಾಗದಲ್ಲಿ ಈ ಕ್ರಿಯೆ ಆರಂಭವಾಯಿತು. ರೈಲ್ವೆ ಮಾರ್ಗಗಳ ಸ್ಥಾಪನೆ ಇದಕ್ಕೆ ನಾಂದಿಯಾಯಿತು. ೧೮೪೫ರಲ್ಲಿ ಮೊದಲ ರೈಲ್ವೆ ಕಂಪೆನಿಗಳು ಸ್ಥಾಪಿಸಲ್ಪಟ್ಟು, ೧೮೫೩ರಲ್ಲಿ ೨೦ ಮೈಲುಗಳಷ್ಟು ರೈಲ್ವೆ ಮಾರ್ಗಗಳು ನಿರ್ಮಾಣವಾದವು. ೧೮೫೭ರೊಳಗೆ ಇದು ೨೮೮ ಮೈಲುಗಳಿಗೇರಿತು. ತಮಗೆ ಅವಶ್ಯವಾದ ಹತ್ತಿ ಮುಂತಾದ ಭಾರತದ ಕಚ್ಚಾ ಸಾಮಗ್ರಿಗಳನ್ನು ಕಡಿಮೆ ದರದಲ್ಲಿ ಬಂದರುಗಳಿಗೆ ಸಾಗಿಸಲು ಅನುಕೂಲವಾಗುವ ದೃಷ್ಟಿಯಿಂದ ಬ್ರಿಟಿಷರು ರೈಲ್ವೆ ಮಾರ್ಗಗಳನ್ನು ಮೊದಲು ಸ್ಥಾಪಿಸತೊಡಗಿದ್ದರೂ, ೧೮೫೭–೫೯ರ ಪ್ರಥಮ ಸ್ವಾತಂತ್ರ್ಯ ಯುದ್ಧದ ತರುವಾಯ, ಅವುಗಳ ಮಿಲಿಟರಿ ಪ್ರಾಮುಖ್ಯತೆಯನ್ನು ಬ್ರಿಟಿಷರು ಗಮನಿಸಿದರು. ತದನಂತರ ರೈಲ್ವೆ ರಸ್ತೆಗಳ ನಿರ್ಮಾಣ ಭರದಿಂದ ಮುಂದುವರಿಯಿತು. ಉದ್ಯೋಗಾರ್ಥಿಗಳಾಗಿ ಹಳ್ಳಿಗಳಿಂದ ಬಂದಿದ್ದ ನೂರಾರು ಮಂದಿ ಭೂಹೀನರಿಗೆ ಈ ನಿರ್ಮಾಣ ಕಾರ್ಯದಲ್ಲಿ ಕೆಲಸ ದೊರೆಯಿತು. ದೇಶದಲ್ಲಿ ಆಧುನಿಕ ಕಾರ್ಮಿಕ ವರ್ಗ ಹೀಗೆ ಜನ್ಮ ತಳೆಯಿತು.

**ಕೈಗಾರಿಕಾ ಬೆಳವಣಿಗೆ ಮತ್ತು ಕಾರ್ಮಿಕ ವರ್ಗ**

ಕಬ್ಬಿಣ ಮತ್ತು ಕಲ್ಲಿದ್ದಲುಗಳನ್ನು ಹೊಂದಿರುವ ಭಾರತದಂತಹ ದೊಡ್ಡ ದೇಶದ ಸಾರಿಗೆ ವ್ಯವಸ್ಥೆಯಲ್ಲಿ ಒಮ್ಮೆ ಯಂತ್ರಗಳ ಪ್ರವೇಶವಾದರೆ, ಅಲ್ಲಿ ಆಧುನಿಕ ಯಂತ್ರ ಕೈಗಾರಿಕೆಯ ಬೆಳವಣಿಗೆ ಅನಿವಾರ್ಯವೆಂದು ಮಾರ್ಕ್ಸ್ ಅಂದೇ ಹೇಳಿದ್ದರು. ಮಾರ್ಕ್ಸ್‌ರವರ ಈ ಭವಿಷ್ಯವಾಣಿ ನಿಜವಾಯಿತು. ರೈಲ್ವೇಗಳ ನಿರ್ಮಾಣ ಮತ್ತು ವಿಸ್ತರಣೆಯೊಂದಿಗೇ, ಅವುಗಳಿಗೆ ಅವಶ್ಯವಾದ ಕಲ್ಲಿದ್ದಲು ಗಣಿ ಕೈಗಾರಿಕೆ ಅಸ್ತಿತ್ವಕ್ಕೆ ಬಂತು. ರೈಲ್ವೇ ವರ್ಕ್‌ಶಾಪುಗಳೂ ಸ್ಥಾಪಿಸಲ್ಪಟ್ಟವು. ಇದರೊಂದಿಗೆ, ಇತರ ಕೈಗಾರಿಕೆಗಳೂ ಮೆಲ್ಲ ಮೆಲ್ಲಗೆ ತಲೆದೋರಲಾರಂಭಿಸಿದವು. ೧೮೫೪ರಲ್ಲಿ ಕಲ್ಕತ್ತದಲ್ಲಿ ಪ್ರಥಮ ಸೆಣಬಿನ ಗಿರಣಿಯೂ, ಮುಂಬಯಿಯಲ್ಲಿ ಮೊದಲ ಸ್ವದೇಶೀ ಹತ್ತಿ ಗಿರಣಿಯೂ ಸ್ಥಾಪಿಸಲ್ಪಟ್ಟವು. ೧೮೮೦ರೊಳಗೆ ಮುಂಬಯಿಯಲ್ಲಿ ೫೮ ಹತ್ತಿ ಗಿರಣಿಗಳೂ, ಕಲ್ಕತ್ತದಲ್ಲಿ ೧೦–೧೫ ಸೆಣಬಿನ ಗಿರಣಿಗಳೂ ತಲೆಯೆತ್ತಿದವು. ಈ ಕ್ರಿಯಾಸರಣಿ ನಂತರ ಇನ್ನಷ್ಟು ಕ್ಷಿಪ್ರವಾಗಿ ಕಾರ್ಖಾನೆಗಳ ಮತ್ತು ಕಾರ್ಮಿಕರ ಸಂಖ್ಯೆ ಎರಡೂ ಬೆಳೆಯಿತು. ೧೮೯೪ರಲ್ಲಿ ೮೧೫ ಕಾರ್ಖಾನೆಗಳು ಅಸ್ತಿತ್ವಕ್ಕೆ ಬಂದಿದ್ದವು. ಇವುಗಳಲ್ಲಿ ಸುಮಾರು ಮೂರೂವರೆ ಲಕ್ಷ ಕಾರ್ಮಿಕರು ದುಡಿಯುತ್ತಿದ್ದರು. ೧೯೧೪ರಲ್ಲಿ ಕಾರ್ಖಾನೆಗಳ ಸಂಖ್ಯೆ ೨೯೩೬ಕ್ಕೂ, ಕಾರ್ಮಿಕರ ಸಂಖ್ಯೆ ಒಂಭತ್ತೂವರೆ ಲಕ್ಷಕ್ಕೂ ಏರಿತ್ತು. ಇದೇ ಸಮಯದಲ್ಲಿ ಕಲ್ಲಿದ್ದಲಿನ ಗಣಿಗಳ ಸಂಖ್ಯೆ ೫೫೪ಕ್ಕೆ ಏರಿ, ಒಂದೂವರೆ ಲಕ್ಷ ಮಂದಿ ಕಾರ್ಮಿಕರು ಈ ಕೈಗಾರಿಕೆಯಲ್ಲಿ ನಿರತರಾಗಿದ್ದರು. ಈ ಅವಧಿಯಲ್ಲಿ ಪ್ಲಾಂಟೇಶನ್ (ಮುಖ್ಯವಾಗಿ ಟೀ)

ಕೈಗಾರಿಕೆಯೂ ಬೆಳೆದಿದ್ದು ಅದರಲ್ಲಿ ಸುಮಾರು ೯ ಲಕ್ಷ ಕಾರ್ಮಿಕರಿದ್ದರು.

**ಕೆಲಸದ ಪರಿಸ್ಥಿತಿ**

ಭಾರತದಲ್ಲಿ ಆಧುನಿಕ ಕೈಗಾರಿಕೆಯ ಈ ಪ್ರಾರಂಭದ ದಿನಗಳಲ್ಲಿ ಕಾರ್ಮಿಕರ ಪರಿಸ್ಥಿತಿ ಅತ್ಯಂತ ಶೋಚನೀಯವಾಗಿತ್ತು. ದಿನಕ್ಕೆ ೧೬-೧೮ ಗಂಟೆಗಳ ಕೆಲಸ. ರಜಾ ಎಂಬುದೇ ಇಲ್ಲ. ಆದಿತ್ಯವಾರ ಕೂಡ ದುಡಿತ. ಮುಂಬಯಿಯ ಹತ್ತಿಗಿರಣಿ ಕೈಗಾರಿಕೆಯಲ್ಲಿ ಅಂದು ಗಂಡಸರಿಗೆ ದೊರೆಯುತ್ತಿದ್ದುದು ತಿಂಗಳಿಗೆ ಸರಾಸರಿ ೧೦-೧೨ ರೂ.ಗಳ ಕೂಲಿ. ಹೆಂಗಸರಿಗೆ ರೂ. ೬-೧೦. ಮಕ್ಕಳಿಗೆ ರೂ. ೫-೬ . ಕಾರ್ಖಾನೆಯೊಳಗೆ ಅಪಘಾತ ದಲ್ಲಿ ಅಂಗವಿಕಲರಾದರೆ ಅವರನ್ನು ಕೇಳುವವರಿಲ್ಲ. ವಾಸ ಸ್ಥಳಗಳು ನರಕಕ್ಕಿಂತ ಕಡೆ. ಇದು ಸಾಲದ್ದಕ್ಕೆ, ಕಂಟ್ರಾಕ್ಟರುಗಳ ಮತ್ತು ಸಾಲಗಾರರ ಕಾಟ ಬೇರೆ. ಶ್ರಮ ಭಾರದ ಆಧಿಕ್ಯದಿಂದಾಗಿ ಕಾರ್ಮಿಕರ ಜೀವಾವಧಿ ಅತ್ಯಂತ ಕಡಿಮೆಯಾಗಿತ್ತು.

**ಮೊದಲ ಮುಷ್ಕರಗಳು**

ಇಂತಹ ಪರಿಸ್ಥಿತಿಯಲ್ಲಿ ಕಾರ್ಮಿಕರಿಗೆ ಹೋರಾಡದೆ ಗತ್ಯಂತರವೇ ಇರಲಿಲ್ಲ. ದುಡಿಯುವ ಜನರಿಗೆ ಯಾವ ಹಕ್ಕುಗಳೂ ಇಲ್ಲದಿದ್ದ ಕಾಲವದು. ಕಾರ್ಮಿಕರ ಹಿತರಕ್ಷಣೆಗೆ ಯಾವ ಕಾನೂನುಗಳೂ ಇಲ್ಲದಿದ್ದ ಕಾಲವದು. ಪೊಲೀಸ್ ಲಾಠಿ ದೇಶವನ್ನಾಳುತ್ತಿದ್ದ ಕಾಲವದು. ಹೋರಾಟವೆಂದರೆ, ಒಂದೋ ಜೈಲು ಅಥವಾ ಉಪವಾಸ ಖಂಡಿತವಾಗಿತ್ತು. ಆದರೂ, ಕಾರ್ಮಿಕ ವರ್ಗ ಕಾದಾಡದೆ ಸುಮ್ಮನೆ ಕುಳಿತುಕೊಳ್ಳಲಿಲ್ಲ. ಇದರಲ್ಲಿ ಮೊತ್ತ ಮೊದಲು ಸಂಘಟಿತ ಹೋರಾಟಕ್ಕಿಳಿದ ಶ್ರೇಯಸ್ಸು ರೈಲ್ವೆ ಕಾರ್ಮಿಕರಿಗೆ ಸಲ್ಲಬೇಕು. ಏಪ್ರಿಲ್-ಮೇ, ೧೮೬೨ರಂದು (ರೈಲ್ವೆ ನಿರ್ಮಾಣ ಪ್ರಾರಂಭವಾದ ೯ ವರ್ಷಗಳೊಳಗೆ) ಕಲ್ಕತ್ತದ ಹೌರಾ ರೈಲ್ವೇ ಸ್ಟೇಷನಿನಲ್ಲಿ ೧೨೦೦ ಮಂದಿ ರೈಲ್ವೇ ಕೆಲಸಗಾರರು ೮ ಗಂಟೆಗಳ ಕೆಲಸದ ಬೇಡಿಕೆಯನ್ನಿಟ್ಟು ಮುಷ್ಕರ ಹೂಡಿದರು. ಇದು ಭಾರತದ ಆಧುನಿಕ ಕಾರ್ಮಿಕ ವರ್ಗದ ಇತಿಹಾಸದಲ್ಲಿ ನಡೆದ ಮೊದಲ ಮುಷ್ಕರ. (ಸುಕೋಮಲ್ ಸೇನ್ : ಭಾರತದ ಕಾರ್ಮಿಕ ವರ್ಗ) ೧೮೬೬ರಲ್ಲಿ ಮುಂಬಯಿ ನಗರಸಭೆಯ ಮಾಂಸ ಮಾರಾಟಗಾರರು ಸ್ವಲ್ಪ ಸಮಯ ಕೆಲಸ ನಿಲ್ಲಿಸಿದರು. ೧೮೭೩ರಲ್ಲಿ ಅಹಮದಾಬಾದಿನ ಇಟ್ಟಿಗೆ ಕೆಲಸಗಾರರು ಕೆಲಸ ಮಾಡಲು ನಿರಾಕರಿಸಿದರು. ತರುವಾಯ ೧೮೭೭ರಲ್ಲಿ ನಾಗಪುರದ ಎಂಪ್ರೆಸ್ ಮಿಲ್‌ನಲ್ಲಿ ದೊಡ್ಡದೊಂದು ಸಂಘಟಿತ ಮುಷ್ಕರ ನಡೆಯಿತು. ೧೮೮೦ರಿಂದ ೧೮೯೦ರ ತನಕ ಮುಂಬಯಿ, ಮದರಾಸು ಮತ್ತು ಕಲ್ಕತ್ತಗಳಲ್ಲಿ ಅನೇಕ ಸಣ್ಣಪುಟ್ಟ ಹೋರಾಟಗಳಲ್ಲದೆ, ೨೫ ದೊಡ್ಡ ಮುಷ್ಕರಗಳು ನಡೆದುವು.

**ಸಂಘಟನೆಗೆ ನಾಂದಿ**

ಈ ಹೋರಾಟಗಳ ಕುಲಿಮೆಯಲ್ಲಿ ಕಾರ್ಮಿಕರ ಮೊದಲ ಸಂಘಟನೆಗಳೂ ಮೂಡಿ ಬಂದವು. ಸೆಪ್ಟೆಂಬರ್ ೧೮೮೪ರಲ್ಲಿ ಎನ್. ಎಮ್. ಲೋಖಂಡೆ ಎಂಬ ಉದಾರವಾದಿ ಯೊಬ್ಬರು ಮುಂಬಯಿಯ ಹತ್ತಿಗಿರಣಿ ಕಾರ್ಮಿಕರ ಸಭೆಯೊಂದನ್ನು ಕರೆದರು. ಸುಮಾರು ೧೦,೦೦೦ ಮಂದಿ ಕಾರ್ಮಿಕರು ಭಾಗವಹಿಸಿದ್ದ ಈ ಸಭೆ, ಕಾರ್ಮಿಕರ ಕೇಳಿಕೆಗಳ ಪಟ್ಟಿಯೊಂದನ್ನು ತಯಾರಿಸಿತು. ವಾರಕ್ಕೆ ಒಂದು ದಿನ ಸಂಪೂರ್ಣ ರಜೆ, ಮಧ್ಯಾಹ್ನ ಅರ್ಧಗಂಟೆಯ ವಿಶ್ರಾಂತಿ, ಮುಂದಿನ ತಿಂಗಳಿನ ೧೫ನೇ ತಾರೀಕಿನೊಳಗೆ ಹಿಂದಿನ ತಿಂಗಳಿನ ಸಂಬಳದ ಪಾವತಿ, ಬೆಳಿಗ್ಗೆ ೬-೩೦ರಿಂದ ಸಂಜೆ ೬-೩೦ರ ತನಕ ದಿನಕ್ಕೆ ೧೨ ಗಂಟೆಗಳ ಕಾಲ ಮಾತ್ರ ಕೆಲಸ ಮತ್ತು ಅಪಘಾತ ಪರಿಹಾರ - ಇವಿಷ್ಟೇ ಈ ಪಟ್ಟಿಯಲ್ಲಿದ್ದ ಕೇಳಿಕೆಗಳಾಗಿದ್ದವು. ಈ ಕೇಳಿಕೆಗಳಿಂದಲೇ ಅಂದಿನ ಕೆಲಸದ ಪರಿಸ್ಥಿತಿಗಳನ್ನು ಊಹಿಸಬಹುದು. ೧೮೯೦ರಲ್ಲಿ ಲೋಖಂಡೆಯವರು 'ಮುಂಬಯಿ ಮಿಲ್ ಕೂಲಿಗಾರರ ಕೂಟ' ಎಂಬ ಸಂಸ್ಥೆಯೊಂದನ್ನು ಸ್ಥಾಪಿಸಿ, ತಾವೇ ಅದರ ಅಧ್ಯಕ್ಷರಾದರು. ಆದರೆ, ಈ ಸಂಸ್ಥೆಗೆ ಒಂದು ನಿರ್ದಿಷ್ಟ ಸದಸ್ಯತ್ವವಿರಲಿಲ್ಲ, ಸದಸ್ಯ ಶುಲ್ಕವಿರಲಿಲ್ಲ, ನಿಧಿ ಅಥವಾ ನಿಯಮಾವಳಿಗಳಿರಲಿಲ್ಲ. ಲೋಖಂಡೆಯವರು ತಮ್ಮ ಬಳಿ ಬಂದ ಕಾರ್ಮಿಕರಿಗೆ ಉಚಿತ ಸಲಹೆ ನೀಡುವ ಪಾತ್ರ ವಹಿಸಿದ್ದರಷ್ಟೆ. ಆದಕಾರಣ ಈ ಸಂಸ್ಥೆಯ ಸ್ಥಾಪನೆಯನ್ನು ಟ್ರೇಡ್ ಯೂನಿಯನ್ ಸಂಘಟನೆಯ ಪ್ರಾರಂಭವೆಂದು ಪರಿಗಣಿಸಲು ಸಾಧ್ಯವಿಲ್ಲವಾದರೂ, ಆ ದಿಸೆಯಲ್ಲಿ ಇದೊಂದು ಹೆಜ್ಜೆಯಾಗಿತ್ತೆಂದು ಹೇಳಬಹುದು. ಇದನ್ನನುಸರಿಸಿ, ದೇಶದ ಇತರ ಕೆಲವು ಕಡೆಗಳಲ್ಲೂ ಕೆಲವು ಉದಾರವಾದಿಗಳು ಇಂತಹ ಒಂದೆರಡು ಸಂಘಟನೆಗಳನ್ನು ರಚಿಸಿದರು.

ಈ ಎಲ್ಲ ಹೋರಾಟಗಳ ಪರಿಣಾಮವಾಗಿ, ೧೮೯೧ರಲ್ಲಿ ಜಾರಿಗೆ ಬಂದ ಎರಡನೇ ಫ್ಯಾಕ್ಟರಿ ಆಕ್ಟ್ ಬಾಲಕರಿಗೆ ದಿನಕ್ಕೆ ೯ ಗಂಟೆಗಳ ಮತ್ತು ಹೆಂಗಸರಿಗೆ ದಿನಕ್ಕೆ ೧೧ ಗಂಟೆಗಳ ಕೆಲಸವನ್ನು ನಿಗದಿಗೊಳಿಸಿತು. ಹಾಗೆಯೇ ವಾರಕ್ಕೆ ಒಂದು ದಿನದ ರಜೆ ಮತ್ತು ಮಧ್ಯಾಹ್ನ ಅರ್ಧ ಗಂಟೆಯ ವಿಶ್ರಾಂತಿಯನ್ನೂ ಈ ಕಾಯಿದೆ ಕಡ್ಡಾಯ ಮಾಡಿತು. ಆದರೆ, ಗಂಡಸರ ಕೆಲಸದ ಅವಧಿಯನ್ನು ಮಾತ್ರ ಇದು ಸೀಮಿತಗೊಳಿಸಲಿಲ್ಲ.



**ಮೊದಲ ಟ್ರೇಡ್ ಯೂನಿಯನ್‌ಗಳು**

೨೦ನೇ ಶತಮಾನದ ಮೊದಲ ದಶಕದಲ್ಲಿ ಕಾರ್ಮಿಕರ ಹೋರಾಟ ತೀವ್ರಗೊಂಡಿತು. ಅದು ಸ್ವಾತಂತ್ರ್ಯ ಚಳವಳಿಯೂ ತೀವ್ರಗೊಂಡ ಕಾಲ. ಕಾಂಗ್ರೆಸ್ ಪಕ್ಷದ ನಾಯಕತ್ವ ಉದಾರವಾದಿಗಳ ಹಸ್ತದಿಂದ ಬಾಲಗಂಗಾಧರ ತಿಲಕ್, ಲಾಲಾ ಲಜಪತ್ ರಾಯ್ ಮತ್ತು ಬಿಪಿನ್ ಚಂದ್ರಪಾಲ್ ಮುಂತಾದ ತೀವ್ರಗಾಮಿಗಳ ಕೈಸೇರಿದ ಕಾಲ. ರಾಷ್ಟ್ರೀಯ ಚಳವಳಿಗೆ ಕಾರ್ಮಿಕರ ಬೆಂಬಲ ಪಡೆಯುವ ಉದ್ದೇಶದಿಂದ ಈ ನಾಯಕರೂ ಕಾರ್ಮಿಕರ ಹೋರಾಟಗಳಿಗೆ ಪ್ರೋತ್ಸಾಹ ನೀಡಿದರು. ೧೯೦೫ರಲ್ಲಿ ಕಲ್ಕತ್ತದ ಸರಕಾರೀ ಮುದ್ರಣಾಲಯದಲ್ಲಿ, ಹೌರಾದ ಬರ್ನ್ ಮತ್ತು ಕಂಪೆನಿಯಲ್ಲಿ ಹಾಗೂ ಕಲ್ಕತ್ತಾ ಟ್ರಾಮ್‌ವೇ ಕಂಪೆನಿಯಲ್ಲಿ ದೊಡ್ಡ ದೊಡ್ಡ ಮುಷ್ಕರಗಳು ನಡೆದವು. ೧೯೦೫ರಲ್ಲಿ ಮದರಾಸಿನ ಸರಕಾರೀ ಮುದ್ರಣಾಲಯದಲ್ಲೂ ಒಂದು ಮುಷ್ಕರ ನಡೆಯಿತು. ೧೯೦೫-೦೭ರಲ್ಲಿ ಮುಂಬಯಿ ಮತ್ತು ಅಹಮದಾಬಾದ್‌ಗಳಲ್ಲೂ ಹಲವು ಮುಷ್ಕರಗಳು ನಡೆದವು. ೧೯೦೬ರಲ್ಲಿ ಈಸ್ಟ್ ಇಂಡಿಯ ರೈಲ್ವೆ ಕೆಲಸಗಾರರು ಮುಷ್ಕರ ಹೂಡಿದರು.

ಈ ಹೋರಾಟಗಳ ಪರಿಣಾಮವಾಗಿ ನಿಜವಾದ ಟ್ರೇಡ್ ಯೂನಿಯನ್ ಸಂಘಟನೆಗಳು ತಲೆದೋರಿದವು. ಅಕ್ಟೋಬರ್ ೧೯೦೫ರಲ್ಲಿ ಬೆಂಗಾಲ್

## ಅಭಿನಂದನೆ...

ಹೊಸತು ಬಳಗದ ಲೇಖಕರೂ ಅಂಕಣಕಾರರೂ ವಿಮರ್ಶಕರೂ ಆದ ಡಾ॥ ರಾಜಶೇಖರ ಮಠಪತಿ (ರಾಗಂ) ಅವರಿಗೆ ಕೇಂದ್ರ ಕನ್ನಡ ಸಾಹಿತ್ಯ ಪರಿಷತ್ತು 2013ನೇ ಸಾಲಿನ 'ಶ್ರೀ ವಿಜಯ ಪ್ರಶಸ್ತಿ'ಯನ್ನು ನೀಡಿ ಗೌರವಿಸಿದೆ. ಡಾ॥ ರಾಜಶೇಖರ ಮಠಪತಿಯವರನ್ನು 'ಹೊಸತು' ಬಳಗ ಅಭಿನಂದಿಸುತ್ತದೆ.

ಪ್ರೆಸ್ ವರ್ಕರ್ಸ್ ಯೂನಿಯನ್ ಅಸ್ತಿತ್ವಕ್ಕೆ ಬಂತು. ಇದು ಭಾರತದ ಮೊದಲ ಟ್ರೇಡ್ ಯೂನಿಯನ್‌ಗಳಲ್ಲಿ ಒಂದಾಗಿತ್ತು. (ಸುಕೋಮಲ್ ಸೇನ್ : ಭಾರತದ ಕಾರ್ಮಿಕ ವರ್ಗ.)

**ರಾಜಕೀಯ ಸಮರ**

ಆರ್ಥಿಕ ಹೋರಾಟಗಳಲ್ಲಿ ಹೀಗೆ ದೃಢಗೊಂಡ ಕಾರ್ಮಿಕ ವರ್ಗ ೧೯೦೮ರಲ್ಲಿ ರಾಜಕೀಯ ಹೋರಾಟಗಳಿಗೂ ಇಳಿಯಿತು. ಅದು ಲೋಕಮಾನ್ಯ ತಿಲಕರ ಮೇಲೆ ಬ್ರಿಟಿಷ್ ಸರಕಾರ ೬ ವರ್ಷಗಳ ಸೆರೆಮನೆ ವಾಸದ ಕಠಿಣ ಶಿಕ್ಷೆ ವಿಧಿಸಿದ ವರ್ಷ. ಇದನ್ನು ಪ್ರತಿಭಟಿಸಿ ಮುಂಬಯಿಯ ಕಾರ್ಮಿಕ ವರ್ಗ, ಶಿಕ್ಷೆಯ ಒಂದು ವರ್ಷಕ್ಕೆ ಒಂದು ದಿನದಂತೆ ೬ ದಿನಗಳ ಮುಷ್ಕರ ಹೂಡಿತು. ಮುಷ್ಕರವನ್ನು ಮುರಿಯಲು ಬ್ರಿಟಿಷ್ ಸರಕಾರ ಕೈಗೊಂಡ ಅಮಾನುಷ ದಬ್ಬಾಳಿಕೆಯ ಕ್ರಮಗಳಿಂದ ಏನೂ ಪ್ರಯೋಜನ ವಾಗಲಿಲ್ಲ. ಪೊಲೀಸರ ಲಾಠಿ ಮತ್ತು ಗುಂಡುಗಳನ್ನು ಕಾರ್ಮಿಕರು ಧೈರ್ಯದಿಂದ ಎದುರಿಸಿದರು. ಈ ಹೋರಾಟದಲ್ಲಿ ೨೦೦ ಮಂದಿ ಕಾರ್ಮಿಕರು ಮಡಿದರು. ಸಾವಿರಾರು ಮಂದಿ ಗಾಯಗೊಂಡರು. ಅನೇಕರು ಜೈಲು ಸೇರಿದರು. ಈ ಮುಷ್ಕರ, ದೂರದ ರಷ್ಯಾದಲ್ಲಿದ್ದ ಲೆನಿನರ ಗಮನವನ್ನು ಸೆಳೆದಿತ್ತು. 'ಭಾರತೀಯ ಕಾರ್ಮಿಕ ವರ್ಗ ಈಗ ಸಾಕಷ್ಟು ಪಕ್ವವಾಗಿದೆಯೆಂಬುದನ್ನು ಈ ಮುಷ್ಕರ ತೋರಿಸುತ್ತದೆ' ಎಂದು ಅವರು ನುಡಿದಿದ್ದರು.




**ಒಂದನೇ ಮಹಾಯುದ್ಧ ಕಾಲ**

೧೯೪೦ರ ತರುವಾಯ ಕಾರ್ಮಿಕ ಹೋರಾಟಗಳು ಇನ್ನಷ್ಟು ಹೆಚ್ಚಿದವು. ಇವುಗಳ ಫಲವಾಗಿ ೧೯೧೧ರಲ್ಲಿ ಮೂರನೇ ಫ್ಯಾಕ್ಟರಿ ಆಕ್ಟ್ ಮಂಜೂರಾಗಿ ಗಂಡಸರ ದೈನಂದಿನ ಕೆಲಸದ ಅವಧಿಯನ್ನು ೧೨ ಗಂಟೆಗಳಿಗೆ ಸೀಮಿತಗೊಳಿಸಲಾಯಿತು. ಆದರೆ, ಇದನ್ನು ಭರ್ತಿ ಮಾಡುವುದಕ್ಕೋಸ್ಕರ ಮಾಲೀಕರು ಕೂಡಲೇ ವೇತನಗಳಲ್ಲಿ ಕಡಿತ ಮಾಡಿದರು. ಈ ಕ್ರಮದ ವಿರುದ್ಧ ಮುಂಬಯಿ, ಕಲ್ಕತ್ತಾಗಳಲ್ಲಿ ಹಲವು ಮುಷ್ಕರಗಳು ನಡೆದವು.

೧೯೧೪ರಲ್ಲಿ ಮೊದಲನೇ ಮಹಾಯುದ್ಧ ಆರಂಭವಾಯಿತು. ಸಾಮಗ್ರಿಗಳ ಬೆಲೆಗಳು ಏರಿದವು. ಪರಿಣಾಮವಾಗಿ ವೇತನ ಹೆಚ್ಚಳಕ್ಕೆ ಚಳವಳಿ ನಡೆಯಿತು. ೧೯೧೭ರ ಅಕ್ಟೋಬರ್ ಕ್ರಾಂತಿ ಕಾರ್ಮಿಕ ಚಳವಳಿಗೆ ಹೊಸ ಚೈತನ್ಯ ನೀಡಿತು. ೧೯೧೮ರಲ್ಲಿ ಮುಷ್ಕರಗಳ ಮಹಾ ಅಲೆಯೊಂದು ಪ್ರಾರಂಭವಾಗಿ, ೧೯೨೦ರೊಳಗೆ ದೇಶವನ್ನೆಲ್ಲ ವ್ಯಾಪಿಸಿತು. ೧೯೧೮ರ ಪ್ರಥಮದ ೬ ತಿಂಗಳುಗಳಲ್ಲಿ ೫೮ ಮುಷ್ಕರಗಳು ನಡೆದವು. ೧೯೧೯ರ ಜನವರಿಯಲ್ಲಿ ಮುಂಬಯಿಯ ೧,೫೦,೦೦೦ ಹತ್ತಿ ಗಿರಣಿ ಕಾರ್ಮಿಕರು ಸಾರ್ವತ್ರಿಕ ಮುಷ್ಕರ ಹೂಡಿದರು. ೧೯೧೯ರ ಅಕ್ಟೋಬರ್ ಒಂದು ತಿಂಗಳಿನಲ್ಲೇ ೧೨ ಲಕ್ಷ ಕಾರ್ಮಿಕರನ್ನೊಳಗೊಂಡ ೩೮ ಮುಷ್ಕರಗಳು ನಡೆದವು. ಅದೇ ವರ್ಷ ರೌಲತ್ ಆಕ್ಟಿನ ವಿರುದ್ಧ ದೇಶಾದ್ಯಂತ ಹೂಡಲ್ಪಟ್ಟ ಸತ್ಯಾಗ್ರಹಗಳಲ್ಲಿ ಕಾರ್ಮಿಕ ವರ್ಗವೂ ದೊಡ್ಡ ಪ್ರಮಾಣದಲ್ಲಿ ಭಾಗವಹಿಸಿತು. ದೊಡ್ಡ ಕೈಗಾರಿಕೆಗಳಲ್ಲಿ ದುಡಿಯುತ್ತಿದ್ದ ಕಾರ್ಮಿಕರ ಸಂಖ್ಯೆಯೂ ಈಗ ಸುಮಾರು ೧೪ ಲಕ್ಷಗಳಿಗೆ ಏರಿತ್ತು.

**ಎ.ಐ.ಟಿ.ಯು.ಸಿ.ಯ ಜನನ**

ಈ ಅವಧಿಯಲ್ಲಿ ಅನೇಕ ಟ್ರೇಡ್ ಯೂನಿಯನ್‌ಗಳು ಜನ್ಮ ತಾಳಿದವು. ೧೯೨೦ರ ಹೊತ್ತಿಗೆ ೨,೫೦,೦೦೦ ಕಾರ್ಮಿಕರನ್ನೊಳಗೊಂಡ ೧೨೫ ಟ್ರೇಡ್ ಯೂನಿಯನ್‌ಗಳಿದ್ದವೆಂದು ಅಂದಾಜು ಮಾಡಲಾಗಿದೆ. ಆದುದರಿಂದ ಇವುಗಳನ್ನೆಲ್ಲ ಒಂದು ಕೇಂದ್ರೀಯ ವೇದಿಕೆಯಲ್ಲಿ ಒಂದುಗೂಡಿಸುವ ಉದ್ದೇಶದಿಂದ ಅಕ್ಟೋಬರ್ ೧೯೨೦ರಲ್ಲಿ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಎ.ಐ.ಟಿ.ಯು.ಸಿ.) ಸ್ಥಾಪಿಸಲ್ಪಟ್ಟಿತು. ಲಾಲಾ ಲಜಪತ್ ರಾಯ್ ಅವರು ಇದರ ಮೊದಲ ಅಧ್ಯಕ್ಷರಾಗಿದ್ದರು. ೧೯೨೯ರ ತನಕ ಇದರ ನಾಯಕತ್ವ ಎನ್. ಎಂ. ಜೋಶಿ, ಬಿ. ಶಿವರಾವ್, ದಿವಾನ್ ಚಮನ್‌ಲಾಲ್ ಮುಂತಾದ ಮಧ್ಯಮ ವರ್ಗೀಯ ಉದಾರವಾದಿಗಳ ಕೈಗಳಲ್ಲಿತ್ತು. ಲಜಪತ್ ರಾಯ್ ಅವರಲ್ಲದೆ ಸಿ. ಆರ್. ದಾಸ್, ವಿ. ವಿ. ಗಿರಿ, ಜವಹರಲಾಲ್ ನೆಹರು, ಸುಭಾಷ್‌ಚಂದ್ರ ಬೋಸ್ ಮುಂತಾದ ಕಾಂಗ್ರೆಸ್ ನಾಯಕರೂ ಇದರ ಅಧ್ಯಕ್ಷರಾಗಿ ಕೆಲಸ ಮಾಡಿದ್ದರು.

**ಹೊಸ ತಿರುವು**

ಆದರೆ, ಈ ಮಧ್ಯೆ ಕಮ್ಯೂನಿಸ್ಟ್ ಚಳವಳಿ ದೇಶದಲ್ಲಿ ಪ್ರಾರಂಭವಾಗಿತ್ತು. ೧೯೨೧–೨೨ರಲ್ಲೇ ಮುಂಬಯಿ, ಕಲ್ಕತ್ತ ಮುಂತಾದ ಕಡೆಗಳಲ್ಲಿ ಕೆಲವು ಕಮ್ಯೂನಿಸ್ಟ್ ಕೂಟಗಳು ಉದಯಿಸಿದ್ದವು. ೧೯೨೫ರಲ್ಲಿ ಈ ಗುಂಪುಗಳೆಲ್ಲ ಒಂದಾಗಿ ಕಮ್ಯೂನಿಸ್ಟ್ ಪಕ್ಷ ಸ್ಥಾಪಿಸಲ್ಪಟ್ಟಿತು. ಈ ಯುವಕ ಕಮ್ಯೂನಿಸ್ಟ್ ಕಾರ್ಯಕರ್ತರು ವರ್ಗ ಪ್ರಜ್ಞೆಯಿಂದ ಕಾರ್ಮಿಕರ ಮಧ್ಯೆ ಕೆಲಸ ಮಾಡತೊಡಗಿದರು. ಹಲವು ಸಮರಶೀಲ ಯೂನಿಯನ್‌ಗಳನ್ನು ಸಂಘಟಿಸಿದರು. ಪೂರ್ಣ ಸ್ವಾತಂತ್ರ್ಯದ ಗುರಿಯನ್ನು ಘೋಷಿಸಿದರು. ೧೯೨೭ರ ಖರಗಪುರ ರೈಲ್ವೇ ಮುಷ್ಕರ, ೧೯೨೮ರ ಸೌತ್ ಇಂಡಿಯನ್ ರೈಲ್ವೇ ಮುಷ್ಕರ ಮುಂತಾದ ಕಾರ್ಮಿಕ ಹೋರಾಟಗಳಿಗೆ ಕಮ್ಯೂನಿಸ್ಟರು ದೃಢ ನೇತೃತ್ವ ನೀಡಿದರು. ಏಪ್ರಿಲ್ ೧೯೨೮ರಿಂದ ೬ ತಿಂಗಳುಗಳ ಕಾಲ ಕಮ್ಯೂನಿಸ್ಟ್ ನಾಯಕತ್ವದಲ್ಲಿ ನಡೆದ ಮುಂಬಯಿಯ ಸಮಗ್ರ ಗಿರಣಿ ಕಾರ್ಮಿಕರ ಮುಷ್ಕರ ಇವುಗಳಿಗೆಲ್ಲ ಕಳಶಪ್ರಾಯವಾಗಿತ್ತು. ಈ ಹೋರಾಟದಲ್ಲಿ ಇತಿಹಾಸ ಪ್ರಸಿದ್ಧವಾದ ಮುಂಬಯಿ ಗಿರಣಿ ಕಾಮಗಾರ್ ಯೂನಿಯನ್ ಹುಟ್ಟಿತು.

ಹೀಗೆ ಕಮ್ಯೂನಿಸ್ಟ್ ನೇತೃತ್ವದಲ್ಲಿ ಬೆಳೆಯುತ್ತಿದ್ದ ಕಾರ್ಮಿಕ ಚಳವಳಿಯಿಂದ ದಿಗಿಲುಗೊಂಡ ಬ್ರಿಟಿಷ್ ಸರ್ಕಾರ, ೧೯೨೯ರಲ್ಲಿ ದೇಶದ ಎಲ್ಲ ಪ್ರಮುಖ ಕಮ್ಯೂನಿಸ್ಟ್ ಕಾರ್ಮಿಕ ನಾಯಕರನ್ನು ಬಂಧಿಸಿ, ಅವರ ಮೇಲೆ ಪಿತೂರಿ ಖಟ್ಲೆಯನ್ನು ಹೊರಿಸಿ, ದೀರ್ಘಾವಧಿ ಶಿಕ್ಷೆ ವಿಧಿಸಿತು. ಮೀರತ್ ಮೊಕದ್ದಮೆಯೆಂದು ಪ್ರಖ್ಯಾತವಾದ ಈ ಖಟ್ಲೆಯ ವಿವರಗಳನ್ನು ಇಲ್ಲಿ ವಿವರಿಸುವ ಅವಶ್ಯಕತೆಯಿಲ್ಲ.

**ಎ.ಐ.ಟಿ.ಯು.ಸಿ.ಯಲ್ಲಿ ಒಡಕು**

ಇದರೊಂದಿಗೇ, ಎ.ಐ.ಟಿ.ಯು.ಸಿ.ಯಲ್ಲಿ ಕಮ್ಯೂನಿಸ್ಟ್ ಪ್ರಭಾವ ಬೆಳೆಯುತ್ತಿತ್ತು. ಕಮ್ಯೂನಿಸ್ಟ್ ಸಂಘಟಿತ ಟ್ರೇಡ್ ಯೂನಿಯನ್ನುಗಳ ಸಂಖ್ಯೆ ಅದರೊಳಗೆ ಹೆಚ್ಚುತ್ತಿತ್ತು. ಪರಿಣಾಮವಾಗಿ, ಜವಹರಲಾಲ್ ನೆಹರೂರವರ ಅಧ್ಯಕ್ಷತೆಯಲ್ಲಿ, ೧೯೨೯ರಲ್ಲಿ ನಡೆದ ಅದರ ನಾಗಪುರ ಅಧಿವೇಶನದಲ್ಲಿ ಎಡಪಂಥೀಯರಿಗೆ ಸ್ಪಷ್ಟ ಬಹುಮತ ದೊರೆಯಿತು. ಇದರಿಂದ ಅಸಂತುಷ್ಟಿಗೊಂಡ, ಎನ್. ಎಂ. ಜೋಶಿ, ವಿ. ವಿ. ಗಿರಿ, ಶಿವರಾವ್, ದಿವಾನ್ ಚಮನ್‌ಲಾಲ್ ಮೊದಲಾದವರಿಂದ ಕೂಡಿದ ಅದರ ಹಳೆ ಸುಧಾರಣಾವಾದಿ ನಾಯಕತ್ವವು ಎ.ಐ.ಟಿ.ಯು.ಸಿ.ಯಿಂದ ತೊಲಗಿ ಇಂಡಿಯನ್ ಟ್ರೇಡ್ ಯೂನಿಯನ್ ಫೆಡರೇಷನ್ ಎಂಬ ಇನ್ನೊಂದು ಕೇಂದ್ರೀಯ ಸಂಸ್ಥೆಯನ್ನು ಸ್ಥಾಪಿಸಿತು. ಕೆಲ ಸಮಯದ ನಂತರ ಇದು "ನ್ಯಾಷನಲ್ ಟ್ರೇಡ್ ಯೂನಿಯನ್ ಫೆಡರೇಷನ್" ಎಂಬುದಾಗಿ ಮಾರ್ಪಾಟಾಯಿತು. ತರುವಾಯ ೧೯೩೧ರಲ್ಲಿ ಸುಭಾಷ್‌ಚಂದ್ರ ಬೋಸ್‌ರವರ ಅಧ್ಯಕ್ಷತೆಯಲ್ಲಿ ಸೇರಿದ ಕಲ್ಕತ್ತ ಅಧಿವೇಶನದಲ್ಲಿ ಎ.ಐ.ಟಿ.ಯು.ಸಿ. ಪುನಃ ಒಡೆದು, ಕಮ್ಯೂನಿಸ್ಟ್ ಟ್ರೇಡ್ ಯೂನಿಯನ್‌ಗಳು ಅದರಿಂದ ಪ್ರತ್ಯೇಕವಾಗಿ "ಕೆಂಪು ಟ್ರೇಡ್ ಯೂನಿಯನ್ ಕಾಂಗ್ರೆಸ್" ಸ್ಥಾಪಿಸಲ್ಪಟ್ಟಿತು.

**ಪುನರೇಕೀಕರಣ**

ಅದು ೧೯೨೯ರಲ್ಲಿ ಅಮೆರಿಕದಲ್ಲಿ ಪ್ರಾರಂಭವಾದ ತೀವ್ರ ಆರ್ಥಿಕ ಬಿಕ್ಕಟ್ಟು ಸಮಗ್ರ ಬಂಡವಾಳಶಾಹೀ ಜಗತ್ತನ್ನು ಆವರಿಸತೊಡಗಿದ್ದ ಕಾಲ. ಭಾರತವೂ ಇದಕ್ಕೆ ಹೊರತಾಗಿರಲಿಲ್ಲ. ಇದರ ಪರಿಣಾಮವಾಗಿ ಕಾರ್ಖಾನೆಗಳಲ್ಲಿ ದೊಡ್ಡ ಪ್ರಮಾಣದಲ್ಲಿ ರಿಟ್ರೆಂಚ್‌ಮೆಂಟ್ ನಡೆಯಿತು. ಮಿಲ್ ಮಾಲೀಕರು "ರ್‍ಯಾಷನಲೈಸೇಷನ್" ಪದ್ಧತಿಯನ್ನು ಜಾರಿಗೆ ತರಲು ಪ್ರಯತ್ನಿಸಿದರು. ೧೯೩೪ರಲ್ಲಿ ಮಾಲೀಕರ ಈ ದಾಳಿಯ ವಿರುದ್ಧ ನಡೆದ ಬೃಹತ್ ಹೋರಾಟಗಳ ಪರಿಣಾಮವಾಗಿ "ಕೆಂಪು ಟ್ರೇಡ್ ಯೂನಿಯನ್ ಕಾಂಗ್ರೆಸ್" ಮತ್ತು ಎ.ಐ.ಟಿ.ಯು.ಸಿ.ಗಳು ಪುನಃ

ಒಂದಾದವು. ೧೯೩೮ರಲ್ಲಿ "ನ್ಯಾಷನಲ್ ಟ್ರೇಡ್ ಯೂನಿಯನ್ ಫೆಡರೇಷನ್" ಸಹ ಎ.ಐ.ಟಿ.ಯು.ಸಿ.ಯೊಂದಿಗೆ ವಿಲೀನಗೊಂಡು, ದ್ವಿತೀಯ ಮಹಾಯುದ್ಧ ಪ್ರಾರಂಭವಾಗುವ ವೇಳೆಯಲ್ಲಿ ಟ್ರೇಡ್ ಯೂನಿಯನ್ ಚಳವಳಿ ಸಂಪೂರ್ಣ ಪುನರೇಕೀಕರಣಗೊಂಡಿತು.

**ದ್ವಿತೀಯ ಮಹಾಯುದ್ಧದ ಕಾಲ**

ದ್ವಿತೀಯ ಮಹಾಯುದ್ಧದ ಕಾಲದಲ್ಲಿ ಟ್ರೇಡ್ ಯೂನಿಯನ್ ಚಳವಳಿ ಮತ್ತಷ್ಟು ಬೆಳೆಯಿತು. ೧೯೩೮ರಲ್ಲಿ ೩,೬೩,೪೫೦ ಸದಸ್ಯರನ್ನೊಳಗೊಂಡ ೧೮೮ ಟ್ರೇಡ್ ಯೂನಿಯನ್ನುಗಳಿದ್ದವು. ೧೯೪೪ರಲ್ಲಿ ಟ್ರೇಡ್ ಯೂನಿಯನ್ನುಗಳ ಸಂಖ್ಯೆ ೫೧೫ಕ್ಕೂ ಅವುಗಳ ಸದಸ್ಯತ್ವ ೫,೦೯,೦೮೪ಕ್ಕೂ ಏರಿತು. (ಆರ್. ಪಿ. ದತ್ : ಭಾರತ ಇಂದು) ಈ ಅವಧಿಯಲ್ಲಿ ಕಾರ್ಮಿಕ ವರ್ಗ ಹಲವು ಹೋರಾಟಗಳ ಮೂಲಕ ತುಟ್ಟಿಭತ್ಯೆಯ ಹಕ್ಕನ್ನು ಸಂಪಾದಿಸಿತು. ಅನೇಕ ಕಡೆಗಳಲ್ಲಿ ಕ್ರಮಬದ್ಧವಾದ ಬೋನಸ್ಸನ್ನು ಪಡೆಯಲು ಕೂಡ ಕಾರ್ಮಿಕ ವರ್ಗಕ್ಕೆ ಸಾಧ್ಯವಾದುದು ಈ ಅವಧಿಯಲ್ಲೇ. ಯುದ್ಧದ ಪ್ರಾರಂಭ ಮತ್ತು ಅಂತ್ಯಗಳೆರಡರಲ್ಲೂ ದೇಶದ ಕಾರ್ಮಿಕ ವರ್ಗ ಸ್ವಾತಂತ್ರ್ಯ ಹೋರಾಟದಲ್ಲಿ ಮಹತ್ವದ ಪಾತ್ರ ವಹಿಸಿತು. ಅಕ್ಟೋಬರ್ ೨, ೧೯೩೯ರಂದು ಮುಂಬಯಿಯ ೯೦,೦೦೦ ಕಾರ್ಮಿಕರು ಯುದ್ಧವನ್ನು ವಿರೋಧಿಸಿ, ಮುಷ್ಕರ ಹೂಡಿದರು. ೧೯೪೫ರ ಐ.ಎನ್.ಎ. ಚಳವಳಿಯಲ್ಲಿ ದೇಶಾದ್ಯಂತ ಕಾರ್ಮಿಕ ವರ್ಗ ಬೃಹತ್ ಪ್ರಮಾಣದಲ್ಲಿ ಭಾಗವಹಿಸಿತು. ೧೯೪೬ರಲ್ಲಿ ಮುಂಬಯಿಯಲ್ಲಿ ನಾವಿಕರ ಬಂಡಾಯವನ್ನು ಬೆಂಬಲಿಸಿ, ಕಮ್ಯೂನಿಸ್ಟ್ ಪಕ್ಷದ ಕರೆಗೆ ಓಗೊಟ್ಟು ಮುಂಬಯಿಯ ಸಮಗ್ರ ಕಾರ್ಮಿಕ ವರ್ಗ ಸಾರ್ವತ್ರಿಕ ಮುಷ್ಕರ ಹೂಡಿ, ಧೀರೋದಾತ್ತ ಪ್ರದರ್ಶನ ನಡೆಸಿತು. ಈ ಹೋರಾಟದಲ್ಲಿ ಬ್ರಿಟಿಷ್ ಸೇನೆ ಮತ್ತು ಪೊಲೀಸರೊಂದಿಗೆ ಅಸಂಖ್ಯಾತ ಬೀದಿ ಕಾಳಗಗಳು ನಡೆದವು. ಮೂರು ದಿನಗಳ ಕಾಲ ಮುಂಬಯಿ ಒಂದು ರಣರಂಗವಾಯಿತು. ೪೦೦ ಮಂದಿ ಕಾರ್ಮಿಕರು ಈ ಹೋರಾಟದಲ್ಲಿ ಪ್ರಾಣಾರ್ಪಣೆ ಮಾಡಿದರು.

ಯುದ್ಧದ ಈ ಅವಧಿಯಲ್ಲಿ ಬ್ರಿಟಿಷ್ ಸರಕಾರದ ನೇರ ಪ್ರೋತ್ಸಾಹದಿಂದ ಟ್ರೇಡ್ ಯೂನಿಯನ್ ಚಳವಳಿಯನ್ನು ಒಡೆಯಲು, ಎ.ಐ.ಟಿ.ಯು.ಸಿ.ಗೆ ಪ್ರತಿಸ್ಪರ್ಧಿಯಾಗಿ "ಇಂಡಿಯನ್ ಲೇಬರ್ ಫೆಡರೇಷನ್" ಎಂಬ ಇನ್ನೊಂದು ಕೇಂದ್ರೀಯ ಸಂಘಟನೆಯನ್ನು ಎಂ. ಎನ್. ರಾಯ್ ಅವರ ಹಿಂಬಾಲಕರು ಸ್ಥಾಪಿಸಿದರು. ಆದರೆ, ಇದರಿಂದ ಹೆಚ್ಚಿನ ಪ್ರಯೋಜನವಾಗದೆ, ಕೆಲವು ವರ್ಷಗಳೊಳಗೆ ಈ ಸಂಘಟನೆ ನಾಮಾವಶೇಷವಾಯಿತು.

**ಒಡಕುಗಳ ಸುರಿಮಳೆ**

೧೯೪೭ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ದೊರೆಯಿತು. ರಾಜ್ಯಾಧಿಕಾರವು ಕಾಂಗ್ರೆಸ್ಸಿನ ಮೂಲಕ ಭಾರತದ ಬಂಡವಾಳಶಾಹೀ ವರ್ಗದ ಹಸ್ತಾಂತರವಾಯಿತು. ಇದರ ಪರಿಣಾಮವಾಗಿ ಟ್ರೇಡ್ ಯೂನಿಯನ್ ಚಳವಳಿ ಮತ್ತೊಮ್ಮೆ ಒಡೆಯಿತು. ವಲ್ಲಭಭಾಯಿ ಪಟೇಲರಂತಹ ಕಾಂಗ್ರೆಸ್ಸಿನ ಪ್ರತಿಗಾಮೀ ನಾಯಕರಿಗೆ ಮೊದಲಿನಿಂದಲೂ ಎ.ಐ.ಟಿ.ಯು.ಸಿ.ಯ ಮೇಲೆ ಸಹಾನುಭೂತಿ ಇರಲಿಲ್ಲ. ಗಾಂಧೀಜಿಯವರಂತೂ ವರ್ಗ ಸಾಮರಸ್ಯದ ಪ್ರತಿಪಾದಕರಾಗಿದ್ದವರು. ಕಾರ್ಮಿಕ ವರ್ಗ ರಾಜಕೀಯದಿಂದ ದೂರವಿರಬೇಕೆಂದು ಬೋಧಿಸುತ್ತಿದ್ದವರು. ಇದರಿಂದಾಗಿ "ಮಜೂರ್ ಮಹಾಜನ್" ಎಂಬ ಹೆಸರಿನಲ್ಲಿ ೧೯೧೮ರಷ್ಟು ಹಿಂದೆಯೇ ಅವರು ಸ್ಥಾಪಿಸಿದ್ದ ಅಹಮದಾಬಾದಿನ ಗಿರಣಿ ಕಾರ್ಮಿಕರ ಸಂಘವು ಕಾರ್ಮಿಕ ಚಳವಳಿಯ ಮುಖ್ಯ ಪ್ರವಾಹದಿಂದ ಬೇರಾಗಿ ನಿಂತಿತ್ತು. ಆದುದರಿಂದ ೧೯೪೭ರಲ್ಲಿ ಕಾಂಗ್ರೆಸ್ ಪಕ್ಷವು "ಇಂಡಿಯನ್ ನ್ಯಾಷನಲ್ ಟ್ರೇಡ್ ಯೂನಿಯನ್ ಕಾಂಗ್ರೆಸ್ಸನ್ನು" (ಐ.ಎನ್.ಟಿ.ಯು.ಸಿ.) ಸ್ಥಾಪಿಸಿತು. ಕಾಂಗ್ರೆಸ್ ನಾಯಕತ್ವದಲ್ಲಿದ್ದ ಟ್ರೇಡ್ ಯೂನಿಯನ್ನುಗಳು ಎ.ಐ.ಟಿ.ಯು.ಸಿ.ಯಿಂದ ಸಿಡಿದವು. ೧೯೪೮ರಲ್ಲಿ ಕಾಂಗ್ರೆಸ್ಸಿನಿಂದ ಆಗ ಹೊರಬಂದಿದ್ದ ಸೋಷಲಿಸ್ಟ್ ಪಕ್ಷವು ತನ್ನದೇ ಆದ "ಹಿಂದ್ ಮಜದೂರ್ ಪಂಚಾಯತ್" ಎಂಬ ಇನ್ನೊಂದು ಕೇಂದ್ರೀಯ ಟ್ರೇಡ್ ಯೂನಿಯನ್ ಸಂಘಟನೆಯನ್ನು ಸ್ಥಾಪಿಸಿತು. ಅದೇ ವರ್ಷದ ಡಿಸೆಂಬರ್‌ನಲ್ಲಿ ರಾಯಿಸ್ಟರ "ಇಂಡಿಯನ್ ಫೆಡರೇಷನ್ ಆಫ್ ಲೇಬರ್" ಮತ್ತು "ಹಿಂದ್ ಮಜದೂರ್ ಪಂಚಾಯತ್"ಗಳು ಒಂದುಗೂಡಿ "ಹಿಂದ್ ಮಜದೂರ್ ಸಭಾ" ಜನ್ಮ ತಳೆಯಿತು. ಆದರೆ ಸೋಷಲಿಸ್ಟ್ ಪಕ್ಷದ ಆಂತರಿಕ ಭಿನ್ನಾಭಿಪ್ರಾಯಗಳಿಂದಾಗಿ, ಸ್ವಲ್ಪ ಸಮಯದ ನಂತರ, ಕೆಲವು ಸೋಷಲಿಸ್ಟ್ ಮುಖಂಡರು "ಹಿಂದ್ ಮಜದೂರ್ ಪಂಚಾಯತ"ನ್ನು ಪುನರುತ್ಥಾಪಿಸಿದರು. ೧೯೪೯ರಲ್ಲಿ ಕ್ರಾಂತಿಕಾರೀ ಸೋಷಲಿಸ್ಟ್ ಪಕ್ಷದ ಆಶ್ರಯದಲ್ಲಿ "ಯುನೈಟೆಡ್ ಟ್ರೇಡ್ ಯೂನಿಯನ್ ಕಾಂಗ್ರೆಸ್" ಸ್ಥಾಪಿಸಲ್ಪಟ್ಟಿತು. ೧೯೫೫ರಲ್ಲಿ ಜನಸಂಘವೂ ಟ್ರೇಡ್ ಯೂನಿಯನ್ ರಂಗಕ್ಕೆ ಕಾಲಿರಿಸಿ "ಭಾರತೀಯ ಮಜದೂರ್ ಸಂಘ"ಕ್ಕೆ ಜನ್ಮ ನೀಡಿತು. ೧೯೭೦ರಲ್ಲಿ ಮಾರ್ಕ್ಸಿಸ್ಟ್ ಪಕ್ಷವೂ ಎ.ಐ.ಟಿ.ಯು.ಸಿ.ಯಿಂದ ಸಿಡಿದು "ಸೆಂಟರ್ ಆಫ್ ಇಂಡಿಯನ್ ಟ್ರೇಡ್ ಯೂನಿಯನ್ಸ್" ಎಂಬ ಬೇರೊಂದು ಕೇಂದ್ರೀಯ ಸಂಘಟನೆಯನ್ನು ಸ್ಥಾಪಿಸಿತು.

**ಸರ್ವತೋಮುಖ ಮುನ್ನಡೆ**

ಈ ಒಡಕುಗಳೆಲ್ಲ ಕಾರ್ಮಿಕ ವರ್ಗದ ಐಕ್ಯ ಹೋರಾಟಕ್ಕೆ ಅಡ್ಡಿಯಾಗಿ ಪರಿಣಮಿಸಿದರೂ, ಸ್ವಾತಂತ್ರ್ಯ ದೊರೆತ ಕಳೆದ ೩೦ ವರ್ಷಗಳಲ್ಲಿ ಕಾರ್ಮಿಕ ಚಳವಳಿ ದೊಡ್ಡ ಮುನ್ನಡೆಯನ್ನು ಸಾಧಿಸಿದೆ. ಇ.ಎಸ್.ಐ., ಗ್ರಾಚುಯಿಟಿ, ಪ್ರಾವಿಡೆಂಟ್ ಫಂಡ್, ವೇತನ ಹೆಚ್ಚಳ, ಬೋನಸ್ ಹಕ್ಕು, ಕೆಲಸದ ಸ್ಥಿತಿಗತಿಗಳ ಸುಧಾರಣೆ, ಕನಿಷ್ಠ ಕೂಲಿ ನಿರ್ಧಾರ – ಇವೇ ಮೊದಲಾದ ಹಲವು ಸವಲತ್ತುಗಳನ್ನು ಪಡೆಯಲು ಅದಕ್ಕೆ ಸಾಧ್ಯವಾಗಿದೆ. ಈ ಕಾಲಘಟ್ಟದಲ್ಲಿ ಕೈಗಾರಿಕೆಗಳೂ ಬಹುಮುಖವಾಗಿ ಬೆಳೆದಿವೆ. ಅಂತೆಯೇ ಟ್ರೇಡ್ ಯೂನಿಯನ್‌ಗಳ ಸಂಖ್ಯೆ ಮತ್ತು ಅವುಗಳಲ್ಲಿ ಸಂಘಟಿತರಾಗಿರುವ ಕಾರ್ಮಿಕರ ಸಂಖ್ಯೆಯೂ ಹಾಗೆಯೇ ಹೆಚ್ಚಾಗಿದೆ. ಈ ಕುರಿತು ಇತ್ತೀಚಿನ ಅಂಕೆ ಸಂಖ್ಯೆಗಳೂ ಇನ್ನೂ ಪ್ರಕಟವಾಗಿಲ್ಲ. ಪೂರ್ಣ ಮಾಹಿತಿ ದೊರೆಯುವ ಕೊನೆಯ ವರ್ಷ ೧೯೬೯. ಆ ವರ್ಷ ಇದ್ದ ಒಟ್ಟು ರಿಜಿಸ್ಟರ್ಡ್ ಟ್ರೇಡ್ ಯೂನಿಯನ್ನುಗಳ ಸಂಖ್ಯೆ ೧೮,೪೬೦. ಅವುಗಳಲ್ಲಿ ಕೇಂದ್ರ ಕಾರ್ಮಿಕ ಖಾತೆಗೆ ವಾರ್ಷಿಕ ವರದಿ ಒಪ್ಪಿಸಿದ ಯೂನಿಯನ್ನುಗಳು ೮,೨೫೪. ಈ ಯೂನಿಯನ್ನುಗಳಲ್ಲಿದ್ದ ಒಟ್ಟು ಸದಸ್ಯತ್ವ ೪೮,೬೬,೦೦೦. ಅಂದರೆ, ಒಂದೊಂದು ಯೂನಿಯನ್ನಿನ ಸರಾಸರಿ ಸದಸ್ಯ ಸಂಖ್ಯೆ ೫೮೮. (ಭಾರತ ಸರಕಾರ : ಪಾಕೆಟ್ ಬುಕ್ ಆಫ್ ಲೇಬರ್ ಸ್ಟಾಟಿಸ್ಟಿಕ್ಸ್) ಸರಕಾರದ ಈ ಕೈಪಿಡಿಯಲ್ಲಿರುವ ೧೯೭೧ರ ಅಪೂರ್ಣ ವರದಿಯಂತೆ ಒಟ್ಟು ಟ್ರೇಡ್ ಯೂನಿಯನ್ನುಗಳ ಸಂಖ್ಯೆ ಆಗ ೨೧,೩೪೦ಕ್ಕೆ ಏರಿತ್ತು. ಮೇಲಿನ ಸರಾಸರಿಯಂತೆ ಲೆಕ್ಕ ಮಾಡಿದರೆ, ೧೯೭೧ರಲ್ಲಿ ಟ್ರೇಡ್ ಯೂನಿಯನ್‌ಗಳಲ್ಲಿ ಸಂಘಟಿತರಾದ ಕಾರ್ಮಿಕರ ಸಂಖ್ಯೆ ಸುಮಾರು ಒಂದು ಕೋಟಿ ಇಪ್ಪತ್ತೈದು ಲಕ್ಷಗಳಿತ್ತೆಂದು ಅಂದಾಜು ಮಾಡಬಹುದು. ಈಗ ಈ ಸಂಖ್ಯೆ ಸುಲಭವಾಗಿ ಒಂದೂವರೆ ಕೋಟಿಯನ್ನು ಮೀರಿರಬಹುದು. ಆದರೆ, ಇವುಗಳಲ್ಲಿ ಅನೇಕ ಯೂನಿಯನ್ನುಗಳು ಎ.ಐ.ಟಿ.ಯು.ಸಿ. ಮುಂತಾದ ಯಾವ ಕೇಂದ್ರೀಯ ಸಂಘಟನೆಗಳಿಗೂ ಸೇರದವುಗಳು. ಕೇಂದ್ರೀಯ ಸಂಘಟನೆಗಳಿಗೆ ಸೇರ್ಪಡೆಯಾದ ಯೂನಿಯನ್ನುಗಳ ಸದಸ್ಯತ್ವ ಈಗ ಸುಮಾರು ೪೦ ಲಕ್ಷಗಳಷ್ಟಿರಬಹುದೆಂದು ಅಂದಾಜು.

*(ಮುಂದುವರಿಯುವುದು)*






**ಮಬ್ಬುಗತ್ತಲ ಮಣ್ಣ ಹಣತೆ** (ಕಥಾ ಸಂಕಲನ)

ಮಾರುತಿ ದಾಸಣ್ಣವರ

**ಪುಟ :** ೯೨

**ಬೆಲೆ : ರೂ.** ೭೦

**ಸುಭಾಷ್ ಎಂಟರ್ ಪ್ರೈಸಸ್,** ಮೈಸೂರು

ಮುಗ್ಧ ಹಳ್ಳಿಯ ಬದುಕನ್ನು ಆರ್ದ್ರವಾಗಿ ಅನುಭವಿಸಿರುವ ಕಥೆಗಾರ ಮಾರುತಿ ದಾಸಣ್ಣವರ ಅವರದು ಜೀವಪರ ಕಾಳಜಿಯುಳ್ಳ ಮನಸ್ಸು. ಅವರು ಒಂದಾನೊಮ್ಮೆ ಜಾತಿಕಾರಣವಾಗಿಯೇ ಅನುಭವಿಸಿರುವ ನೋವು, ಸಂಕಟ, ಹಸಿವು, ಬಡತನ, ಅಪಮಾನ – ಇವೆಲ್ಲವುಗಳನ್ನು ಮೀರಿಯೂ ವರ್ತಮಾನ ಸಂದರ್ಭದಲ್ಲಿ ಮತ್ತೆ ಮತ್ತೆ ಮನುಷ್ಯ ಸಂಬಂಧಗಳಲ್ಲಿಯೇ ನಂಬಿಕೆಯಿಟ್ಟವರು. ಆ ನಂಬಿಕೆಯಿಂದಾಗಿಯೇ ತನ್ನವೇ ಸಂಬಂಧಗಳ ಪೊರೆಯನ್ನು ಕಳಚಿಕೊಂಡು, ಆಧುನಿಕ ಭೋಗ ಜಗತ್ತಿನ ಲೋಲುಪತೆಗೆ ಬಿದ್ದಿರುವ ಮನುಷ್ಯ, ಸ್ವಾರ್ಥಿಯಾಗುತ್ತ ನಿಜದ ಸುಖದಿಂದ ವಂಚಿತನಾಗುತ್ತಿರುವುದಕ್ಕೆ ಅವರು ಕಳಕಳಿ ವ್ಯಕ್ತಪಡಿಸುತ್ತಾರೆ. ಅಂತೆಯೇ, ಅವರ 'ಮಬ್ಬುಗತ್ತಲ ಮಣ್ಣ ಹಣತೆ' ಕಥಾ ಸಂಕಲನವು ಗ್ರಾಮೀಣ ಬದುಕನ್ನು ಉತ್ತೇಜಿಸುವ, ಮನುಷ್ಯನನ್ನು ನೀರಸವಾದ ಯಾಂತ್ರಿಕ ಬದುಕಿನಿಂದ ವಿಮುಖನಾಗಿಸಿ, ಆರ್ದ್ರವಾದ ಅಂತಃಕರಣ ಮಿಡಿಯುತ್ತಲೇ ಗಾಢವಾದ ಸಂಬಂಧಗಳನ್ನು ಬೆಸೆಯುವ ಅನನ್ಯ ಬದುಕಿನತ್ತ ಹೆಜ್ಜೆ ಹಾಕುವ ಅನಿವಾರ್ಯತೆಯ ಈ ಸಂಧಿಕಾಲದ ಭರವಸೆಯ ಬೆಳಕಿನಂತಿದೆ. ಪ್ರಸ್ತುತ ಈ ಕಥಾ ಸಂಕಲನದಲ್ಲಿರುವ ಎಲ್ಲ ಕಥೆಗಳು ಮನುಷ್ಯ ಸಂಬಂಧಗಳ ಕುರಿತು, ಜಾತಿ ಕಾರಣವಾಗಿ ಉಂಟಾಗುವ ಮನೋಸ್ಥಿತಿಗಳನ್ನು ಜಾಣ್ಮೆಯ ನೆಲೆಯಲ್ಲಿ ತಿಳಿಗೊಳಿಸಬೇಕಾದ ಸಂಗತಿಗಳ ಕುರಿತು ಮತ್ತು ಗ್ರಾಮ ಬದುಕಿನ ಜೀವನೋತ್ಸಾಹದ ಕುರಿತು ಹೇಳುತ್ತಲೇ ಯಾವತ್ತಿಗೂ ಕೂಡ ಇವೆಲ್ಲವನ್ನು ಒಳಗೊಂಡಿರುವ, ನಾವೆಲ್ಲ ಹೊಂದಿರಲೇಬೇಕಾದ ಅನೂಹ್ಯ ಲೋಕವೊಂದನ್ನು ಅನಾವರಣ ಮಾಡುತ್ತವೆ.

**ಜಾಗತೀಕರಣ, ಶಿಕ್ಷಣ ಮತ್ತು ಸಮಾಜ** ಜಿ. ಎಸ್. ಜಯದೇವ

**ಪುಟ :** ೧೬೮ **ಬೆಲೆ : ರೂ.** ೧೫೦

**ಅಭಿರುಚಿ ಪ್ರಕಾಶನ,** ೩೮೬, ೧೪ನೆಯ ಮುಖ್ಯರಸ್ತೆ, ೩ನೆಯ ಅಡ್ಡರಸ್ತೆ, ಸರಸ್ವತೀಪುರಂ, ಮೈಸೂರು – ೫೭೦ ೦೦೯

ಜಿ. ಎಸ್. ಜಯದೇವ ಅವರ 'ಜಾಗತೀಕರಣ, ಶಿಕ್ಷಣ ಮತ್ತು ಸಮಾಜ' ಕೃತಿ, ಶಿಕ್ಷಣದ ಸಾರ್ವತ್ರೀಕರಣ ಸಾಧ್ಯವಾಗಿರುವ ಆಧುನಿಕ ಶತಮಾನದ ಈ ಸಂದರ್ಭದಲ್ಲಿನ ಶಿಕ್ಷಣ ಕ್ರಮವು ಪ್ರಗತಿಯ ನೆಪದಲ್ಲಿ ನಾವೇ ಸೃಷ್ಟಿಸಿಕೊಂಡ ಬದುಕಿನ ಕೃತಕ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲು ಮಾತ್ರ ನಮ್ಮನ್ನು ಸಿದ್ಧಗೊಳಿಸುತ್ತಿರುವುದರಿಂದ ಉಂಟಾಗುತ್ತಿರುವ ಸಾಮಾಜಿಕ, ಸಾಂಸ್ಕೃತಿಕ ಮತ್ತು ನೈತಿಕ ಸ್ಥಿತ್ಯಂತರಗಳ ಬಗ್ಗೆ ಸ್ಥಳೀಯ ವಿಚಾರಗಳನ್ನು ಗಮನದಲ್ಲಿಟ್ಟುಕೊಂಡು ಆಧುನಿಕ ಶಿಕ್ಷಣ ಪದ್ಧತಿಯ ಬಿಕ್ಕಟ್ಟುಗಳನ್ನು ಶೋಧಿಸುತ್ತದೆ. ಇಂದಿನ ಶಿಕ್ಷಣವು ತಾಂತ್ರಿಕ ಪ್ರಗತಿಯನ್ನು ಗಮನದಲ್ಲಿಟ್ಟುಕೊಂಡು, ನಾವು ಅನಿವಾರ್ಯವಾಗಿ ತಾಂತ್ರಿಕತೆಯನ್ನು ಕಲಿಯಬೇಕಾದ ಒತ್ತಡ, ಅನಾರೋಗ್ಯಕರವಾದ ಸ್ಪರ್ಧೆಯ ನಡುವೆ ಗೆದ್ದು ಬರಬೇಕಾದ ಅನಿವಾರ್ಯತೆಯನ್ನು ಎದುರಿಸುವ ನಿಟ್ಟಿನಲ್ಲಿ ನಮ್ಮನ್ನು ಸಿದ್ಧಗೊಳಿಸುತ್ತದೆಯೇ ವಿನಾ ಈ ಅವೈಜ್ಞಾನಿಕ ಕ್ರಿಯೆಯನ್ನು ಎದುರಿಸಬಲ್ಲ ಮನೋಬಲವನ್ನು ನಮ್ಮಲ್ಲಿ ತುಂಬುತ್ತಿಲ್ಲ. ಅಲ್ಲದೆ, ಮಕ್ಕಳಲ್ಲಿ ಕೃತಕ ಕನಸುಗಳನ್ನು ಬಿತ್ತುವ ನಿಟ್ಟಿನಲ್ಲಿ ಕಾರ್ಯಗತವಾಗಿರುವ, ಜಾಗತೀಕರಣ ಪ್ರಕ್ರಿಯೆಯ ಪ್ರಭಾವಕ್ಕೆ ಒಳಗಾಗಿರುವ ಇಂದಿನ ಶಿಕ್ಷಣವು ಸಾಂಪ್ರದಾಯಿಕ ವೃತ್ತಿ ಮತ್ತು ಸರಳ ಜೀವನದಿಂದ ದಕ್ಕುವ ಸಂತೋಷದಿಂದ ಅವರನ್ನು ಹೇಗೆಲ್ಲ ವಂಚಿತರನ್ನಾಗಿಸುತ್ತದೆ ಎಂಬುದನ್ನು ಲೇಖಕರು ಈ ಕೃತಿಯಲ್ಲಿ ಸಾದ್ಯಂತವಾಗಿ ಚರ್ಚಿಸಿದ್ದಾರೆ.



**ಅರಿವಿನ ಹರಿಗೋಲು** (ಕವನ ಸಂಕಲನ) ಕೆ. ಬಿ. ವೀರಲಿಂಗನಗೌಡ್ರ

**ಪುಟ :** ೬೪ **ಬೆಲೆ : ರೂ.** ೬೦

**ನಿರಂತರ ಪ್ರಕಾಶನ,** ಬೆಟಗೇರಿ, ಗದಗ – ೫೮೨ ೧೦೨

ಕಾವ್ಯವು ಅನುಭವದ ಮೂಲಕವೇ ಅನಾವರಣವಾಗಬೇಕಾಗಿರುವುದರಿಂದ ಕವಿ ಆದವನು ತನ್ನ ಸುತ್ತಲಿನ ವಸ್ತುಪ್ರಪಂಚ, ಸಂಗತಿ, ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಿ, ಅದಕ್ಕೆ ಮಾತು ಕೊಡುವ ಗುಣವನ್ನು ಅಳವಡಿಸಿಕೊಂಡಿರಬೇಕು. ಈ ಮೂಲಕ, ತಾನು ಕಂಡುಂಡ ಅನುಭವಗಳ ಕುರಿತಾದ ಆತಂಕ, ತಲ್ಲಣ, ಸಂಕಟ, ಚಡಪಡಿಕೆ, ಸಂತೋಷ, ಸಂತೃಪ್ತಿ – ಇವೆಲ್ಲವೂ ಕವಿಯ ಏಕಾಗ್ರ ಧ್ಯಾನದಲ್ಲಿರಬೇಕು. ಹೀಗೆ ಒಳಗಿನ ಈ ಅಂಶಗಳೆಲ್ಲವೂ ಸೇರಿ ಹೊರಗಿನ ಸೃಜನಶೀಲ ಅಭಿವ್ಯಕ್ತಿ ಎಂಬಂತೆಯೇ ಕಾವ್ಯ ಹುಟ್ಟಬೇಕು. ಇಂಥ ಕವಿತೆ ಎಲ್ಲ ಕಾಲಕ್ಕೂ ಸಲ್ಲುವಂತಿರುತ್ತದೆ. ಈ ಮಾತಿಗೆ ಪೂರಕವೆಂಬಂತೆ, ಕೆ. ಬಿ. ವೀರಲಿಂಗನಗೌಡ್ರ ಅವರ 'ಅರಿವಿನ ಹರಿಗೋಲು' ಕವನ ಸಂಕಲನದಲ್ಲಿನ ಕವಿತೆಗಳೂ ಸಹ ಇವೆ. ಈ ಸಂಕಲನದಲ್ಲಿರುವ ಕವಿತೆಗಳು, ವರ್ತಮಾನ ಸಂದರ್ಭದಲ್ಲಿ ಸ್ವಾರ್ಥಕಾರಣವಾಗಿ ರಾಜಕಾರಣಿಗಳು ಆಗಾಗ ಜಾರಿಗೆ ತರುವ ಕಾಯಿದೆ–ಕಾನೂನುಗಳಿಂದಾಗಿ ಪ್ರಜಾಪ್ರಭುತ್ವ ವ್ಯವಸ್ಥೆಯ ಮೌಲ್ಯಗಳು ಕುಸಿಯುತ್ತಿರುವ ಬಗ್ಗೆ, ಏನಕೇನ ಕಾರಣಗಳಿಂದಾಗಿ ಮನುಷ್ಯನಲ್ಲಿ ಹುಟ್ಟಿಕೊಳ್ಳುವ ಕೇಡಿನ ಗುಣಗಳ ಹಿಂದಿನ ಕಾರಣಗಳ ಬಗ್ಗೆ, ಮನುಷ್ಯ ಬದುಕಿಗೆ ವಿರೋಧಿಯಾದ ಸರಕಾರದ ಧೋರಣೆಗಳ ಬಗ್ಗೆ, ಜಾತಿ ಕಾರಣವಾಗಿಯೇ ಛಿದ್ರಗೊಳ್ಳುತ್ತಿರುವ ಮನಸ್ಸುಗಳ ಬಗ್ಗೆ, ಧರ್ಮ ರಾಜಕಾರಣವು ತಂದೊಡ್ಡಿರುವ ಅಪಾಯಗಳ ಬಗ್ಗೆ – ಇನ್ನೊಂದು ನೆಲೆಯಲ್ಲಿ ಓದುಗನನ್ನು ಆಳವಾಗಿ ಚಿಂತನೆಗೀಡುಮಾಡುತ್ತವೆ. ಒಂದು ರೀತಿಯಲ್ಲಿ, ಇಲ್ಲಿನ ಅಷ್ಟೂ ಕವಿತೆಗಳು ಮೊದಲ ಓದಿನಲ್ಲಿಯೇ ಆರ್ದ್ರವಾಗಿ ತಟ್ಟುತ್ತವೆ; ಆಪ್ತವಾಗಿ ಆವರಿಸುತ್ತವೆ.

**ಆ ಬದಿಯ ಹೂವು** (ಕಥಾ ಸಂಕಲನ) ದೀಪ್ತಿ ಭದ್ರಾವತಿ

**ಪುಟ :** ೧೦೪ **ಬೆಲೆ : ರೂ.** ೯೦

**ಗೀತಾಂಜಲಿ ಪುಸ್ತಕ ಪ್ರಕಾಶನ,** ಶಿವಮೊಗ್ಗ



'ಆ ಬದಿಯ ಹೂವು' ಸೂಕ್ಷ್ಮಸಂವೇದನೆಗಳ ಕಥೆಗಾರ್ತಿ ದೀಪ್ತಿ ಭದ್ರಾವತಿಯವರ ಮೊದಲ ಕಥಾ ಸಂಕಲನ. ತನ್ನ ಸುತ್ತಲಿನ ಲೋಕದ ಸಂಗತಿಗಳನ್ನು ಚಿಕಿತ್ಸಕ ದೃಷ್ಟಿಯಿಂದ ನೋಡುವ ಗುಣವನ್ನು ಬೆಳೆಸಿಕೊಂಡಿರುವ ಇವರು, ಕಂಡುಂಡ ಬದುಕಿನ ಅನುಭವದ ಚಿತ್ರಗಳನ್ನು ಅಷ್ಟೇ ಸಮರ್ಥವಾಗಿ ಕಥೆಯಾಗಿಸುತ್ತಾರೆ. ತಮ್ಮ ಕಥೆಗಳಲ್ಲಿ, ಯಾರಾದರೂ ನಿರ್ಲಕ್ಷಿಸಬಹುದಾದ ಅತ್ಯಂತ ಕ್ಷುಲ್ಲಕವಾದ ಸೂಕ್ಷ್ಮ ಅನುಭವಗಳನ್ನು ವಿಶಿಷ್ಟವಾದ ಗ್ರಹಿಕೆಯ ನೆಲೆಯಲ್ಲಿ ಒಳಗೊಳಿಸುತ್ತಲೇ ಅದನ್ನೊಂದು ಸುಂದರವಾದ ಆಕೃತಿಯನ್ನಾಗಿಸುತ್ತಾರೆ. ಪ್ರಸ್ತುತ, 'ಆ ಬದಿಯ ಹೂವುಗಳು' ಕಥಾ ಸಂಕಲನದಲ್ಲಿನ ಕಥೆಗಳಲ್ಲಿ ಕಾಲಾಂತರದಲ್ಲಿ ಮನುಷ್ಯ ಬದುಕಿನಲ್ಲುಂಟಾಗುವ ಸ್ಥಿತ್ಯಂತರಗಳು ಅದರ ಆಳದಲ್ಲಿ ಉಂಟುಮಾಡುವ ತಲ್ಲಣಗಳು; ನಂಬಿಕೆಗಳು – ಸಹಜವಲ್ಲದ ಸಂಬಂಧಗಳು ತಂದೊಡ್ಡುವ ಅಪಾಯಗಳು; ಸ್ವಾರ್ಥಕಾರಣವಾಗಿ ಛಿದ್ರಗೊಳ್ಳುವ ಮನಸ್ಸುಗಳ ವಿಕಾರತೆ; ಜಾಗತೀಕರಣ, ನಗರೀಕರಣ, ಉದಾರೀಕರಣ ಮತ್ತು ಕೈಗಾರಿಕೀಕರಣ ಪ್ರಕ್ರಿಯೆಗಳು ತಂದೊಡ್ಡುತ್ತಿರುವ ಅಪಾಯಗಳು; ಮನುಷ್ಯನ ಆಂತರ್ಯದಲ್ಲಿನ ನೋವು, ಸಂಕಟ, ಹತಾಶೆ, ಪಾಪಪ್ರಜ್ಞೆ – ಇವೆಲ್ಲವುಗಳನ್ನು ವರ್ತಮಾನ ಸಂದರ್ಭದಲ್ಲಿ ಸಂಭವಿಸಬಹುದಾದ ಘಟನೆಗಳೊಂದಿಗೆ ಸಮೀಕರಿಸಿ ಹೇಳುತ್ತಾರೆ. ಒಂದು ಅರ್ಥದಲ್ಲಿ ದೀಪ್ತಿಯವರು, ಮಹಿಳಾ ಸಂವೇದನೆಯ ಕಥೆಗಳು ಎಂಬ ಚೌಕಟ್ಟನ್ನು ಮೀರಿ ಕಣ್ಣ ಮುಂದಿನ ವಾಸ್ತವವನ್ನು ತಮ್ಮ ಕಲ್ಪನೆಯಲ್ಲಿ ಮರುಸೃಷ್ಟಿಸುತ್ತ ಹೊಸ ವಾಸ್ತವವನ್ನು ಇಲ್ಲಿನ ಕಥೆಗಳಲ್ಲಿ ಕಟ್ಟಿದ್ದಾರೆ.

– **ಕಲ್ಲೇಶ್ ಕುಂಬಾರ್,** ಹಾರೂಗೇರಿ, ಬೆಳಗಾವಿ




# ಹುಚ್ಚು ಹೊಳೆಯಾಗಿ ಹರಿದು ಬಂದ ಗಾರ್ಮೆಂಟ್ಸ್ ಮಹಿಳೆಯರ ಆಕ್ರೋಶ

**ಕ**ಳೆದ ತಿಂಗಳು ಬೆಂಗಳೂರು ಸುತ್ತಲಿನ ಬೊಮ್ಮನಹಳ್ಳಿ, ಜಾಲಹಳ್ಳಿ ಕ್ರಾಸ್, ಗೊರಗುಂಟೆಪಾಳ್ಯ ಮತ್ತು ಮದ್ದೂರು, ಶ್ರೀರಂಗಪಟ್ಟಣ, ಮಂಡ್ಯದಲ್ಲಿರುವ ಗಾರ್ಮೆಂಟ್ಸ್ ಫ್ಯಾಕ್ಟರಿಗಳಲ್ಲಿ ಕೆಲಸ ಮಾಡುವ ಮಹಿಳಾ ಕಾರ್ಮಿಕರು ಬೀದಿಗಳಲ್ಲಿ ಹುಚ್ಚೆದ್ದ ನದಿಗಳಂತೆ ಹರಿದು ಬಂದರು. ಪೊಲೀಸರು ತಡೆಯೊಡ್ಡಲು ಹರಸಾಹಸ ಪಡಬೇಕಾಯಿತು. ತಡೆಯಲು ಅಸಾಧ್ಯವಾದಾಗ ಲಾಠಿಯನ್ನು ಬೇಕಾಬಿಟ್ಟಿ ಬೀಸಿದರು. ಪಿಎಫ್ ಎಂಬ ತಮ್ಮ ಆಪದ್ಧನವನ್ನು ಕಾಪಾಡಿಕೊಳ್ಳಲು ಕಾರ್ಮಿಕರು ಸೆಡ್ಡು ಹೊಡೆದು ನಿಂತರು. ನಗರ ಸಂಚಾರ ಅಸ್ತವ್ಯಸ್ತವಾಯಿತು, ಪರಿಸ್ಥಿತಿ ಪ್ರಕ್ಷುಬ್ಧಗೊಂಡಿತು. ಕಾನೂನು ಸುವ್ಯವಸ್ಥೆಯ ಹಿನ್ನೆಲೆಯಲ್ಲಿ ಕಾರ್ಮಿಕರ ವರ್ತನೆ ಗೂಂಡಾಗಿರಿ, ಕಾನೂನುಬಾಹಿರ ಎನಿಸಿಕೊಂಡಿತು. ಈ ಬಡ ಗಾರ್ಮೆಂಟ್ಸ್ ಮಹಿಳೆಯರೇಕೆ ಹುಚ್ಚೆದ್ದ ನದಿಯಂತೆ ಬೀದಿಗಿಳಿದು ಜನಸಂಚಾರವನ್ನು ಅಡ್ಡಿಪಡಿಸಿದರು ಎಂಬುದರ ಹಿನ್ನೆಲೆಯನ್ನು ಅರಿತುಕೊಂಡರೆ ಅವರ ವರ್ತನೆಗೊಂದು ಅರ್ಥ ಸಿಗಬಹುದು. ಈ ಲೇಖನ ಅಂಥದೊಂದು ಪ್ರಯತ್ನವಾಗಿದೆ.

ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣದ ಹೊಡೆತದಲ್ಲಿ ಸಾರ್ವಜನಿಕ ವಲಯದ ಉದ್ದಿಮೆಗಳು ಮುಚ್ಚಿಹೋಗುತ್ತಿದ್ದು, ಅಸಂಘಟಿತವಲಯ ಹಿಗ್ಗುತ್ತಿದೆ. ಈ ವಲಯದಲ್ಲಿ ಶಿಕ್ಷಣ/ತರಬೇತಿಗಳಿಲ್ಲದ ಅಸಂಖ್ಯಾತ ಬಡಜನರೇ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಅಸಂಘಟಿತ ವಲಯದಲ್ಲಿ ಬಹು ಮುಖ್ಯವಾದ ಸಿದ್ಧ ಉಡುಪು ಉದ್ಯಮದಲ್ಲಿ ಮಹಿಳೆಯರೇ ಅತಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇವರಲ್ಲಿ ಬಹುಪಾಲು ಮಹಿಳೆಯರು ಆವಲಹಳ್ಳಿ, ನಾಯಂಡಳ್ಳಿ, ಬೊಮ್ಮನಹಳ್ಳಿ, ಕೆಂಚೆನಹಳ್ಳಿ, ಬ್ಯಾಟರಾಯನಪುರ, ಬನ್ನಿಕುಪ್ಪೆ , ಶ್ರೀರಂಗಪಟ್ಟಣ, ಮದ್ದೂರು, ರಾಮನಗರದಂತಹ... ಗ್ರಾಮೀಣ ಪ್ರದೇಶಗಳಿಂದ ವಲಸೆ ಬಂದಿರುವ ದಲಿತ, ಹಿಂದುಳಿದ ಜಾತಿಗೆ ಸೇರಿದವರು ಹಾಗೂ ಅಲ್ಪಸಂಖ್ಯಾತರು. ಅಲ್ಲದೆ ಏಕಾಂಗಿಯಾಗಿ ಕುಟುಂಬದ ಜವಾಬ್ದಾರಿ ಹೊತ್ತಿರುವವರು. ಅತಿದೊಡ್ಡ ಹಾಗೂ ಉತ್ತಮಗುಣಮಟ್ಟದ ಸಿದ್ಧ ಉಡುಪು ಉತ್ಪಾದನೆಯ ನಗರವೆಂದು ಗುರುತಿಸಿಕೊಂಡಿರುವ ಬೆಂಗಳೂರಿನಲ್ಲಿ ಸುಮಾರು ೯೨೦ ಕಾರ್ಖಾನೆಗಳಿದ್ದು, ಸುಮಾರು ೫ ಲಕ್ಷದಷ್ಟು ಕಾರ್ಮಿಕರು ಕೆಲಸ ಮಾಡುತ್ತಿದ್ದಾರೆ. ಈ ಉದ್ದಿಮೆ ಲಕ್ಷಾಂತರ ಮಹಿಳೆಯರಿಗೆ ಉದ್ಯೋಗ ನೀಡಿರುವುದು ನಿಜವೇ. ಆದರೆ ಅವರೆಲ್ಲರೂ ಉದ್ಯೋಗ ಭದ್ರತೆಯಾಗಲಿ, ನ್ಯಾಯಬದ್ಧ ಸವಲತ್ತುಗಳಾಗಲಿ ಇಲ್ಲದೆ ಸರ್ಕಾರ ನಿಗದಿಪಡಿಸಿರುವ ಬಿಡಿಗಾಸಿನ ಕನಿಷ್ಠ ವೇತನಕ್ಕೆ ದುಡಿಯುತ್ತ ಬಡತನದ ಹೊರೆಯಿಂದ ತತ್ತರಿಸುತ್ತಿದ್ದಾರೆ. ಈ ಮಹಿಳೆಯರಿಗೆ ಕೂಲಿ ಮಾಡುವುದಕ್ಕಿಂತ, ಮನೆಗೆಲಸ ಮಾಡುವುದಕ್ಕಿಂತ ಬ್ಯಾಗು ನೇತುಹಾಕಿಕೊಂಡು ಫ್ಯಾಕ್ಟರಿಗೆಂದು ಹೋಗುವುದು ಕೊಂಚ ಹೆಮ್ಮೆಯ ವಿಷಯ ಎನ್ನುವುದನ್ನು ಬಿಟ್ಟರೆ ಉಳಿದಂತೆ ಇವರು ಮಾಡುತ್ತಿರುವುದು ಜೀತಗಾರಿಕೆಯೇ.

ಬಡತನದಲ್ಲಿ ದಾರುಣವಾದ ಬದುಕನ್ನು ಸಾಗಿಸುತ್ತಿರುವ ಕಾರ್ಮಿಕರಿಗೆ ಕೇಂದ್ರ ಸರ್ಕಾರವು ಇತ್ತೀಚೆಗೆ ಪಿಎಫ್ ಕಾಯ್ದೆಗೆ ತಿದ್ದುಪಡಿ ತರುವ ಮೂಲಕ ಮಾರಣಾಂತಿಕ ಪೆಟ್ಟು ನೀಡಲು ಹೊರಟಿತ್ತು. ಕೇವಲ ಸಂಬಳದಿಂದ ತಮ್ಮ ಜೀವನ ನಡೆಸಲು ಸಾಧ್ಯವಾಗದ ಕಾರ್ಮಿಕರು ಮಕ್ಕಳ ಓದು, ಮನೆ ಭೋಗ್ಯ, ಮಕ್ಕಳ ಮದುವೆ, ಕಾಯಿಲೆ ಇತ್ಯಾದಿ ಖರ್ಚಿನ ಬಾಬತ್ತಿಗೆ ಅವಲಂಬಿಸುವುದು ಸುಲಭವಾಗಿ ಸಿಗುವ ಪಿಎಫ್ ಹಣವನ್ನೇ. ಪಿಎಫ್ ಹಣ ಅವರ ತುರ್ತಿಗಿರುವ ಆಪದ್ಧನ. ಹಾಗಾಗಿ ತಿದ್ದುಪಡಿ ತಂದಾಗಿನಿಂದ ಕಾರ್ಮಿಕರು ಆತಂಕಕ್ಕೀಡಾಗಿದ್ದರು. ಯಂತ್ರಗಳಂತೆ ದುಡಿಸಿಕೊಳ್ಳುವುದು ಮತ್ತು ಆಸರೆ ಎಂದು ನಂಬಿದ್ದ ಇಡುಗಂಟನ್ನು ಕಳೆದುಕೊಳ್ಳುವ ಅಭದ್ರತೆಯಿಂದ ಮಡುಗಟ್ಟಿದ್ದ ಆಕ್ರೋಶವು ಪಿಎಫ್ ಸಿಗದು ಎಂಬ ಸುದ್ದಿಯಿಂದಾಗಿ ಒಮ್ಮೆಲೆ ಸ್ಫೋಟಗೊಂಡಿತು. ಸ್ಫೋಟವನ್ನಷ್ಟೇ ಕಂಡು ಅದರ ಹಿಂದಿನ ಬವಣೆಯನ್ನು ಕಾಣದವರಿಗೆ ಇದೊಂದು ಪಿತೂರಿ ಎನ್ನಿಸಿತು.

**ದು. ಸರಸ್ವತಿ**
**ಪ್ರತಿಭಾ**

ಈ ಬಡ ಮಹಿಳೆಯರು ಉಡುಪುಗಳನ್ನು ಸಿದ್ಧಪಡಿಸುವುದು ಗ್ಯಾಪ್, ನೈಕಿ, ವಾಲ್ಮಾರ್ಟ್, ಲೀ, ಲೀವಿಸ್, ರ್‍ಯಾಂಗ್ಲರ್, ಪೀಟರ್ ಇಂಗ್ಲೆಂಡ್ ಎಂಬಿತ್ಯಾದಿ ಜಗದ್ವಿಖ್ಯಾತ ಪ್ರತಿಷ್ಠಿತ ಬ್ರಾಂಡುಗಳಿಗೆ ಮತ್ತು ಅವು ಮಾರಾಟವಾಗುವುದು ಅಮೆರಿಕಾ, ಯೂರೋಪ್, ಆಸ್ಟ್ರೇಲಿಯಾ, ಜಪಾನ್ – ಹೀಗೆ ಜಗತ್ತಿನಾದ್ಯಂತ ಇರುವ ಪ್ರಸಿದ್ಧ ಮಾರುಕಟ್ಟೆಗಳಿಗೆ. ಉಡುಪುಗಳು ತಯಾರಾಗುವುದು ಗೋಕಲ್‌ದಾಸ್ ಎಕ್ಸ್‌ಪೋರ್ಟ್ಸ್, ಬಾಂಬೆ ರೇಯಾನ್ ಫ್ಯಾಷನ್ಸ್ ಲಿ., ಟೆಕ್ಸ್‌ಪೋರ್ಟ್ಸ್ ಗ್ರೂಪ್ ಆಫ್ ಕಂಪನೀಸ್, ಶಾಹಿ ಎಕ್ಸ್‌ಪೋರ್ಟ್ಸ್‌ನಂತಹ ಸ್ಥಳೀಯ ಕಂಪನಿಗಳಲ್ಲಿ. ಈ ಕಂಪನಿಗಳು ಹಲವಾರು ಘಟಕಗಳನ್ನು ಹೊಂದಿದ್ದು, ವರ್ಷಕ್ಕೆ ೧೦೦ರಿಂದ ೧೦೦೦ ಕೋಟಿಗೂ ಹೆಚ್ಚಿನ ವಾಹಿವಾಟು ನಡೆಸುತ್ತಿದ್ದು, ೧೦ರಿಂದ ೩೦ ಸಾವಿರಕ್ಕೂ ಮೀರಿ ಕಾರ್ಮಿಕರಿಗೆ ನೌಕರಿ ನೀಡುತ್ತಿವೆ. ಅತಿ ಹೆಚ್ಚಿನ ವಿದೇಶಿ ವಿನಿಮಯವನ್ನು ತಂದುಕೊಡುವ ಈ ಉದ್ಯಮವು ಉಲ್ಲಂಘನೆ ಮಾಡಿರುವ ಕಾರ್ಮಿಕ ಕಾನೂನುಗಳನ್ನು ಅರ್ಥಮಾಡಿಕೊಂಡರೆ ಅಲ್ಲಿನ ಪರಿಸ್ಥಿತಿ ಯಾರಿಗಾದರೂ ಅರ್ಥವಾಗಬಹುದು.




**ಸಿದ್ಧ ಉಡುಪು ಉದ್ಯಮ ಉಲ್ಲಂಘಿಸಿರುವ ಕಾನೂನುಗಳು**

ವೇತನ ಪಾವತಿ ಕಾಯ್ದೆ ೧೯೩೬ರ ಅನ್ವಯ ಗಂಡ, ಹೆಂಡತಿ, ಇಬ್ಬರು ಮಕ್ಕಳು ಸೇರಿ ೪ ಜನರ ಕುಟುಂಬವು ಊಟ, ಬಟ್ಟೆ, ವಸತಿ, ಮನರಂಜನೆಯೊಂದಿಗೆ ಗೌರವಯುತವಾಗಿ ಬದುಕಲು ಬೇಕಾಗುವಷ್ಟು ವೇತನ ನೀಡಬೇಕು. ಮತ್ತು ಸೂಕ್ತ ಕಾರಣ ನೀಡಿ ಕಾನೂನುಬದ್ಧವಾಗಿ ವಜಾ ಮಾಡಿದ ಸಂದರ್ಭದಲ್ಲಿ ೨ ದಿನಗಳ ಒಳಗೆ ಪಾವತಿಸಬೇಕು. ವಾಸ್ತವದಲ್ಲಿ ಇಂದಿಗೂ ಕಾರ್ಮಿಕರಿಗೆ ಸಿಗುತ್ತಿರುವುದು ಕನಿಷ್ಠ ವೇತನ ತಿಂಗಳಿಗೆ ೪೪೯೨ ರೂ. ಮಾತ್ರ. ಯಾವುದೇ ಸೂಚನೆಯಿಲ್ಲದೆ, ಸೂಕ್ತ ಕಾರಣವೂ ಇಲ್ಲದೆ ಕೆಲಸದಿಂದ ತೆಗೆಯುವುದು ಅದೆಷ್ಟು ಮಾಮೂಲಿ ವಿಷಯವೆಂದರೆ ಇಂದು ಕೆಲಸಕ್ಕೆ ಬಂದ ಕಾರ್ಮಿಕರಿಗೆ ನಾಳೆ ಕೆಲಸ ಮಾಡುತ್ತೇವೆ ಎಂಬ ಭರವಸೆಯೇ ಇರುವುದಿಲ್ಲ.

ಕೈಗಾರಿಕಾ ವ್ಯಾಜ್ಯ ಕಾಯ್ದೆ ೧೯೪೭ರ ಅನ್ವಯ ಕಾರ್ಮಿಕರಿಗೆ ಉದ್ಯೋಗ ನೇಮಕಾತಿ ಪತ್ರ ನೀಡಬೇಕು. ೨೪೦ ದಿನ ಕೆಲಸ ಮಾಡಿರುವ ಕಾರ್ಮಿಕರನ್ನು ಲಿಖಿತ ಕಾರಣ ನೀಡದೆ ಕೆಲಸದಿಂದ ತೆಗೆಯುವಂತಿಲ್ಲ, ಕೆಲಸದ ಸ್ಥಳದಲ್ಲಿ ಕುಂದುಕೊರತೆಗಳ ಸಮಿತಿ, ಕ್ಯಾಂಟೀನ್ ಸಮಿತಿ, ಲೈಂಗಿಕ ಕಿರುಕುಳ ವಿರೋಧಿ ಸಮಿತಿಗಳನ್ನು ರಚಿಸಬೇಕು, ಕಾರ್ಖಾನೆಯನ್ನು ಮುಚ್ಚುವ ಸಂದರ್ಭದಲ್ಲಿ, ಸಾಮೂಹಿಕ ರಾಜೀನಾಮೆ ಪಡೆದ ಸಂದರ್ಭದಲ್ಲಿ ಕಾರ್ಮಿಕರಿಗೆ ಪರಿಹಾರ ನೀಡಬೇಕು. ಆದರೆ ವಾಸ್ತವದಲ್ಲಿ ನೇಮಕಾತಿ ಪತ್ರವನ್ನು ಸಹ ಕೊಡುವುದಿಲ್ಲ. ಕಾರಣವನ್ನೇ ನೀಡದೆ ಕೆಲಸದಿಂದ ತೆಗೆದುಹಾಕುವುದು ಮಾಮೂಲಿನ ಸಂಗತಿ. ಹೆಸರಿಗೆ, ತೋರಿಕೆಗೆ ಮಾತ್ರ ಸಮಿತಿಗಳು ಇವೆ ಮತ್ತು ಕಾರ್ಮಿಕರಿಗೆ ಸುಳಿವೇ ನೀಡದೆ ಕಾರ್ಖಾನೆಗಳನ್ನು ಮುಚ್ಚುವುದು ಸಹ ಸರ್ವೇಸಾಮಾನ್ಯ. ರಾಜೀನಾಮೆ ನೀಡಲು ಪರೋಕ್ಷವಾಗಿ ಪ್ರೇರೇಪಿಸುತ್ತಾರೆ. ಪರಿಹಾರವಂತೂ ದೂರದ ಮಾತು.

ಕನಿಷ್ಠ ಕೂಲಿ ಕಾಯ್ದೆಯ ಪ್ರಕಾರ ಸರ್ಕಾರ ಕಾಲಕಾಲಕ್ಕೆ ನಿಗದಿಪಡಿಸುವ ಕನಿಷ್ಠ ವೇತನವನ್ನು ನೀಡಲೇಬೇಕು. ತಪ್ಪಿದಲ್ಲಿ ಕ್ರಿಮಿನಲ್ ಕೇಸ್ ದಾಖಲಿಸಬಹುದು ಮತ್ತು ೧೦ ಪಟ್ಟು ದಂಡ ಹಾಕಬಹುದು. ವಾಸ್ತವದಲ್ಲಿ ಇಂದಿಗೂ ಹಲವಾರು ಕಾರ್ಖಾನೆಗಳು ಕನಿಷ್ಠ ವೇತನವನ್ನೇ ನೀಡುತ್ತಿಲ್ಲ. ೨೦೦೯ರಲ್ಲಿ ಸರ್ಕಾರವು ಕನಿಷ್ಠ ವೇತನವನ್ನು ಪರಿಷ್ಕರಿಸಿ ಹೊರಡಿಸಿದ ಆದೇಶವನ್ನು, ೨೦೧೦ರಲ್ಲಿ ಪುನಃ ಸರ್ಕಾರವೇ ಬೆರಳಚ್ಚು ತಪ್ಪು ನೆಪಹೇಳಿ ಹಿಂದಕ್ಕೆ ಪಡೆದು, ಸುಮಾರು ೧೩೦ ರೂ.ಗಳನ್ನು ಕಡಿತಗೊಳಿಸಿ ಹೊಸ ಆದೇಶವನ್ನು ಹೊರಡಿಸಿತು! ಇದರ ಹಿಂದೆ ಕೆಲಸ ಮಾಡಿದ್ದು ಆಡಳಿತ ವರ್ಗದ ಪ್ರಾಬಲ್ಯ. ಬೋನಸ್ ಪಾವತಿ ಕಾಯ್ದೆ ೧೯೬೧ರ ಪ್ರಕಾರ ವಾರ್ಷಿಕ ವೇತನದಲ್ಲಿ ಕನಿಷ್ಠ ೮.೩೩% ಗರಿಷ್ಠ ೨೦%ರಷ್ಟು ಬೋನಸ್ ಪಾವತಿ ಮಾಡಬೇಕು. ಪ್ರತಿ ವರ್ಷ ನವೆಂಬರ್ ಒಳಗೆ ಬೋನಸ್‌ಅನ್ನು ಪಾವತಿಸಬೇಕು ಮತ್ತು ೩೦ ದಿನ ಕೆಲಸ ಮಾಡಿಬಿಟ್ಟ ಕಾರ್ಮಿಕರಿಗೂ ಬೋನಸ್ ಪಾವತಿಸಬೇಕು. ವಾಸ್ತವದಲ್ಲಿ ಕೆಲಸ ಬಿಟ್ಟ ಕಾರ್ಮಿಕರಿಗೆ ಬೋನಸ್ ನೀಡದೆ ವಂಚಿಸಲಾಗುತ್ತಿದೆ. ಕಾರ್ಮಿಕರು ತೆಗೆದುಕೊಳ್ಳದೆ ಬಾಕಿ ಉಳಿದ ಬೋನಸ್ ಹಣವನ್ನು ಕಾರ್ಮಿಕ ಕಲ್ಯಾಣ ಮಂಡಳಿಗೆ ಪಾವತಿಸಬೇಕು. ಹೀಗೆ ಪಾವತಿಸಿರುವ ಉದಾಹರಣೆಯೇ ಇಲ್ಲ ಎನ್ನಬಹುದು.

ಕಾರ್ಖಾನೆ ಕಾಯ್ದೆಗಳು ೧೯೪೮ರ ಪ್ರಕಾರ ಆರೋಗ್ಯಕ್ಕೆ ಸಂಬಂಧಪಟ್ಟಂತೆ ಕೆಲಸದ ಸ್ಥಳದಲ್ಲಿ ಸ್ವಚ್ಛತೆ, ತ್ಯಾಜ್ಯವಸ್ತುಗಳ ವಿಲೇವಾರಿ, ಸ್ವಾಭಾವಿಕ ಗಾಳಿ, ಬೆಳಕು, ಕುಡಿಯುವ ನೀರು, ಸೂಕ್ತ ಸ್ಥಳಾವಕಾಶ ಕಾರ್ಮಿಕ ಕಲ್ಯಾಣಕ್ಕೆ ಸಂಬಂಧಪಟ್ಟಂತೆ ಸೂಕ್ತ ಹಾಗೂ ಪ್ರತ್ಯೇಕ ಶೌಚಾಲಯಗಳು, ವಿಶ್ರಾಂತಿ ಕೊಠಡಿಗಳು, ಪ್ರಥಮ ಚಿಕಿತ್ಸೆ ವ್ಯವಸ್ಥೆ, ವೈದ್ಯರು, ನರ್ಸುಗಳ ವ್ಯವಸ್ಥೆ, ಕಲ್ಯಾಣಾಧಿಕಾರಿಗಳು (೫೦೦ಕ್ಕಿಂತ ಹೆಚ್ಚಿನ ಕಾರ್ಮಿಕರು ಇದ್ದರೆ), ೮ ಗಂಟೆಯ ಕೆಲಸದ ಅವಧಿ, ೫ ಗಂಟೆಗೊಮ್ಮೆ ವಿರಾಮ, ದಿನಕ್ಕೆ ೧೦ ಗಂಟೆಗಿಂತ ಹೆಚ್ಚು ಕೆಲಸ ಮಾಡಿಸುವಂತಿಲ್ಲ, ಒಬ್ಬ ವ್ಯಕ್ತಿ ೨ ಪಾಳಿಯಲ್ಲಿ ಕೆಲಸ ಮಾಡುವಂತಿಲ್ಲ, ಹೆಚ್ಚುವರಿ ಕೆಲಸಕ್ಕೆ ದುಪ್ಪಟ್ಟು ವೇತನ, ತಿಂಗಳಿಗೆ ೨೫ ಗಂಟೆ ಮಾತ್ರವೇ ಹೆಚ್ಚುವರಿ ಕೆಲಸ, ವಾರದ ರಜೆ, ಬದಲಿ ರಜೆ, ಗರ್ಭಿಣಿ ಹೆಣ್ಣುಮಕ್ಕಳಿಗೆ ಕೆಲಸದಲ್ಲಿ ರಿಯಾಯಿತಿ. ತೊಟ್ಟಿಲು, ಆಟಿಕೆಗಳು, ತರಬೇತು ಪಡೆದ ಮೇಲ್ವಿಚಾರಕರನ್ನು ಹೊಂದಿದ ಸ್ವಚ್ಛ ಪರಿಸರದ ಬಾಲವಾಡಿಗಳನ್ನು ಒದಗಿಸಬೇಕು.



ವಾಸ್ತವದಲ್ಲಿ ಈ ಎಲ್ಲ ಸೌಲಭ್ಯಗಳು ಕಾರ್ಮಿಕರಿಗೆ ದೂರದ ಕನಸಾಗಿದೆ. ಮಾಮೂಲಿ ಕೆಲಸಗಾರರಿಗೂ, ಗರ್ಭಿಣಿ, ಬಾಣಂತಿಯರಿಗೂ ಕೆಲಸದಲ್ಲಿ ಯಾವುದೇ ವ್ಯತ್ಯಾಸವಿಲ್ಲ. ಬಾಲವಾಡಿಯ ವ್ಯವಸ್ಥೆಯ ಬಗ್ಗೆ ಕೇಳುವಂತೆಯೇ ಇಲ್ಲ. ಮಕ್ಕಳಿರುವಂತಹ ಕಾರ್ಮಿಕರನ್ನು ಕೆಲಸಕ್ಕೆ ತೆಗೆದುಕೊಳ್ಳಲು ಹಿಂದೇಟು

*(೨೨ನೇ ಪುಟಕ್ಕೆ ಮುಂದುವರೆಯುವುದು)*



ಮನಬಿಲ್ಲಿನಂತೆ ವರ್ಣವೈವಿಧ್ಯದಿಂದ ತುಂಬಿದ ಕಾವ್ಯಲೋಕವನ್ನು ಸೃಷ್ಟಿಸಿ ಮಲಯಾಳ ಸಾಹಿತ್ಯದ ತಾರೆಯಾಗಿ ಮಿನುಗಿದ ಮಹಾಕವಿ ಒ. ಎನ್. ವಿ. ಕುರುಪ್ ಇನ್ನಿಲ್ಲ. ಕಾವ್ಯಪ್ರಿಯರ ಬುದ್ಧಿ–ಭಾವಗಳೆರಡರ ಮೇಲೂ ಸಮತೂಕದ ಪರಿಣಾಮ ಬೀರಿದ ಕಾವ್ಯರಚನೆಗಳು ಅವರದ್ದು. ಗಂಭೀರ ವಸ್ತುಗಳನ್ನಾಯ್ದುಕೊಂಡು ಚಿಂತನಾರ್ಹ ಕಾವ್ಯಕೃತಿಗಳನ್ನು ಮಾತ್ರವಲ್ಲದೆ ಜನಸಾಮಾನ್ಯರ ಮನಸ್ಸುಗಳನ್ನು ಭಾವನಾತ್ಮಕವಾಗಿಯೂ ಸೆಳೆದ ಚಲನಚಿತ್ರಗೀತೆಗಳನ್ನೂ ರಚಿಸಿದ್ದಾರೆ. ಸಹಜವಾಗಿಯೇ ತುಸು ತಡವಾಗಿಯಾದರೂ ಜ್ಞಾನಪೀಠವನ್ನೇರುವ ಅವಕಾಶ ಅವರದ್ದಾಯಿತು.



ಒ. ಎನ್. ವಿ. ಕುರುಪ್ ೧೯೩೧ರ ಮೇ ೨೭ರಂದು ಕೊಲ್ಲಂ ಜಿಲ್ಲೆಯ ಚವರ ಎಂಬಲ್ಲಿ ಒಟ್ಟಪ್ಪಾಕ್ಕಲ್ ಕುಟುಂಬದ ಒ. ಎನ್. ಕೃಷ್ಣಕುರುಪ್ ಮತ್ತು ಲಕ್ಷ್ಮಿ ಕುಟ್ಟಿಯಮ್ಮರ ಮಗನಾಗಿ ಹುಟ್ಟಿದರು. ಅವರ ಪೂರ್ತಿ ಹೆಸರು ಒ. ಎನ್. ವೇಲು ಕುರುಪ್. ಪ್ರೌಢಶಾಲಾ ವಿದ್ಯಾಭ್ಯಾಸದ ನಂತರ ತಿರುವನಂತಪುರದ ಮಹಾರಾಜಾಸ್ ಕಾಲೇಜಿನಲ್ಲಿ ಇಂಟರ್‌ಮೀಡಿಯೆಟ್, ಕೊಲ್ಲಂನ ಶ್ರೀ ನಾರಾಯಣ ಕಾಲೇಜಿನಲ್ಲಿ ಅರ್ಥಶಾಸ್ತ್ರದಲ್ಲಿ ಬಿ.ಎ. ಮತ್ತು ತಿರುಗಿ ಮಹಾರಾಜಾಸ್ ಕಾಲೇಜಿನಲ್ಲಿ (ಯೂನಿವರ್ಸಿಟಿ ಕಾಲೇಜು) ಮಲಯಾಳ ಸಾಹಿತ್ಯದಲ್ಲಿ ಎಂ.ಎ. ಕಲಿತು ಸ್ನಾತಕೋತ್ತರ ಪದವೀಧರರಾದರು. ೧೯೫೭ರಲ್ಲಿ ಎರ್ನಾಕುಳಂ ಮಹಾರಾಜಾಸ್

# ಮರೆಯಲಾಗದ ಮಹಾಕವಿ ಒ.ಎನ್.ವಿ. ಕುರುಪ್

ಕಾಲೇಜಿನಲ್ಲಿ ಉಪನ್ಯಾಸಕ ವೃತ್ತಿಯನ್ನು ಕೈಗೊಂಡರು. ೧೯೫೮ರಿಂದ ತಿರುವಂತಪುರದ ಯೂನಿವರ್ಸಿಟಿ ಕಾಲೇಜು, ತಲಶ್ಶೇರಿಯ ಬ್ರಣ್ಣನ್ ಕಾಲೇಜು, ತಿರುವನಂತಪುರ ವಿಮೆನ್ಸ್ ಕಾಲೇಜು, ಕಲ್ಲಿಕೋಟೆಯ ಆರ್ಟ್ಸ್ ಕಾಲೇಜುಗಳಲ್ಲಿ ಒಟ್ಟು ೨೫ ವರ್ಷಗಳ ಕಾಲ ಸೇವೆ ಸಲ್ಲಿಸಿದರು. ೧೯೮೬ ಮೇ ೩೧ಕ್ಕೆ ಮಲಯಾಳಂ ವಿಭಾಗ ಮುಖ್ಯಸ್ಥರಾಗಿ ವೃತ್ತಿಜೀವನದಿಂದ ನಿವೃತ್ತಿ ಹೊಂದಿದರು.

ಒ.ಎನ್.ವಿ.ಯವರು ತಮ್ಮ ೧೫ನೇ ವಯಸ್ಸಿನಲ್ಲಿ 'ಮುನ್ನೋಟ್ಟ್' (ಮುನ್ನಡೆ) ಎಂಬ ಕವಿತೆಯ ಮೂಲಕ ಸಾಹಿತ್ಯ ಕ್ಷೇತ್ರಕ್ಕೆ ಕಾಲಿಟ್ಟರು. ಭೂಮಿಕ್ಕೊರು ಚರಮಗೀತಂ (ಭೂಮಿಗೊಂದು ಚರಮಗೀತೆ), ಉಜ್ಜಯಿನಿ, ಉಪ್ಪ್, ಭೈರವಂಡೆ ತುಡಿ (ಭೈರವನ ದುಡಿ) ಮೊದಲಾದ ಹಲವು ಕಾವ್ಯಕೃತಿಗಳ ಮೂಲಕ ಆರು ದಶಕಗಳಿಗೂ ಮಿಕ್ಕಿ ಸಾಹಿತ್ಯ ಸೇವೆ ಮಾಡಿದರು. ೧೮ನೇ ವಯಸ್ಸಿನಲ್ಲಿ ಕ್ರಾಂತಿಕಾರಿ ಕನಸುಗಳನ್ನು ಕಾಣುತ್ತಿದ್ದ ಒ.ಎನ್.ವಿ. ಬರೆದ 'ಕತ್ತಿ ಮತ್ತು ಕೋಗಿಲೆ' ಎಂಬ ಕವಿತೆಗಾಗಿ ಕೊಲ್ಲಂನಲ್ಲಿ ನಡೆದ ಪ್ರಗತಿಪರ ಸಾಹಿತ್ಯ ಸಮ್ಮೇಳನದಲ್ಲಿ ಅವರನ್ನು ಪುರಸ್ಕರಿಸಲಾಯಿತು. ಕೊಲ್ಲಂನಲ್ಲಿ ಎಸ್. ಎನ್. ಕಾಲೇಜಿನಲ್ಲಿ ಓದುತ್ತಿದ್ದಾಗ ವಿದ್ಯಾರ್ಥಿ ರಂಗದ ರಾಜಕೀಯದಾಚೆಗೆ ಕೊಲ್ಲಂ ಹಾಗೂ ಸುತ್ತುಮುತ್ತಲ ಪಟ್ಟಣಗಳಲ್ಲಿ ನಡೆಯುತ್ತಿದ್ದ ಟ್ರೇಡ್ ಯೂನಿಯನ್ ಸಭೆಗಳಲ್ಲಿ ಭಾಷಣ ಮಾಡಲು ಅವರು ಹೋಗುತ್ತಿದ್ದರು. ಓದು ಮುಗಿಸಿದ ನಂತರ ರಾಜಕೀಯದಲ್ಲಿ ಬಹಿರಂಗವಾಗಿ ಭಾಗವಹಿಸುವುದನ್ನು ನಿಲ್ಲಿಸಿ ಕಾವ್ಯರಚನೆ ಮತ್ತು ಅಧ್ಯಾಪನ ಲೋಕದತ್ತ ತಿರುಗಿದರು. ಆದರೆ ಮುಂಚೆ ೧೯೭೭ರಲ್ಲಿ ತಿರುವನಂತಪುರ ಲೋಕಸಭಾಕ್ಷೇತ್ರದಿಂದ ಎಡರಂಗದಿಂದ ಸ್ವತಂತ್ರ ಅಭ್ಯರ್ಥಿಯಾಗಿ ಸ್ಪರ್ಧಿಸಲು ಸ್ನೇಹಿತರಿಂದ ಒತ್ತಾಯ ಬಂದಾಗ ಅವರು ಒಪ್ಪಿದರು. ಚುನಾವಣೆಯಲ್ಲಿ ಸೋತರು. ಆದರೂ ಅದು ಮಲಯಾಳ ಕಾವ್ಯದ ಗೆಲುವಾಗಿ ಪರಿಣಮಿಸಿತು.

ಡಾ॥ ಪಾರ್ವತಿ ಜಿ. ಐತಾಳ್

ಜನಪದ ಶೈಲಿಯಲ್ಲಿ ಶಬ್ದಗಳ ಅರ್ಥಗಳನ್ನು ಹುಡುಕುವ ಆವಶ್ಯಕತೆ ಬಾರದಂತಹ ಸುಂದರ ಗ್ರಾಮ್ಯ ಭಾಷೆಯಲ್ಲಿ ರಂಗಗೀತೆಗಳನ್ನು ರಚಿಸಿದ ಒ.ಎನ್.ವಿ. ಹಾಡುಗಳನ್ನು ಕವಿತೆಯ ಹತ್ತಿರ ತಂದು ಅವಕ್ಕೆ ಚಲನಚಿತ್ರ ಗೀತೆಯ ರೂಪ ನೀಡಿದರು. ೧೯೪೮ರಲ್ಲಿ ಅಷ್ಟಮುಡಿ ಸರೋವರದಲ್ಲಿ ಒಂದು ದೋಣಿ ಮನೆಯಲ್ಲಿ ಕುಳಿತು ಅವರು ಬರೆದ 'ಪೊನ್ನರಿವಾಳಂ ಬಿಳಿಯಿಲ್ ಕಣ್ಣೆರಿಯುನ್ನೋಳೇ' (ಹೊನ್ನಕತ್ತಿಯ ಚಂದ್ರನ ನೋಟ ಬೀರುವವಳೇ) ಒ.ಎನ್.ವಿ.ಯವರ ಮೊದಲ ರಂಗಗೀತೆ. ಇದನ್ನು ಮುಂದೆ ೧೯೫೨ರಲ್ಲಿ ತೋಪ್ಪಿಲ್ ಭಾಸಿ ಅವರ 'ನೀಂಗಳೆನ್ನೆ ಕಮ್ಯೂನಿಸ್ಟಾಕ್ಕಿ' ಅನ್ನುವ ನಾಟಕದಲ್ಲಿ ಅವರ ಹಾಡುಗಳನ್ನು ಬಳಸಲಾಯಿತು. ಅವರು ಬರೆದ ರಂಗಗೀತೆಗಳೆಲ್ಲವೂ ಯಾರೋ ಪಕ್ಕದಲ್ಲಿ ಕುಳಿತು ಸಂಗೀತದಂತೆ ಇಂಪಾಗಿ ಮಾತನಾಡುತ್ತಿರುವ ಅನುಭವ ನೀಡುತ್ತವೆ. ಆದರೆ ಸಿನಿಮಾ ಹಾಡುಗಳಲ್ಲಿ ಅವರೊಳಗಿನ ಕವಿ ಜಾಗ್ರತನಾಗುತ್ತಿದ್ದ; ಸಭ್ಯತೆಯ ಗಡಿ ಮೀರದೆ ಕಂಪಿಸುವ ಕಪೋಲಗಳನ್ನು ಚಿವುಟಿ ನೋಯಿಸದೆ, ನೇವರಿಸಿ ಮುದ್ದಿಸದೆ ನೋಡುತ್ತ ನಿಲ್ಲುತ್ತಿದ್ದ ಹಾಡುಗಳನ್ನು ರಚಿಸುತ್ತಿದ್ದರು.

೧೯೮೨ರಲ್ಲಿ ಅವರಿಗೆ ಕೇರಳದ ಪ್ರತಿಷ್ಠಿತ ವಯಲಾರ್ ಪ್ರಶಸ್ತಿ, ೧೯೯೮ರಲ್ಲಿ ಪದ್ಮಶ್ರೀ, ೨೦೦೭ರಲ್ಲಿ ಜ್ಞಾನಪೀಠ ಪ್ರಶಸ್ತಿ, ೨೦೧೧ರಲ್ಲಿ,

ಮಲಯಾಳದ ಅತ್ಯುನ್ನತ ಎಳುತ್ತಚ್ಛನ್ ಪುರಸ್ಕಾರ ಮತ್ತು ೨೦೧೧ರಲ್ಲಿ ಪದ್ಮವಿಭೂಷಣ ಪ್ರಶಸ್ತಿಗಳು ಲಭಿಸಿದವು. ಅಲ್ಲದೆ, ಅವರು ರಚಿಸಿದ ಸಿನಿಮಾ ಗೀತೆಗಳಿಗೆ ರಾಜ್ಯ ಮತ್ತು ರಾಷ್ಟ್ರಮಟ್ಟಗಳಲ್ಲಿ ಹಲವು ಪ್ರಶಸ್ತಿಗಳನ್ನೂ ಪಡೆದಿದ್ದರು. ಕೊನೆಗೆ ೨೦೧೫ರ ನವೆಂಬರ್‌ನಲ್ಲಿ ರಷ್ಯಾ ದೇಶವು ಅಂತರರಾಷ್ಟ್ರೀಯ ಮಟ್ಟದಲ್ಲಿ ನೀಡುವ ಪುಷ್ಕಿನ್ ಪದಕವೂ ಅವರನ್ನು ಅರಸಿಕೊಂಡು ಬಂತು.

ಮಹಾರಾಜಾಸ್ ಕಾಲೇಜಿನಲ್ಲಿ ಉಪನ್ಯಾಸಕರಾಗಿದ್ದಾಗ ಒ.ಎನ್.ವಿ. ಯವರು ತಮ್ಮ ಶಿಷ್ಯೆಯಾಗಿದ್ದ ಸರೋಜಿನಿಯನ್ನು ಪ್ರೀತಿಸಿ ಮದುವೆಯಾದರು. ಅವರದ್ದು ಸುಖದಾಂಪತ್ಯ. ಅವರ ಮಕ್ಕಳು ರಾಜೀವ್ ಮತ್ತು ಡಾ॥ ಮಾಯಾದೇವಿ. ದೇವಿಕಾ ಮತ್ತು ಡಾ॥ ವಿಜಯ್ ಕೃಷ್ಣನ್ ಮೊಮ್ಮಕ್ಕಳು.

೧೯೪೯ರಲ್ಲೇ ಅವರ 'ಪೊರುದುನ್ನ ಸೌಂದರ್ಯಂ (ಹೋರಾಡುವ ಸೌಂದರ್ಯ) ಎಂಬ ಮೊದಲ ಕವನ ಸಂಕಲನ ಪ್ರಕಟವಾಯಿತು. ಅವರ ಕಾವ್ಯಪ್ರತಿಭೆಯನ್ನು ಗುರುತಿಸಿದ ಕೆ.ಪಿ.ಎ.ಸಿ.ಯ ಮುಂದಾಳು ತೋಪ್ಪಿಲ್ ಭಾಸಿಯವರು ಮತ್ತು ಕಾಂಬಿಶ್ಶೇರಿ ಕರುಣಾಕರನ್ ಅವರು ತಮ್ಮ ನಾಟಕ 'ನಿಙ್ಙಳೆನ್ನೆ ಕಮ್ಯೂನಿಸ್ಟಾಕ್ಕಿ' (ನೀವು ನನ್ನನ್ನು ಕಮ್ಯೂನಿಸ್ಟಾಗಿ ಮಾಡಿದಿರಿ)ದಲ್ಲಿ ಒ.ಎನ್.ವಿ. ಕೈಯಿಂದ ೨೫ ರಂಗಗೀತೆಗಳನ್ನು ಬರೆಯಿಸಿ ಸೇರಿಸಿದರು. ಮಣ್ಣಿನ ವಾಸನೆ ಮತ್ತು ಬಿಸುಪುಳ್ಳ ಕವಿತೆಗಳಾಗಿದ್ದವು ಅವು. ಅದು ಕೇರಳದ ಸಾಂಸ್ಕೃತಿಕ ರಂಗವು ಕ್ರಾಂತಿಬೀಜಗಳನ್ನು ಬಿತ್ತುತ್ತಿದ್ದ ಕಾಲ.

ಮಲಯಾಳ ತಿಳಿಯದ ಸಲೀಲ್ ಚೌಧುರಿ, ಬಾಂಬೆ ರವಿ, ಇಳಯರಾಜ ಮೊದಲಾದವರಿಗೋಸ್ಕರ ಅವರ ರಾಗಸಂಯೋಜನೆಗೆ ಹೊಂದಿಕೊಳ್ಳುವಂತಹ ಹಾಡುಗಳನ್ನು ಒ.ಎನ್.ವಿ. ಬರೆದುಕೊಟ್ಟರು. ಮಲಯಾಳದ ಮಣ್ಣಿನ ನೆನಪನ್ನು ಮನಸ್ಸಿನಲ್ಲಿ ಮೆಲುವಾಗಿ ಅರಳಿಸುವ ಹಾಡುಗಳಾಗಿದ್ದವು ಅವು. ಹೆಚ್ಚಿನ ಚಿತ್ರಗಳಿಗೂ ಗೀತರಚನೆ ಮಾಡಿದವರು ಒ.ಎನ್.ವಿ., ಜೇಸುದಾಸ್, ಎಸ್. ಜಾನಕಿ, ಪಿ. ಸುಶೀಲ, ಚಿತ್ರಾ ಮೊದಲಾದ ಪ್ರಸಿದ್ಧ ಗಾಯಕರು ಹಾಡಿದ ನೂರಾರು ಹಾಡುಗಳ ಹಿಂದೆ ಒ.ಎನ್.ವಿ. ಇದ್ದಾರೆ.

ಫೆಬ್ರವರಿ ೧೩, ೨೦೧೬ರಂದು ಒ.ಎನ್.ವಿ. ಕುರುಪ್ ನಮ್ಮಿಂದ ಮರೆಯಾದರು. ಜಿ. ಶಂಕರ ಕುರುಪ್ ಅವರಂತೆ, ಎಸ್. ಕೆ. ಪೊಟ್ಟೆಕ್ಕಾಡ್ ಅವರಂತೆ, ತಕಳಿ ಶಿವಶಂಕರ ಪಿಳ್ಳೆಯವರಂತೆ, ವೈಕ್ಕಂ ಮಹಮ್ಮದ್ ಬಶೀರರಂತೆ, ಎಂ. ಟಿ. ವಾಸುದೇವನ್ ನಾಯರ್ ಅವರಂತೆ ಮಲಯಾಳ ಸಾಹಿತ್ಯ ಎಂದಿಗೂ ಮರೆಯಲಾಗದ ಶ್ರೇಷ್ಠ ಕೊಡುಗೆಗಳನ್ನು ಕೊಟ್ಟು ಅಮರರಾಗಿರುವ ಒ.ಎನ್.ವಿ. ಕುರುಪ್ ಅವರಿಗೆ ನಮನಗಳು.

**ಡಾ॥ ಪಾರ್ವತಿ ಜಿ. ಐತಾಳ್**
'ಸುರಗಂಗಾ', ಬಸ್ರೂರು ಕ್ರಾಸ್ ರಸ್ತೆ
ಕುಂದಾಪುರ – ೫೭೬ ೨೦೧

---

*(೨೦ಪುಟದಿಂದ ಮುಂದುವರೆದಿದೆ)*

ಹಾಕುತ್ತಾರೆ. ಹೆಸರಿಗೆ ಮಾತ್ರ ಇರುವ ಬಾಲವಾಡಿಗಳಲ್ಲಿ ೧೦ ಮಕ್ಕಳಿಗಿಂತ ಹೆಚ್ಚು ಮಕ್ಕಳನ್ನು ಸೇರಿಸಿ ಕೊಳ್ಳುವುದಿಲ್ಲ. ಇ.ಎಸ್.ಐ. ಕಾಯ್ದೆ ೧೯೫೨, ಕೆಲಸಕ್ಕೆ ಸೇರಿದ ದಿನದಿಂದಲೇ ಅನ್ವಯವಾಗುತ್ತದೆ, ಕಾರ್ಮಿಕರ ವೇತನದ ೧.೭೫% ಹಾಗೂ ಮಾಲೀಕರ ೪.೭೫% ವಂತಿಗೆಯನ್ನು ಪಾವತಿಸ ಬೇಕು. ಈ ಕಾಯ್ದೆ ಅನ್ವಯ ಕಾರ್ಮಿಕರ ಆರೋಗ್ಯದ ಜವಾಬ್ದಾರಿ, ಕಾರ್ಮಿಕರ ಸುರಕ್ಷತೆಯ ಜವಾಬ್ದಾರಿ, ಕಾರ್ಮಿಕರಿಗೆ ನಷ್ಟ ಪರಿಹಾರದ ಜವಾಬ್ದಾರಿ, ಮಹಿಳಾ ಕಾರ್ಮಿಕರಿಗೆ ಹೆರಿಗೆ ಭತ್ಯೆ ಸೌಲಭ್ಯವನ್ನು ಮಾಲೀಕರು ಕಡ್ಡಾಯವಾಗಿ ನೀಡಬೇಕು. ವಾಸ್ತವದಲ್ಲಿ ಇ.ಎಸ್.ಐ. ಸೌಲಭ್ಯಗಳ ಕುರಿತು ಕಾರ್ಮಿಕರಿಗೆ ಅರಿವು ಮೂಡಿಸುವ ಕೆಲಸವನ್ನು ಇಲಾಖೆಯು ಮಾಡುವುದೇ ಇಲ್ಲ.

**ದುಡಿಮೆಯನ್ನು ಹಿಂಡಿ ತೆಗೆವ ಪ್ರೊಡಕ್ಷನ್ ಟಾರ್ಗೆಟ್**

೮ ಗಂಟೆಗಳ ಕಾಲ ಮಾಡಲು ಸಾಧ್ಯವಾಗ ದಂತಹ ಪ್ರೊಡಕ್ಷನ್ ನಿಗದಿಪಡಿಸಿ ಮುಗಿಸಲೇ ಬೇಕೆಂದು ಸಂಜೆ ೫.೩೦ರ ನಂತರವೂ ಕೆಲಸ ಮಾಡುವಂತೆ ಒತ್ತಡ ಹಾಕುವುದು ಎಲ್ಲಾ ಕಂಪನಿಗಳಲ್ಲೂ ಜಾರಿಯಲ್ಲಿದೆ. ೩೦ರಿಂದ ೩೫ ಕಾರ್ಮಿಕರ ಒಂದು ಗುಂಪು ಸಾಮಾನ್ಯ ಷರ್ಟ್ ಒಂದನ್ನು ೫೦ರಿಂದ ೬೦ ಸೆಕೆಂಡ್‌ಗಳಲ್ಲಿ ಪೂರ್ಣಗೊಳಿಸುತ್ತಾರೆ ಎಂಬುದು ಕೆಲಸದ ಒತ್ತಡವನ್ನು ತಿಳಿಸಿಕೊಡುತ್ತದೆ. ಬಿಡಿಗಾಸಿನ ಸಂಬಳಕ್ಕೆ ಮಹಿಳೆಯರನ್ನು ಈ ರೀತಿ ಹಿಂಡಿ ಪ್ರೊಡಕ್ಷನ್ ತೆಗೆಸುವ ಮ್ಯಾನೇಜರ್‌ಗಳಿಗೆ ತಿಂಗಳಿಗೆ ಲಕ್ಷಗಟ್ಟಲೆ ಸಂಬಳವಲ್ಲದೆ, 'ಇನ್ಸೆಂಟಿವ್' ಕೂಡ ಸಿಗುತ್ತದೆ. ಕಾರ್ಮಿಕರಿಗೆ ದುಡಿತದ ಜೊತೆಗೆ ಸಿಗುವ ಬೋನಸ್ ಎಂದರೆ, ಕಾನೂನುಬದ್ಧ ರಜೆಯನ್ನು ನಿರಾಕರಿಸುವುದು, ನಾಯಿ, ಕತ್ತೆ, ಗೂಬೆ ಎಂದು ಕಾರ್ಮಿಕರನ್ನು ಹಿಯಾಳಿಸುವುದು, ಮುಖದ ಮೇಲೆ ಬಟ್ಟೆ ಎಸೆಯುವುದು, ಕೆಲಸ ಕೊಡದೆ ಎಲ್ಲರ ಮುಂದೆ ನಿಲ್ಲಿಸಿ ಅವಮಾನಿ ಸುವುದು, ರಜೆ ಹಾಕಿ ಬಂದ ಕಾರ್ಮಿಕರನ್ನು ಒಳಗೆ ಬಿಡದೆ, ಕಾರ್ಖಾನೆಯ ಗೇಟ್ ಮುಂದೆ ಗಂಟೆಗಟ್ಟಲೆ ಕಾಯಿಸುವುದು, ಶೌಚಾಲಯಕ್ಕೆ ಹೋಗುವುದನ್ನು ನಿಯಂತ್ರಿಸುವುದು, ಲೈಂಗಿಕ ಕಿರುಕುಳ ನೀಡುವುದು ಇವೆಲ್ಲದರಿಂದಾಗಿ ಈ ಮಹಿಳೆಯರು ಅನುಭವಿಸುವ ಮಾನಸಿಕ ಮತ್ತು ದೈಹಿಕ ಒತ್ತಡವನ್ನು ಊಹಿಸಲಾಗದು.

**ಬಡ ಮಹಿಳೆಯರ ಇಡುಗಂಟಿಗೆ ಕನ್ನ ಹಾಕಲು ಹೊರಟ ಸರ್ಕಾರ**

ಬಡತನದಲ್ಲಿ ದಾರುಣವಾದ ಬದುಕನ್ನು ಸಾಗಿಸುತ್ತಿರುವ ಕಾರ್ಮಿಕರಿಗೆ ಕೇಂದ್ರ ಸರ್ಕಾರವು ಇತ್ತೀಚೆಗೆ ಪಿಎಫ್ ಕಾಯ್ದೆಗೆ ತಿದ್ದುಪಡಿ ತರುವ ಮೂಲಕ ಮಾರಣಾಂತಿಕ ಪೆಟ್ಟು ನೀಡಲು ಹೊರಟಿತ್ತು. ಕೇವಲ ಸಂಬಳದಿಂದ ತಮ್ಮ ಜೀವನ ನಡೆಸಲು ಸಾಧ್ಯವಾಗದ ಕಾರ್ಮಿಕರು ಮಕ್ಕಳ ಓದು, ಮನೆ ಭೋಗ್ಯ, ಮಕ್ಕಳ ಮದುವೆ, ಕಾಯಿಲೆ ಇತ್ಯಾದಿ ಖರ್ಚಿನ ಬಾಬತ್ತಿಗೆ ಅವಲಂಬಿಸುವುದು ಸುಲಭವಾಗಿ ಸಿಗುವ ಪಿಎಫ್ ಹಣವನ್ನೇ. ಪಿಎಫ್ ಹಣ ಅವರ ತುರ್ತಿಗಿರುವ ಆಪದ್ಧನ. ಹಾಗಾಗಿ ತಿದ್ದುಪಡಿ ತಂದಾಗಿನಿಂದ ಕಾರ್ಮಿಕರು ಆತಂಕ ಕ್ಕೀಡಾಗಿದ್ದರು. ಯಂತ್ರ ಗಳಂತೆ ದುಡಿಸಿಕೊಳ್ಳುವುದು ಮತ್ತು ಆಸರೆ ಎಂದು ನಂಬಿದ್ದ ಇಡುಗಂಟನ್ನು ಕಳೆದುಕೊಳ್ಳುವ ಅಭದ್ರತೆಯಿಂದ ಮಡುಗಟ್ಟಿದ್ದ ಆಕ್ರೋಶವು ಪಿಎಫ್ ಸಿಗದು ಎಂಬ ಸುದ್ದಿಯಿಂದಾಗಿ ಒಮ್ಮೆಲೆ ಸ್ಫೋಟಗೊಂಡಿತು. ಸ್ಫೋಟವನ್ನಷ್ಟೇ ಕಂಡು ಅದರ ಹಿಂದಿನ ಬವಣೆಯನ್ನು ಕಾಣದವರಿಗೆ ಇದೊಂದು ಪಿತೂರಿ ಎನ್ನಿಸಿತು.

ಬದುಕುವ ವೇತನ, ಆರೋಗ್ಯಕರ ಕೆಲಸದ ವಾತಾವರಣದಂತಹ ನ್ಯಾಯಯುತ ಬೇಡಿಕೆಗಳಿಗಾಗಿ ಗಾರ್ಮೆಂಟ್ಸ್ ಅಂಡ್ ಟೆಕ್ಸ್‌ಟೈಲ್ ವರ್ಕರ್ಸ್ ಯೂನಿಯನ್ ಹದಿನೈದು ವರ್ಷಗಳಿಗಿಂತಲೂ ಹೆಚ್ಚಿನ ಕಾಲದಿಂದ ಪ್ರಾಮಾಣಿಕವಾಗಿ ದುಡಿಯುತ್ತಿದೆಯಲ್ಲದೆ ಕಾರ್ಮಿಕರಿಗೆ ಅನ್ಯಾಯ ವಾದಾಗಲೆಲ್ಲ ನ್ಯಾಯಕ್ಕಾಗಿ ಹೋರಾಡಿದೆ. ಪಿಎಫ್ ಕುರಿತ ಕೇಂದ್ರ ಸರ್ಕಾರದ ನಿರ್ಧಾರ ತಿಳಿದಕೂಡಲೇ ಆ ಕುರಿತು ವಿಶ್ಲೇಷಣೆ ಮಾಡಿ ವಿರೋಧಿಸುವ ಸಲುವಾಗಿ ಅಹಿಂಸಾತ್ಮಕ, ಪ್ರಜಾಸತ್ತಾತ್ಮಕ ಹೋರಾಟ ನಡೆಸುವ ಸಿದ್ಧತೆ ಗಳನ್ನು ಸಂಘವು ಮಾಡಿಕೊಳ್ಳುತ್ತಿತ್ತು. ಭುಗಿಲೆದ್ದ ದಮನಿತ ಮಹಿಳಾ ಕಾರ್ಮಿಕರ ಆಕ್ರೋಶವು ಹೋರಾಟದ ಸ್ವರೂಪವನ್ನೇ ಬದಲಾಯಿಸಿದೆ. ಜನತೆಯ ಗಮನ ಸೆಳೆದಿದೆ, ಸರ್ಕಾರ ಎಚ್ಚರಗೊಳ್ಳುವಂತೆ ಮಾಡಿದೆ. ಬಹುಮುಖ್ಯವಾಗಿ ಗಾರ್ಮೆಂಟ್ಸ್ ಕಾರ್ಮಿಕರಿಗಾಗಿ ದುಡಿಯುತ್ತಿರುವ ಸಂಘಟನೆಗಳು ಹಾಗೂ ರಾಷ್ಟ್ರಮಟ್ಟದ ಕಾರ್ಮಿಕ ಸಂಘಟನೆಗಳು ಒಗ್ಗೂಡಿ ಹೋರಾಟ ನಡೆಸಲು ಪ್ರೇರೇಪಿಸಿರುವುದು ಭರವಸೆ ನೀಡುವ ಬೆಳವಣಿಗೆಯಾಗಿದೆ. ಬಟ್ಟೆಯನ್ನು ಕತ್ತರಿಸಿ, ಜೋಡಿಸಿ ಉಡುಪಾಗಿಸುವ ಕಾರ್ಮಿಕರ ಬದುಕು ಹರಿದು ಹಂಚಿಹೋಗ ಬಾರದೆಂದರೆ ತೊಡುವ ಉಡುಪಿನಲ್ಲಿ ಹರಿದಾಡುವ ಬಡ ಮಹಿಳೆಯರ ನಿಟ್ಟುಸಿರು ಕೇಳಿಸಿಕೊಳ್ಳಬಲ್ಲವರೆಲ್ಲರೂ ಅವರ ಹೋರಾಟವನ್ನು ಬೆಂಬಲಿಸುವ ಅಗತ್ಯವಿದೆ.

**ದು. ಸರಸ್ವತಿ, ಪ್ರತಿಭಾ**
ಜ್ಞಾನಶಕ್ತಿ ಕ್ಯಾಂಪಸ್, ಅಥಣಿ ರಸ್ತೆ
ತೊರವಿ, ವಿಜಯಪುರ – ೫೮೬ ೧೦೮

# ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಸುಧಾರಣೆ

# ಸಾವಿನೊಂದಿಗೆ ಸರಸ




'ಸಾರ್ವಜನಿಕ ಕ್ಷೇತ್ರದ ಹಲವಾರು ಬ್ಯಾಂಕುಗಳನ್ನು ಸಾಯಿಸಲು ಸರ್ಕಾರ ತೀರ್ಮಾನಿಸಿದೆ' ಹೀಗೆಂದು ಆರೋಪಿಸುತ್ತಿರುವುದು ಕಾರ್ಮಿಕ ಸಂಘದ ಹಸ್ತಪ್ರತಿಯಲ್ಲ ಅಥವಾ ಸರ್ಕಾರದ ರಾಜಕೀಯ ವಿರೋಧಿಗಳಲ್ಲ. ಅದೇ ಪದಗಳಲ್ಲಿ ಈ ಯೋಜನೆಯನ್ನು ಸಾದರ ಪಡಿಸಿ ಶಿಫಾರಸ್ಸು ನೀಡಿದವರು ಕೇಂದ್ರ ಸರ್ಕಾರದ ಪ್ರಸ್ತುತ ಮುಖ್ಯ ಆರ್ಥಿಕ ಸಲಹೆಗಾರರು, ಅಧಿಕಾರ ಗ್ರಹಿಸುವ ಸ್ವಲ್ಪ ಮುಂಚೆ ಈ ರೀತಿ ನುಡಿದದ್ದು.

ಸರ್ಕಾರ ಈ ಮೇಲ್ಕಂಡ ಯೋಜನೆಯನ್ನು ಕಾರ್ಯಗತಗೊಳಸಲು ಸಕ್ರಿಯವಾಗಿರುವುದನ್ನು ಪ್ರಸ್ತುತ ಬಜೆಟ್‌ನಲ್ಲಿ ಗಮನಿಸಬಹುದು. ಇದರ ಉದ್ದೇಶ ಭಾರತದ ಬ್ಯಾಂಕಿಂಗ್ ಕ್ಷೇತ್ರವನ್ನು ಖಾಸಗೀಕರಿಸುವುದು. ಈ ಯೋಜನೆಯ ಗಂಭೀರ ಪರಿಣಾಮದ ಬಗ್ಗೆ ಕಾರ್ಪೊರೇಟ್ ನಿಯಂತ್ರಿತ ಮಾಧ್ಯಮಗಳಲ್ಲಿ ಚರ್ಚೆ ಸಂಪೂರ್ಣವಾಗಿ ನಿಷೇಧಗೊಂಡಿದೆ (ಕೆಲವು ಕಾರ್ಪೊರೇಟ್‌ಗಳು ತಾವೇ ಖಾಸಗಿ ಹಣಕಾಸು ಕ್ಷೇತ್ರದಲ್ಲ ತೊಡಗಿಕೊಂಡಿದ್ದಾರೆ).

ಸರ್ಕಾರದ ಮುಖ್ಯ ಆರ್ಥಿಕ ಸಲಹೆಗಾರರ ಯೋಜನೆಯನ್ನು ಚರ್ಚಿಸುವ ಮುನ್ನ ಕೆಲವು ವಿಷಯಗಳ ಬಗ್ಗೆ ವಿವರಣೆಗಳನ್ನು ನೀಡುವ ಕೆಲವು ಅಗತ್ಯವಿದೆ.

**ಬಂಡವಾಳದ ಕೊರತೆ – ಖಾಸಗೀಕರಣಕ್ಕೆ ನೆವ**

i) ತೃತೀಯ ಬಾಸೆಲ್ ಒಪ್ಪಂದದ ಪ್ರಕಾರ – ಅದು ಜಾಗತಿಕ ಬ್ಯಾಂಕಿಂಗ್ ಪ್ರಮಾಣವನ್ನು ಐಚ್ಛಿಕವೆಂದು ತಿಳಿಸಿದ್ದರೂ ಭಾರತ ಸರ್ಕಾರ ಅದು ಕಡ್ಡಾಯ ವೆಂಬಂತೆ ಪ್ರತಿಪಾದಿಸುತ್ತಿದೆ – ಭಾರತದ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಗೆ ನಿರ್ಧರಿತವಾದ ಮುಖ್ಯ ಬಂಡವಾಳ ಮತ್ತು ಈ ಬ್ಯಾಂಕುಗಳು ನೀಡಿರುವ ಸಾಲದ ಪ್ರಮಾಣವನ್ನು ಸಂರಕ್ಷಿಸಲು ಬೃಹತ್ ಬಂಡವಾಳದ ಅಗತ್ಯವಿದೆ. ವಸೂಲಾಗದ ಸಾಲ (ಅಂದರೆ ಅಷ್ಟಿಷ್ಟಾದರೂ ಸಾಲ ಮನ್ನಾ ಮಾಡಬೇಕಾದಂತಹದ್ದು) ಬ್ಯಾಂಕುಗಳ ಬಂಡವಾಳವನ್ನು ತಿಂದುಹಾಕುವುದು ಮಾತ್ರವಲ್ಲದೆ, ಸಾಲ ವಿತರಣೆಯನ್ನು ವಿಸ್ತರಿಸಲೂ ಸಹ ಬ್ಯಾಂಕುಗಳಿಗೆ ಹೆಚ್ಚಿನ ಬಂಡವಾಳದ ಅಗತ್ಯವಿದೆ.

೨೦೧೪–೧೫ರ ಬಜೆಟ್ ಭಾಷಣದಲ್ಲಿ ವಿತ್ತ ಮಂತ್ರಿಯವರು ಈ ಸಂಬಂಧವಾಗಿ ೨,೪೦,೦೦೦ ಕೋಟಿ ರೂಪಾಯಿಗಳು (ರೂ. ೨.೪ ಟ್ರಿಲಿಯನ್) ಬೇಕೆಂದು ಅಂದಾಜಿಸಿದರು. ಅಂದರೆ ಸರ್ಕಾರ ತನ್ನ ಈಗಿನ ಶೇಕಡಾವಾರು ಪಾಲನ್ನು ಬ್ಯಾಂಕುಗಳಲ್ಲಿ ಮುಂದುವರಿಸಬೇಕೆಂದರೆ ಅದು ಬಜೆಟ್ ಹಣವನ್ನು ಹೆಚ್ಚಿಸಬೇಕು. (ಸರ್ಕಾರದ ಪಾಲು ಬೇರೆ ಬೇರೆ ಬ್ಯಾಂಕುಗಳಲ್ಲಿ ೬೫% ನಿಂದ ೮೫% ವರೆಗೂ ಇದೆ).

ii) ತೃತೀಯ ಬಾಸೆಲ್ ಒಪ್ಪಂದಕ್ಕೆ ಅನುಗುಣವಾಗಿಲ್ಲದಿದ್ದರೂ ೨೦೧೩–೧೪ರವರೆಗೆ ಸರ್ಕಾರ ಸ್ವಲ್ಪ ಬಂಡವಾಳವನ್ನು ಬ್ಯಾಂಕುಗಳಲ್ಲಿ ಹೂಡಿತು. ೨೦೧೩–೧೪ರಲ್ಲಿ ಹೂಡಿದ ೧೪,೦೦೦ ಕೋಟಿ ರೂಪಾಯಿಗಳೂ ಸೇರಿದಂತೆ ೨೦೧೧–೧೪ರ ಅವಧಿಯಲ್ಲಿ ಒಟ್ಟು ೫೪,೬೦೦ ಕೋಟಿ ರೂಪಾಯಿಗಳನ್ನು ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಲ್ಲಿ ಹೂಡಿತು. ಆದರೆ ಮೋದಿ ಸರ್ಕಾರ ೨೦೧೪–೧೫ರ ಬಜೆಟ್‌ನಲ್ಲಿ ಇದರ ಹಂಚಿಕೆಯನ್ನು ಕಡಿತಗೊಳಿಸಿ ೧೧,೨೦೦ ಕೋಟಿ ರೂಪಾಯಿಗಳಿಗೆ ಇಳಿಸಿತು. ನಂತರದ ವರ್ಷಾವಧಿಯಲ್ಲಿ ತೀವ್ರ ಕಡಿತಗೊಳಿಸಿ ಕೇವಲ ೬೯೦೦ ಕೋಟಿ ರೂಪಾಯಿಗಳಿಗೆ ತಂದು ನಿಲ್ಲಿಸಿತು, ಈ ಬಗೆಯಲ್ಲಿ ಸರ್ಕಾರ ಪ್ರತ್ಯೇಕ ಯೋಜನೆಯನ್ನೇ ಸಿದ್ಧಗೊಳಿಸುತ್ತಿತ್ತು. ಅದೆಂದರೆ, ಬ್ಯಾಂಕುಗಳನ್ನು ಸದೃಢಗೊಳಿಸುವ ಹೆಸರಿನಲ್ಲಿ ಅವುಗಳನ್ನು ಖಾಸಗೀಕರಿಸುವುದು.

iii) ೨೦೧೪, ಮೇ ತಿಂಗಳಲ್ಲಿ ರಿಸರ್ವ್ ಬ್ಯಾಂಕ್ ಇಂಡಿಯಾದ ಬ್ಯಾಂಕುಗಳ ಆಡಳಿತದ ಬಗ್ಗೆ ನೇಮಿಸಿದ 'ನಾಯಕ್ ಸಮಿತಿ' (ಇದರ ಬಗ್ಗೆ ಮುಂದೆ ಹೆಚ್ಚು ಹೇಳಲಾಗುವುದು) ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಲ್ಲಿ ಸರ್ಕಾರದ ಪಾಲನ್ನು ಇಳಿಸಬೇಕೆಂದು ಕರೆ ನೀಡಿತ್ತು. ಡಿಸೆಂಬರ್ ೨೦೧೪ರಲ್ಲಿ ಕೇಂದ್ರ ಮಂತ್ರಿ ಮಂಡಲ ನೀಡಿದ ಹೇಳಿಕೆಯಲ್ಲಿ "ಬಾಸೆಲ್ – ೩ರ ಪ್ರಕಾರ ಬ್ಯಾಂಕುಗಳ ಬಂಡವಾಳ ಹೆಚ್ಚಿಸಬೇಕಾದ ಅವಶ್ಯಕತೆ ಇದೆ. ಬ್ಯಾಂಕುಗಳಿಗೆ ಅಗತ್ಯವಾದ ಬಂಡವಾಳ ಬೆಂಬಲ ಹಣ ಅಗಾಧವಾಗಿದ್ದು, ಅದನ್ನು ಬಜೆಟ್ ಒಂದರಿಂದಲೇ ಪೂರೈಸಲಾಗುವುದಿಲ್ಲ. ಆದರೆ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಲ್ಲಿನ ಸರ್ಕಾರದ ಪಾಲನ್ನು ಕಾಲಕ್ರಮೇಣ ೫೨% ಇಳಿಸಿದಲ್ಲಿ ಬ್ಯಾಂಕುಗಳು ೧,೬೦,೮೨೫ ಕೋಟಿ ರೂಪಾಯಿಗಳಷ್ಟು

**ಮೂಲ : ಆ್ಯಸ್ಪೆಕ್ಟ್ಸ್ ಆಫ್ ಇಂಡಿಯನ್ ಎಕಾನಮಿ**
**ಅನುವಾದ : ಮುರಳೀಧರ ಚಿಕ್ಕಮಗಳೂರು**

ಹಣವನ್ನು ಮಾರುಕಟ್ಟೆಯಿಂದ ಎತ್ತಬಹುದು" ಎಂದು ತಿಳಿಸಿತ್ತು. ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳನ್ನು ಹಂತ ಹಂತವಾಗಿ ಖಾಸಗೀಕರಿಸಲು ವಿತ್ತೀಯ ಕೊರತೆಯ ಮೇಲಿನ ನಿಯಂತ್ರಣ ಮತ್ತು ಬಂಡವಾಳದ ಕೊರತೆಯನ್ನು ನೆವವನ್ನಾಗಿಸಿತು.

**ಆಯ್ದ ಪುನರ್‌ಬಂಡವಾಳೀಕರಣ**

iv) ಇದಲ್ಲದೆ ಮತ್ತೊಂದು ನಿರ್ಣಾಯಕ ಅಡ್ಡ ತಿರುವೊಂದಿದೆ. ಅದು ೨೦೧೪–೧೫ರಲ್ಲಿ ಸರ್ಕಾರ ಸಣ್ಣ ಮೊತ್ತ ೬,೯೯೦ ಕೋಟಿ ರೂಪಾಯಿಗಳನ್ನೂ ಕೂಡ ಹಿಂದೆಯೇ ನಿರ್ಧರಿಸಲ್ಪಟ್ಟ ನಿಯಮಗಳಿಗನುಸಾರವಾಗಿ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಗೆ, ಆಯಾ ಬ್ಯಾಂಕುಗಳ ಅಗತ್ಯಕ್ಕನುಗುಣವಾಗಿ ಬಂಡವಾಳ ವಿತರಿಸಲಿಲ್ಲ (ಅಂದರೆ ಆ ಬ್ಯಾಂಕುಗಳ ನಿಯಮಗಳಿಗನುಸಾರವಾಗಿಯೇ ಸಾಲ ನೀಡುವಿಕೆಯನ್ನು ವಿಸ್ತರಿಸುವುದು). ಅದಕ್ಕೆ ಬದಲಾಗಿ ಈ ಹಣವನ್ನು ಹೊಸ ನಿಯಮವೊಂದರ ಪ್ರಕಾರ ವಿತರಿಸಲಾಗುವುದೆಂದು ಸರ್ಕಾರ ಪ್ರಕಟಿಸಿತು. ಪುನರ್‌ಬಂಡವಾಳೀಕರಣಕ್ಕೆ ಅರ್ಹವಾಗಬೇಕೆಂದಾದರೆ ಒಂದು ಸಾರ್ವಜನಿಕ ಕ್ಷೇತ್ರದ ಬ್ಯಾಂಕು ತನ್ನ ಸ್ವತ್ತಿನ ಮೇಲೆ ಹಿಂಪಡೆದ ಪ್ರತಿಫಲ (Return on Assets), ಹಿಂದಿನ ಮೂರು ವರ್ಷಗಳಲ್ಲಿ ಹಿಂಪಡೆದ ಸರಾಸರಿ ಪ್ರತಿಫಲಕ್ಕಿಂತ ಹೆಚ್ಚಿರಬೇಕು ಮತ್ತು ಈಕ್ವಿಟಿಯಿಂದ ಹಿಂಪಡೆದ ಪ್ರತಿಫಲ ಹಿಂದಿನ ಒಂದು ವರ್ಷ ಅವಧಿಯಲ್ಲಿನ ಸರಾಸರಿಗಿಂತ ಹೆಚ್ಚಿರಬೇಕು. ಸರ್ಕಾರದ ಈ ಮಾಪನ ಆಧಾರವಾದಲ್ಲಿ ೨೨ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಪೈಕಿ ಕೇವಲ ೯ ಬ್ಯಾಂಕುಗಳು ಸರಾಸರಿಗಿಂತ ಉತ್ತಮವಾಗಿದ್ದು, ಪುನರ್‌ಬಂಡವಾಳೀಕರಣಕ್ಕೆ ಅರ್ಹವಾಗಿ, ಇನ್ನುಳಿದ ೧೩ ಬ್ಯಾಂಕುಗಳು ಪುನರ್‌ಬಂಡವಾಳೀಕರಣಗೊಳ್ಳಲೇ ಇಲ್ಲ.

೨೦೧೫–೧೬ರ ಬಜೆಟ್ ಕೂಡ ಇದೇ ಚಾಳಿಯಲ್ಲಿದ್ದು ಪುನರ್ ಬಂಡವಾಳೀಕರಣದ ಹಣವನ್ನು ೭,೯೦೦ ಕೋಟಿ ರೂಪಾಯಿಗಳಿಗೆ ಇಳಿಸಲಾಯಿತು. ಇದು ಹಿಂದಿನ ಬಜೆಟ್‌ನಲ್ಲಿ ತೋರಿಸಿದ್ದ ಅಂಕಿ–ಅಂಶಗಳಿಗಿಂತ ೨೯% ಕಡಿಮೆಯಾಗಿತ್ತು. ಸರ್ಕಾರ ಬ್ಯಾಂಕುಗಳ ಪುನರ್‌ಬಂಡವಾಳೀಕರಣದಲ್ಲಿ ಈ ಬಗೆಯ ಆಯ್ಕೆಯ ನೀತಿಯನ್ನು ಮುಂದುವರಿಸಿದೆ.

**ಕೇಂದ್ರದ ಬಜೆಟ್‌ನಿಂದ ಸಾರ್ವಜನಿಕ ಬ್ಯಾಂಕ್‌ಗಳಿಗಾದ ಪುನರ್ ಬಂಡವಾಳೀಕರಣ (ಕೋಟಿ ರೂ.ಗಳಲ್ಲಿ)**




ಒಂದು ವೇಳೆ ಬಂಡವಾಳವನ್ನು ಕೇವಲ ಆಯ್ದ ಬ್ಯಾಂಕ್‌ಗಳಲ್ಲಿ ಮಾತ್ರ ತೊಡಗಿಸಬೇಕೆಂಬ ಸರ್ಕಾರದ ಆಲೋಚನೆ ಎಷ್ಟೇ ವಿಲಕ್ಷಣವಾದರೂ ಅಥವಾ ಅದನ್ನು ಒಪ್ಪಿಕೊಂಡರೂ ಅದಕ್ಕಾಗಿ ರೂಪಿಸಿದ ಮಾಪನಗಳು ಮಾತ್ರ ತೀರಾ ವಿಲಕ್ಷಣವಾಗಿವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸರ್ಕಾರ ಯಾವುದೇ ಒಂದು ನಿರ್ದಿಷ್ಟ ಮಟ್ಟವನ್ನು ಲಕ್ಷ್ಮಣ ರೇಖೆಯೆಂದು ನಿಗದಿಪಡಿಸಿರಲಿಲ್ಲ. ಬದಲಾಗಿ, ಸರ್ಕಾರ "ಸರಾಸರಿ ಮಟ್ಟಕ್ಕಿಂತ ಕೆಳಗೆ" ಇದ್ದ ಎಲ್ಲ ಬ್ಯಾಂಕುಗಳನ್ನೂ ಪುನರ್‌ಬಂಡವಾಳೀಕರಣದ ವ್ಯಾಪ್ತಿಯಿಂದ ಹೊರಗಿಟ್ಟಿತು. ಸರಿಸುಮಾರು ಅರ್ಧದಷ್ಟು ಬ್ಯಾಂಕುಗಳು "ಅನಿವಾರ್ಯ"ವಾಗಿ ಸರಾಸರಿಗಿಂತ ಕೆಳಮಟ್ಟದಲ್ಲಿ ಇದ್ದುದರಿಂದ, ಅರ್ಧದಷ್ಟು ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳನ್ನು ಮಿಕ್ಕ ಬ್ಯಾಂಕುಗಳಿಂದ ಪ್ರತ್ಯೇಕಿಸುವುದು ಸರ್ಕಾರ ಅನುಸರಿಸಿದ ವಿಧಾನವಾಗಿತ್ತು.

ಈ ರೀತಿ ಹೊರಗುಳಿಯಲ್ಪಟ್ಟ ಬ್ಯಾಂಕುಗಳ ಬಂಡವಾಳದ ಅಗತ್ಯವೆಷ್ಟೆಂದರೆ ಅದು ಎಲ್ಲ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಗೆ ಬೇಕಾದ ಅಧಿಕ ಬಂಡವಾಳದ ಸರಿಸುಮಾರು ಅರ್ಧದಷ್ಟು ಎಂದು ಅಂದಾಜಿಸಲಾಗಿದೆ. ಈ ಹಿಂದಿನ ಸರ್ಕಾರ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳನ್ನು ಬೆಂಬಲಿಸುವ ಒಟ್ಟಾರೆ ನಿಲುವು – ಆರ್ಥಿಕ ಪರಿಸ್ಥಿತಿ ಹದಗೆಟ್ಟಾಗಲೂ – ಬ್ಯಾಂಕುಗಳ ಹಣಕಾಸಿನ ಸದೃಢತೆಯನ್ನು ಸ್ಥಿರಗೊಳಿಸುವುದು, ಆರ್ಥಿಕ ಚಟುವಟಿಕೆಗಳಿಗೆ ಸಾಲ ನೀಡುವಂತೆ ಅವುಗಳನ್ನು ಸಶಕ್ತಗೊಳಿಸುವುದು ಆಗಿತ್ತು. ಹಿಂದಿನ ಸರ್ಕಾರದ ಈ ಅಂತರ್ಗತ ಬೆಂಬಲದಿಂದಾಗಿ ಆ ಸಂದರ್ಭದಲ್ಲಿ ಎಲ್ಲ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ವಿಶ್ವಾಸ – ಪ್ರಮಾಣ (Credit Rating) ಸರಿಸುಮಾರು ಒಂದೇ ತೆರನಾಗಿತ್ತು.

ಈಗ ಇದಕ್ಕೆ ತದ್ವಿರುದ್ಧವಾಗಿ ಪ್ರಚಲಿತ ಸರ್ಕಾರ ಆಯ್ದ ಬ್ಯಾಂಕುಗಳ ಪುನರ್ ಬಂಡವಾಳೀಕರಣ ಮಾಡಿದ ಹಿನ್ನೆಲೆಯಲ್ಲೇ ಮೂಡಿ ಸಂಸ್ಥೆ ಎರಡು ಸಾರ್ವಜನಿಕ ಬ್ಯಾಂಕುಗಳಾದ ಸೆಂಟ್ರಲ್ ಬ್ಯಾಂಕ್ ಆಫ್ ಇಂಡಿಯ ಮತ್ತು ಇಂಡಿಯನ್ ಓವರ್‌ಸೀಸ್ ಬ್ಯಾಂಕುಗಳು "ಬಂಡವಾಳ" ಹೂಡಿಕೆಯ ಮಟ್ಟಕ್ಕಿಂತ ಕೆಳಗಿವೆ ಎಂದು ಮತ್ತು ಅವುಗಳ ವಿಶ್ವಾಸ – ಪ್ರಮಾಣವನ್ನು ಇಳಿಸುವ ಬಗ್ಗೆ ಪ್ರಕಟಣೆ ನೀಡಿತು. ಇದರಿಂದಾಗಿ ಈ ಬ್ಯಾಂಕುಗಳಿಗೆ ಮಾರುಕಟ್ಟೆಯಿಂದ ಹಣ ತರಲು ಕೂಡ ಕಷ್ಟಕರವಾಗಿ ಪರಿಣಮಿಸಿದೆ. ಸರ್ಕಾರ ಅಥವಾ ಮಾರುಕಟ್ಟೆ ಬಂಡವಾಳ ಪೂರೈಕೆಯ ಉಗಮ ಸ್ಥಾನವಾಗದಿದ್ದಲ್ಲಿ ಈ ಬ್ಯಾಂಕುಗಳಿಗೆ ಶಕ್ತಿಯುತ ಬ್ಯಾಂಕುಗಳೊಡನೆ ವಿಲೀನ ಗೊಳ್ಳುವುದು ಅನಿವಾರ್ಯವಾಗುತ್ತದೆ. ಅಂತರರಾಷ್ಟ್ರೀಯ ವಿಶ್ವಾಸ – ಪ್ರಮಾಣ ಸಂಸ್ಥೆಗಳು ಸರ್ಕಾರದ ಈ ಚಾಲನೆಗಳು "ಕಂಪನಕಾರಿ" ಮತ್ತು "ಕ್ರೋಡೀಕರಿಸುವಿಕೆ"ಗೆ ರಂಗಸಜ್ಜಿಕೆ ಎಂದು ಗಮನಿಸಿವೆ. ವಿತ್ತೀಯ ಅಶಕ್ತ ಬ್ಯಾಂಕುಗಳನ್ನು ಶಕ್ತ ಬ್ಯಾಂಕ್ ತೆಗೆದುಕೊಳ್ಳುವುದು ಎಂದು ಅರ್ಥ (ಅವು ಸಾರ್ವಜನಿಕ ಅಥವಾ ಖಾಸಗಿ ಕ್ಷೇತ್ರದ ಬ್ಯಾಂಕುಗಳಾಗಿರಬಹುದು) ಕೆಲವು ಬ್ಯಾಂಕುಗಳನ್ನು ವಿತ್ತೀಯವಾಗಿ ಉಪವಾಸ ಕೆಡವಿ, ಇನ್ನು ಕೆಲವನ್ನು ಪುನರ್‌ಬಂಡವಾಳೀಕರಿಸುವುದು ಅಶಕ್ತ ಬ್ಯಾಂಕುಗಳನ್ನು ಅಳಿಸಿಹಾಕುವ ತಂತ್ರವಾಗಿದೆ. ೨೦೧೫–೧೬ರ ಆರ್ಥಿಕ ಸಮೀಕ್ಷೆ ಹೇಳುವುದೇನೆಂದರೆ :

> "ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ನಡುವೆ ಭಿನ್ನತೆ ಇರಬೇಕು. ಮತ್ತು ಸರ್ಕಾರ ಅನುಸರಿಸುತ್ತಿರುವ ಇತ್ತೀಚಿನ ಪುನರ್‌ಬಂಡವಾಳೀಕರಣದ ನೀತಿ ಈ ದಿಕ್ಕಿನಲ್ಲಿ ಸಮರ್ಪಕವಾದದ್ದು. ಈ ರೀತಿಯ ಭಿನ್ನತೆ ಪಟ್ಟಿಯಲ್ಲಿರುವ ಎಲ್ಲ ಕಾರ್ಯಕ್ರಮಗಳನ್ನು, ಅಂದರೆ ಪುನರ್‌ಬಂಡವಾಳೀಕರಣ, ಸರ್ಕಾರದ ಒಡೆತನ ಕಡಿಮೆ ಮಾಡುವುದು ಮತ್ತು ಬ್ಯಾಂಕುಗಳಿಂದ ಸಂಪೂರ್ಣವಾಗಿ ಹೊರಬರುವುದು ಇತ್ಯಾದಿಗಳನ್ನು ಸಾಧಿಸಬಹುದು."

**ಅನುತ್ಪಾದಕ ಸಾಲ (ಎನ್.ಪಿ.ಎ.) ಎಲ್ಲಿಂದ ಬಂದದ್ದು ?**

ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳು ಅನುತ್ಪಾದಕ ಸಾಲ, ಅಂದರೆ ವಸೂಲಾಗದ ಸಾಲದ ಹೊರೆಯನ್ನು ಹೊತ್ತಿವೆ ಎಂಬುದರಲ್ಲಿ ಅನುಮಾನವಿಲ್ಲ. ಆದರೆ ಇದಕ್ಕೆ ಮೂರು ಮುಖ್ಯ ಕಾರಣಗಳಿವೆ. ಒಂದು, ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳು ಖಾಸಗಿ ಕ್ಷೇತ್ರದ ಬ್ಯಾಂಕುಗಳಂತಲ್ಲ. ಬಡಜನರ ಹಣದ ಅಗತ್ಯವನ್ನು ಸ್ವಲ್ಪ ಪ್ರಮಾಣದಲ್ಲಾದರೂ ನೀಗಬೇಕಾದ ಒತ್ತಡ ಈ ಬ್ಯಾಂಕುಗಳ ಮೇಲೆ ಈಗಲೂ ಇದೆ. ಅದು ರೈತರು ಮತ್ತು ಸಣ್ಣ ಉದ್ದಿಮೆದಾರರನ್ನೂ ಒಳಗೊಂಡಿದೆ. ಈ ವರ್ಗದ ಜನ ಕೆಲವು ಸಂದರ್ಭಗಳಲ್ಲಿ – ಬೆಳೆ ಹಾನಿ, ಬೆಲೆ ಕುಸಿತ, ಮಾರುಕಟ್ಟೆಯಲ್ಲಿ ನಷ್ಟ, ದೊಡ್ಡ ಉದ್ದಿಮೆಗಳು ಸಣ್ಣ ಉದ್ದಿಮೆದಾರರಿಗೆ ಕೊಡಬೇಕಾದ ಹಣವನ್ನು ನೀಡದಿರುವುದು – ಹೀಗೆ ಹಲವಾರು ತಮ್ಮ ಕೈ ಮೀರಿದ ಕಾರಣಗಳಿಂದಾಗಿ ಸಾಲ ಮರುಪಾವತಿ ಮಾಡಲು ವಿಫಲರಾಗುತ್ತಾರೆ. ಅದೇ ವೇಳೆಗೆ ಬ್ಯಾಂಕ್‌ಗಳು ತರಾತುರಿಯಿಂದ ಅಂತಹ ಸಾಲಗಾರರನ್ನು ಅನುತ್ಪಾದಕ ಸಾಲದ ಪಟ್ಟಿಗೆ ಸೇರಿಸಿ ಅವರ ಮೇಲೆ ಕ್ರಮ ಜರುಗಿಸಿ ಅವರೇ ಅನುತ್ಪಾದಕ ಸಾಲಕ್ಕೆ ಕಾರಣಕರ್ತರೆಂದು ದೂಷಿಸುತ್ತಾರೆ.

ಎರಡನೇ ಬಗೆಯ ಅನುತ್ಪಾದಕ ಸಾಲ, ಎಂದರೆ ಗೃಹ ಮತ್ತು ವಾಹನ ಖರೀದಿಗೆ ಬ್ಯಾಂಕುಗಳು ನೀಡುವ ಗ್ರಾಹಕ ಸಾಲಗಳು. ಇವು ಉಚ್ಛ್ರಾಯ ಆರ್ಥಿಕ ಪರಿಸ್ಥಿತಿಯಲ್ಲಿ ಹೆಚ್ಚು ಬೇಡಿಕೆ ಪಡೆದರೆ, ಇಳಿಮುಖಗೊಂಡ ಆರ್ಥಿಕ ಪರಿಸ್ಥಿತಿಯಲ್ಲಿ ಸಂಕಷ್ಟಕ್ಕೊಳಗಾಗಿವೆ. ಈ ಗ್ರಾಹಕ ಸಾಲಗಳನ್ನು ವಿಸ್ತೃತಗೊಳಿಸಿ ಆರ್ಥಿಕ ಪರಿಸ್ಥಿತಿಯ ಪುನರ್‌ಚೇತನಗೊಳಿಸಲು ಯು.ಪಿ.ಎ. ಸರ್ಕಾರ ಸಾಕಷ್ಟು ಪ್ರಯತ್ನಿಸಿತು. ಗ್ರಾಹಕ ಸಾಲ ವಿಸ್ತೃತಗೊಂಡಲ್ಲಿ ಮಾತ್ರ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳಿಗೆ ಹೆಚ್ಚಿನ ಬಂಡವಾಳ ಹೂಡಿಕೆ ಎನ್ನುವವರೆಗೂ ಅಂದಿನ ವಿತ್ತ ಮಂತ್ರಿ ಚಿದಂಬರಂ ಘೋಷಿಸಿದ್ದರು. (ಉದಾಹರಣೆಗೆ, ೬೦,೦೦೦ ಕೋಟಿ ರೂಪಾಯಿಗಳ ಸಾಲವನ್ನು ಗೃಹ ಮತ್ತು ವಾಹನ ಖರೀದಿಗೆ ಕೊಟ್ಟಲ್ಲಿ ಅಂತಹ ಬ್ಯಾಂಕ್‌ಗೆ ೬೦೦೦ ಕೋಟಿ

ರೂಪಾಯಿಗಳಷ್ಟು ಹೊಸ ಬಂಡವಾಳ ಕೊಡಲಾಗುವುದು.)

ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಮೇಲೆ ಸರ್ಕಾರ ಅಸಾಧಾರಣ ಒತ್ತಡ ಹೇರಿ ಕಾರ್ಪೊರೇಟ್ ಕ್ಷೇತ್ರಕ್ಕೆ ಸಾಲ ಕೊಡುವಂತೆ ಮಾಡಿದ್ದು ಮೂರನೇ ಅನುತ್ಪಾದಕ ಸಾಲಕ್ಕೆ ಕಾರಣ. ಇವು ಮೂಲಭೂತ ಸೌಕರ್ಯ ಕ್ಷೇತ್ರದಲ್ಲಿ ಹೆಚ್ಚು ಕೇಂದ್ರೀಕೃತವಾದದ್ದು. ಸಾರ್ವಜನಿಕ ಹಣವನ್ನು ಖಾಸಗಿ ಬಂಡವಾಳ ಹೂಡಿಕೆಗೆ ಉಪಯೋಗಿಸುವುದೇ ಬಹಳಷ್ಟು ಮಟ್ಟಿಗೆ ಆರ್ಥಿಕ ಅಭಿವೃದ್ಧಿಯ ಮಾದರಿಗೆ ತಳಹದಿಯಾಗಿತ್ತು. ಕಿಂಗ್ ಫಿಷರ್ ಏರ್‌ಲೈನ್ಸ್‌ನ ಪ್ರಕರಣ ಬಂಡವಾಳವನ್ನು ದೇಶದಿಂದ ಹಾರಿಸಿಕೊಂಡು ಹೋದುದಕ್ಕೆ ಅತ್ಯುತ್ತಮ ನಿದರ್ಶನ. ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳು ಖಾಸಗಿ ಬಂಡವಾಳ ಹೂಡಿಕೆಗೆ ತಳಹದಿಯಾಗದಿದ್ದಲ್ಲಿ ೨೦೦೩-೧೧ರ ಅವಧಿಯಲ್ಲಿ ಕಂಡ ಆರ್ಥಿಕ ಉಚ್ಛ್ರಾಯ ಸ್ಥಿತಿ ಸಾಧ್ಯವಾಗುತ್ತಿರಲಿಲ್ಲ. ಈ ಅವಧಿಯಲ್ಲಿ ಮೂಲಭೂತ ಸೌಕರ್ಯ ಕ್ಷೇತ್ರಕ್ಕೆ ಕೊಟ್ಟ ಸಾಲ ೧೦೦ ಪಟ್ಟು ಹೆಚ್ಚಿತ್ತು. (೧೯೯೯-೨೦೦೦ ಅವಧಿಯಲ್ಲಿ, ೭೨೪ ಕೋಟಿ ರೂ.ಗಳಷ್ಟಿದ್ದರೆ, ಅದು ೨೦೧೨-೧೩ರಲ್ಲಿ ೭೮,೬೦೫ ಕೋಟಿ ರೂಪಾಯಿಗಳಿಗೆ ಏರಿ, ೧೩ ವರ್ಷಗಳ ಅವಧಿಯಲ್ಲಿ ಮಿಶ್ರಿತ ೪೩.೪% ವಾರ್ಷಿಕ ಬೆಳವಣಿಗೆಯ ಪ್ರಮಾಣ ತಲುಪಿತ್ತು.) ರಿಸರ್ವ್ ಬ್ಯಾಂಕ್‌ನ ಡೆಪ್ಯುಟಿ ಗವರ್ನರ್ ಈ ಬಗ್ಗೆ ಹೇಳಿದ್ದೇನೆಂದರೆ :

> "ಬಜೆಟ್ ಬೆಂಬಲ ಹೊರತುಪಡಿಸಿದರೆ, ಮೂಲಭೂತ ಸೌಕರ್ಯಕ್ಕೆ ಹಣ ಒದಗಿಸುವುದರಲ್ಲಿ ವಾಣಿಜ್ಯ ಬ್ಯಾಂಕುಗಳು ಎರಡನೆಯವು... ಮೂಲಭೂತ ಸೌಕರ್ಯಗಳ ಕಂಪನಿಗಳ ಪ್ರಭಾವ ಹೆಚ್ಚಿನದು (ಅಂದರೆ ಅವು ಭಾರಿ ಸಾಲ ಪಡೆಯುತ್ತವೆ) ಮತ್ತು ಈಕ್ವಿಟಿಯಿಂದ ಹರಿದುಬರುವ ಹಣ (ಕಂಪನಿಯ ಪ್ರವರ್ತಕರ ಜೇಬಿನಿಂದ ತೊಡಗಿಸುವ ಹಣ) ಮೂಲಭೂತ ಸೌಕರ್ಯ ಕ್ಷೇತ್ರದಲ್ಲಿ ಅತ್ಯಲ್ಪ. ನನ್ನ ಅಭಿಪ್ರಾಯದಲ್ಲಿ ಸಾರ್ವಜನಿಕ -ಖಾಸಗಿ ಜಂಟಿ-ಜೋಡಿ ನಿಜಕ್ಕೂ ಕೇವಲ "ಸಾರ್ವಜನಿಕ ಸಾಹಸ ಮಾತ್ರ"ವೇ ಸರಿ.

ಇನ್ನೊಂದೆಡೆ ಅವರು ಹೇಳಿದ್ದೇನೆಂದರೆ, ಕಾರ್ಪೊರೇಟ್ ಸಾಲಗಾರರೇ ಬಹುಪಾಲು ಅನುತ್ಪಾದಕ ಸಾಲಕ್ಕೆ ಕಾರಣಕರ್ತರು. ಇವರ ಅನುತ್ಪಾದಕ ಸಾಲದ ಪಾಲು ಸಣ್ಣ ಸಾಲಗಾರರ ಪಾಲಿಗಿಂತ ಬಹಳ ಜಾಸ್ತಿ. ಆದರೆ ಬ್ಯಾಂಕುಗಳು ಇವರನ್ನು ಕನಿಕರದಿಂದ ನೋಡುತ್ತವೆ. ಅದರಿಂದಾಗಿ ಕಾರ್ಪೊರೇಟ್ ಸಾಲವನ್ನು ಅನೇಕ ವಿಧಗಳಲ್ಲಿ ಪುನರ್‌ರಚಿಸುತ್ತವೆ (ಉದಾರಣೆ: ಮರುಪಾವತಿಯ ಸಮಯವನ್ನು ನಿಗದಿಪಡಿಸುವುದು, ಬಡ್ಡಿ ದರವನ್ನು ಕಡಿಮೆ ಮಾಡುವುದು, ಸಾಲವನ್ನು ಷೇರುಗಳಾಗಿ ಪರಿವರ್ತಿಸುವುದು, ಬಡ್ಡಿಯನ್ನು ಸಂಪಾದನೆಗೆ ಜೋಡಿಸುವುದು... ಇತ್ಯಾದಿ) ಈ ಬಗೆಯ ಮೃದುಸ್ವಭಾವವನ್ನು ಬ್ಯಾಂಕುಗಳು ಸಣ್ಣ ಸಾಲಗಾರರ ಬಗ್ಗೆ ತೋರಿಸುವುದಿಲ್ಲ.

> "ಬ್ಯಾಂಕುಗಳ ಸಾಲದ ಬಗ್ಗೆ ಇರುವ ಸಾರ್ವತ್ರಿಕ ಮಿಥ್ಯೆಯೆಂದರೆ, ನಿರ್ದೇಶಿತ ಸಾಲಗಳು (ಅಂದರೆ ಕೃಷಿ ಮತ್ತು ಸಣ್ಣ ಸಾಲಗಾರರು ಮುಂತಾದ ಆದ್ಯ ಕ್ಷೇತ್ರಗಳಿಗೆ ಸಾಲ ನೀಡುವ ನಿರ್ದೇಶನಗಳು) ಅನುತ್ಪಾದಕ ಸಾಲವನ್ನು ಅತೀವ ಪ್ರಮಾಣದಲ್ಲಿ ಹೆಚ್ಚಿಸಿವೆ ಮತ್ತು ಆದ್ಯ ಕ್ಷೇತ್ರಗಳಲ್ಲಿನ ಅನುತ್ಪಾದಕ ಸಾಲದ ಪ್ರಮಾಣ ಆದ್ಯವಲ್ಲದ ಕ್ಷೇತ್ರಗಳಿಗೆ ನೀಡಿರುವ ಅನುತ್ಪಾದಕ ಸಾಲಕ್ಕಿಂತ ಹೆಚ್ಚು ಎಂಬುದು. ಆದರೆ ಶಿಥಿಲಗೊಂಡ ಸಾಲದ (ಅಂದರೆ ಪುನರ್‌ರಚಿಸಿದ ಸಾಲದ ಜೊತೆ ಅನುತ್ಪಾದಕ ಸಾಲ) ಬಗ್ಗೆ ಪರಿಶೀಲಿಸಿದಲ್ಲಿ, ಆಗ ಆದ್ಯವಲ್ಲದ ಕ್ಷೇತ್ರಕ್ಕೆ ನೀಡಿರುವ ಸಾಲ ಆದ್ಯಕ್ಷೇತ್ರದ ಸಾಲದ ಗುಣಕ್ಕಿಂತ ಹೆಚ್ಚು ಆತಂಕಕಾರಿಯಾಗಿದೆ. ಬಿಕ್ಕಟ್ಟಿನ ಅವಧಿಯಲ್ಲಿ ಆದ್ಯವಲ್ಲದ ಕ್ಷೇತ್ರದ ಸಾಲದ ಪ್ರಮಾಣ ಬಹಳಷ್ಟು ಉಲ್ಬಣಗೊಂಡಿದೆ. ಸಣ್ಣ ಪ್ರಮಾಣದ ಸಾಲಗಾರರು ಮಾತ್ರ ಬ್ಯಾಂಕುಗಳ ಸಾಲದ ಒತ್ತಡಕ್ಕೆ ಕಾರಣರಲ್ಲ. ಬ್ಯಾಂಕುಗಳಿಗೆ ಇವರ ಬಗ್ಗೆ ಇರುವ ಪೂರ್ವಗ್ರಹವೇ ಇವರನ್ನು ಬಲಹೀನರ ಖಾತೆಗೆ ಸೇರಿಸಿರುವುದಕ್ಕೆ ಕಾರಣ."

ಈ ರೀತಿ ಖಾಸಗಿ ಕಾರ್ಪೊರೇಟ್ ಕ್ಷೇತ್ರ ಅನುತ್ಪಾದಕ ಸಾಲಕ್ಕೆ ಬಹುಪಾಲು ಕಾರಣವಾಗಿದ್ದರೂ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳನ್ನು ಖಾಸಗೀಕರಿಸುವುದಕ್ಕೆ ಅದನ್ನೇ ಕಾರಣವನ್ನಾಗಿಸಿದೆ (ಸ್ವಲ್ಪಮಟ್ಟಿಗೆ ವೇಷ ಮರೆಸಿ).

**ಸಾವಿನೊಂದಿಗೆ ಸುಧಾರಣೆ**

೨೦೧೪ರ ಮಾರ್ಚ್‌ನಲ್ಲಿ ಈಗಿನ ಮುಖ್ಯ ಆರ್ಥಿಕ ಸಲಹೆಗಾರರಾದ ಅರವಿಂದ ಸುಬ್ರಮಣ್ಯನ್ ಅವರು ವಾಷಿಂಗ್‌ಟನ್ ಡಿ.ಸಿ.ಯ ಪೀಟರ್‌ಸನ್

ಕಾವ್ಯಲೋಕ



# ಮೋಡಿ ಆಟ



ಕೆಲವರು ಅವನನ್ನು ದೇವರು ಮಾಡಿದ್ದಾರೆ
ಇನ್ನು ಕೆಲವರು ವಿಮೋಚಕನನ್ನಾಗಿ ಕಂಡಿದ್ದಾರೆ,
ಸಮಸ್ಯೆ ಪರಿಹರಿಸುವ ಸರದಾರ
ದೇಶ ಉದ್ಧರಿಸುವ ಜಾದೂಗಾರ ಎಂದಿದ್ದಾರೆ,
ಅವನಿಗೋ ಜೀವಗಳ ಚಿಂತೆಯಿಲ್ಲ
ಸಂಕಟಗಳಿಂದ ಬಳಲುವವರು ಕಾಣುವುದಿಲ್ಲ,
ಕೋಮುಗಲಭೆಗಳಲ್ಲಿ ಸತ್ತವರು
'ನಾಯಿ ಮರಿಯಂತೆ' ಅದಕ್ಕಾಗಿ ವ್ಯಥೆಪಡುವುದು ಸಲ್ಲ,
ಶಾಲೆ ಕಾಣದ ಮಕ್ಕಳು ಗ್ರಹಚಾರವಾಗಿ
ಬಡತನ ಹಣೆಯ ಬರಹವಾಗಿ ಕಾಣುತ್ತಾನೆ,
ಜನತೆಗೆ ಕನಸು ಕಾಣಲು ಮಾತ್ರ
ಮುಕ್ತ ಸ್ವಾತಂತ್ರ್ಯ ನೀಡುತ್ತಾನೆ,
ಧನಿಕರು ದೇಶದ ಸ್ತಂಭಗಳು
ಮೇಲುಜಾತಿ ವರ್ಣದವರು ಆಪ್ತ ಸಚಿವರು,
ಉಧೋ ಉಧೋ ಎಂದು ಪಾದಕ್ಕೆ ಬಿದ್ದವರು
ಕಾಮಧೇನು, ಕಲ್ಪವೃಕ್ಷಗಳ ಕನಸು ಕಂಡವರು,
ಚುನಾವಣಾ ಪ್ರಚಾರದ ಭರಾಟೆಯಲ್ಲಿ
ಜನರನ್ನು ಹರಿದು ಹಂಚಿದ ಹುನ್ನಾರ ಕಾಣಲಿಲ್ಲ,
ಮೋಡಿ ಮಾತಿನ ಕೈಚಳಕದಲ್ಲಿ
ದೇಶದಲ್ಲಿ ಹರಡಿದ ಕತ್ತಲೆಯ ಅರಿವಾಗಲಿಲ್ಲ,
ಬದಲಾವಣೆ ಪ್ರಕೃತಿ ನಿಯಮ
ಎಲ್ಲರಿಗೂ ಅನ್ವಯಿಸುತ್ತದೆ ಯಾರೂ ಹೊರತಲ್ಲ.

**ಎಂ. ಇಕ್‌ಬಾಲ್ ಹುಸೇನ್**
ವಕೀಲರು
೫-ಎ, ೨ನೇ ಮುಖ್ಯರಸ್ತೆ, ೨ನೇ ಅಡ್ಡರಸ್ತೆ, ರಹಮತ್ ನಗರ
ಆರ್. ಟಿ. ನಗರ, ಬೆಂಗಳೂರು - ೫೬೦ ೦೩೨

ಇನ್‌ಸ್ಟಿಟ್ಯೂಟ್ ಆಫ್ ಇಂಟರ್‌ನ್ಯಾಷನಲ್ ಎಕನಾಮಿಕ್ಸ್ ಅಂಡ್ ಫಾರ್ ಗ್ಲೋಬಲ್ ಡೆವಲಪ್‌ಮೆಂಟ್ ಸಂಸ್ಥೆಯಲ್ಲಿ ಸೀನಿಯರ್ ಫೆಲೊ ಆಗಿದ್ದರು. ಅವರು 'ಬಿಸಿನೆಸ್ ಸ್ಟಾಂಡರ್ಡ್' ಪತ್ರಿಕೆಗೆ ಬರೆಯುತ್ತಿದ್ದ ಲೇಖನಗಳಲ್ಲಿ, ೧೯೬೯ರಲ್ಲಿ ಖಾಸಗಿ ಬ್ಯಾಂಕುಗಳನ್ನು ರಾಷ್ಟ್ರೀಕರಣ ಮಾಡಿದ್ದರ ಬಗ್ಗೆ ಗೋಳಾಡಿದ್ದರು. ಅದು ಆರ್ಥಿಕ ನೀತಿಯ ಎರಡು ತಪ್ಪುಗಳಲ್ಲೊಂದು ಮತ್ತು ಅದು ಭಾರತವನ್ನು "ಕುತ್ತಿಗೆಗೆ ಕಟ್ಟಿಕೊಂಡ ರುಬ್ಬುಗುಂಡಿನ ಹಾಗೆ ಎಡತಾಕುತ್ತಿರುತ್ತದೆ. ಈ ತಪ್ಪನ್ನು ಈಗಿನ ರಿಸರ್ವ್ ಬ್ಯಾಂಕ್‌ನ ಗವರ್ನರ್ ರಘುರಾಮ್ ರಾಜನ್ ತಿದ್ದಿಕೊಂಡಲ್ಲಿ ಅದು ಅವರ ಪ್ರಮುಖ ಸಾಧನೆಗಳಲ್ಲೊಂದಾಗುತ್ತದೆ" ಎಂದು ಹೇಳಿದ್ದರು. ಈ ಹೇಳಿಕೆಗಳ ಸ್ಪಷ್ಟ ಉದ್ದೇಶವೆಂದರೆ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳು ಅಭಿವೃದ್ಧಿಯನ್ನು ಹೊಂದದಂತೆ ಮಾಡುವುದು ಮತ್ತು ಅವುಗಳನ್ನು ರಾಷ್ಟ್ರೀಕರಣ ಕ್ಷೇತ್ರದಿಂದ ಹೊರತರುವುದು. ಈ ದೃಷ್ಟಿಯಲ್ಲಿ ಇಂದಿನ ಆಳುವ ವರ್ಗ ತನ್ನ ಅಂತರ್ಗತ ಉದ್ದೇಶ ವ್ಯಾಪಕವಾದ ಸಾರ್ವಜನಿಕ ವಿರೋಧಕ್ಕೆ ಒಳಗಾಗಬಹುದಾದುದರಿಂದ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಸಾಧನೆಯನ್ನು ಹೆಚ್ಚಿಸುತ್ತೇವೆಂಬ ಅವರ ಮಾತುಗಳು ಕೇವಲ ತೋರಿಕೆಗೆ, ಅಷ್ಟೆ.

ಸುಬ್ರಮಣ್ಯನ್ ಅವರು, "ಖಾಸಗಿ ಕ್ಷೇತ್ರದಲ್ಲಿ ಹೊಸ ಬ್ಯಾಂಕುಗಳಿಗೆ ಪರವಾನಗಿ ಕೊಟ್ಟರೆ ಮಾತ್ರ ಸಾಲದು. ಒಟ್ಟಾರೆ ಬ್ಯಾಂಕಿಂಗ್ ಕ್ಷೇತ್ರದಲ್ಲಿ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಪಾಲು ಸತತವಾಗಿ ಸರಿಸುಮಾರು ೭೫% ರಷ್ಟಿದೆ (ಸ್ವತ್ತು ಅಥವಾ ಠೇವಣಿಯ ಪಾಲಿನ ಅಳತೆಯ ಆಧಾರದ ಮೇಲೆ). ಆದ್ದರಿಂದ ಹೆಚ್ಚು ಖಾಸಗಿ ಬ್ಯಾಂಕುಗಳು ಸಾರ್ವಜನಿಕ ಕ್ಷೇತ್ರ ಬ್ಯಾಂಕ್‌ಗಳ ಪಾತ್ರವನ್ನೇನೂ ಕಿರಿದುಗೊಳಿಸುವುದಿಲ್ಲ" ಎಂದು ತಮ್ಮ ನಿಲುವನ್ನು ಸ್ಪಷ್ಟಪಡಿಸಿದರು. ಮುಂದುವರಿದು "ನೇರವಲ್ಲದ ದಾರಿಯಿಂದ ಇವುಗಳನ್ನು ಖಾಸಗೀಕರಿಸಬೇಕು" ಎಂದು ತಮ್ಮ ಕಾರ್ಯತಂತ್ರವನ್ನು ಮುಂದಿಟ್ಟರು.

ಅರವಿಂದ ಸುಬ್ರಮಣ್ಯನ್ ದಿನಾಂಕ ೦೭-೦೩-೨೦೧೪ರಂದು 'ಬಿಸಿನೆಸ್ ಸ್ಟಾಂಡರ್ಡ್'ನಲ್ಲಿ "ಇಂಡಿಯನ್ ಬ್ಯಾಂಕಿಂಗ್ – ರಿಫಾರ್ಮ್ ಬೈ ಡೆತ್" ಎಂಬ ತಮ್ಮ ಲೇಖನದಲ್ಲಿ ಹೀಗೆ ಹೇಳುತ್ತಾರೆ :

> "ಸಾರ್ವಜನಿಕ ಕ್ಷೇತ್ರ ಬ್ಯಾಂಕುಗಳ ಪಾತ್ರವನ್ನು ನೇರವಾಗಿ ಕಿರಿದುಗೊಳಿಸಲು ಮಾಡಬೇಕಾದ್ದೇನು ? ಏಕೆಂದರೆ ಈ ಬ್ಯಾಂಕುಗಳು ರಾಜಕೀಯ ಹತೋಟಿ ಮತ್ತು ಪ್ರಭಾವಕ್ಕೆ ಮೀಟುಗೋಲು. ಅದಲ್ಲದೆ, ಬ್ಯಾಂಕ್ ನೌಕರರ ಸಂಘಟನೆಗಳು ಬಲಿಷ್ಠವಾದುವು. ಆದ್ದರಿಂದ ಅವುಗಳನ್ನು ನೇರವಾಗಿ ಖಾಸಗೀಕರಿಸುವುದು ಅಸಾಧ್ಯವಾಗಬಹುದೇನೋ. ಆದರೆ ಅವುಗಳನ್ನು ಖಾಸಗೀಕರಿಸಲು ನೇರವಲ್ಲದ ಮಾರ್ಗವೊಂದಿದೆ. ಅಥವಾ ಖಾಸಗೀಕರಿಸುವ ಪ್ರಕ್ರಿಯೆಯನ್ನು ಪ್ರಾರಂಭಿಸಲು ಕೂಡ ಸಾಧ್ಯವಿದೆ. ಇದನ್ನು ರಿಸರ್ವ್ ಬ್ಯಾಂಕ್ ಕೈಗೊಳ್ಳಬೇಕು. ಇಂತಹ ಅವಕಾಶ ಸ್ವಲ್ಪ ಸಮಯದಲ್ಲೇ ಒದಗಿಬರಬಹುದು."
>
> "ಆರ್ಥಿಕ ಬೆಳವಣಿಗೆ ಕುಂಠಿತಗೊಳ್ಳುತ್ತಲೇ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ದೌರ್ಬಲ್ಯ ಅನುತ್ಪಾದಕ ಸಾಲದ ಏರಿಕೆಯ ಮೂಲಕ ಬಹಿರಂಗಗೊಳ್ಳುತ್ತದೆ. ಆಗ ರಿಸರ್ವ್ ಬ್ಯಾಂಕ್ ಅವುಗಳ ಸಾಧನೆಯನ್ನು ಅತ್ಯಂತ ಕಟುವಾಗಿ ವಿಮರ್ಶಿಸಿ, ತಪ್ಪಾದರೂ ಸರಿಯೆ, ಕೆಲವು ಬ್ಯಾಂಕುಗಳನ್ನು ನಿರುಪಯುಕ್ತ ಸಂಸ್ಥೆಗಳೆಂದು ನಿರ್ಧರಿಸಬೇಕು. ಸರ್ಕಾರ ಈ ರೀತಿ ವಿಫಲಗೊಂಡ ಬ್ಯಾಂಕುಗಳನ್ನು ಉಳಿಸುವ ಸಲುವಾಗಿ ಹೊಸ ಬಂಡವಾಳ ಹೂಡಲು ಬಯಸಬಹುದು. ಈ ಘಟ್ಟದಲ್ಲೇ ರಿಸರ್ವ್ ಬ್ಯಾಂಕು ಬಿಗಿ ನೀತಿ ತಳೆದು ನಾಜೂಕಾಗಿರುವ ಆರ್ಥಿಕ ಪರಿಸ್ಥಿತಿಯಲ್ಲಿ ಈ ಬ್ಯಾಂಕುಗಳನ್ನು ಉಳಿಸಲಾಗಲೀ ಮತ್ತು ಈ ಬ್ಯಾಂಕುಗಳಿಗೆ ಬೇಕಾದ ಅತೀವ ಬೆಂಬಲಕ್ಕಾಗಿ ತೆರಬೇಕಾದ ಬೆಲೆಯನ್ನಾಗಲೀ ಭರಿಸಲು ಅಸಮರ್ಥವೆಂದು ಸರ್ಕಾರಕ್ಕೆ ಮನವರಿಕೆ ಮಾಡಿಕೊಡಬೇಕು. ಆರ್ಥಿಕತೆ ಹದಗೆಟ್ಟಂತೆಲ್ಲ ಡಾ॥ ರಾಜನ್ ಅವರ ಚೌಕಾಶಿಯ ಶಕ್ತಿ ಹೆಚ್ಚುತ್ತದೆ. ಇಂತಹ ಪರಿಸ್ಥಿತಿಯನ್ನು ಉಪಯೋಗಿಸಿಕೊಂಡು ಅವರು ಅಸಮರ್ಥ ಸಾರ್ವಜನಿಕ ಬ್ಯಾಂಕುಗಳ ಒಳ್ಳೆಯ ಭಾಗಗಳನ್ನು ಖಾಸಗಿಯವರಿಗೆ ವರ್ಗಾಯಿಸಿ ಅವುಗಳನ್ನು ಅಂತ್ಯಗೊಳಿಸಬಹುದು."
>
> "ಹಿಂದಿನ ಎರಡು ದಶಕಗಳ ಅನುಭವ ನಮಗೆ ಕಲಿಸಿಕೊಟ್ಟಿರುವ ಪಾಠವೆಂದರೆ, ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಗಾತ್ರ ಕಡಿಮೆ ಮಾಡುವವರೆಗೂ, ಖಾಸಗೀ ಬ್ಯಾಂಕುಗಳು ಬೆಳೆಯಲು ಸಾಧ್ಯವಿಲ್ಲ. ಈ ರೀತಿ ಕಿರುದುಗೊಳಿಸಬೇಕೆಂದರೆ ಅಸಮರ್ಥ ಸಾರ್ವಜನಿಕ ಬ್ಯಾಂಕುಗಳನ್ನು ವಿಫಲಗೊಳಿಸಲೇಬೇಕು. ಏಕೆಂದರೆ, ಸಮರ್ಥ ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳನ್ನು ಖಾಸಗೀಕರಿಸಲು ರಾಜಕೀಯ ಬಿಡುವುದಿಲ್ಲ. ವಿಜ್ಞಾನ ಒಮ್ಮೆಗೆ ಒಂದು ಉತ್ತರ ಕ್ರಿಯೆ ನಡೆಸಿ ಅಭಿವೃದ್ಧಿ ಹೊಂದಿದೆ ಎಂಬುದೊಂದು ಹೆಸರಾಂತ ಉಕ್ತಿ. ದುರದೃಷ್ಟವೆಂದರೆ ಭಾರತದ ಬ್ಯಾಂಕಿಂಗ್ ವ್ಯವಸ್ಥೆಯಲ್ಲಿ ಸುಧಾರಣೆ ತರಲು ಅದೊಂದೇ ನಿಜವಾದ ಮಾರ್ಗ ಕೂಡ."

ಸುಬ್ರಮಣ್ಯನ್ ಅವರ ಲೇಖನ, "ಭಾರತದ ಬ್ಯಾಂಕಿಂಗ್ – ಸಾವಿನೊಂದಿಗೆ ಸುಧಾರಣೆ" ಅತ್ಯಂತ ಸೂಕ್ತ ಶಿರೋನಾಮೆಯನ್ನು ಹೊಂದಿದೆ.

ಅವರ ಸಲಹೆಗಳು ಅವರ ಮಿದುಳಿನಿಂದ ಬಂದದ್ದಲ್ಲ ಎಂಬುದು ವಿದಿತ. ಅದು ವಿದೇಶಿ ಹಣಕಾಸು, ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ಮತ್ತು ಸರ್ಕಾರ ಕೂಡಿ ಯೋಚಿಸಿ ಆಯೋಜಿಸಿದ ಯೋಜನೆ. ಈ ದಿಕ್ಕಿನಲ್ಲಿ ಕಾರ್ಯಾಚರಣೆ ಶೀಘ್ರಗತಿಯಲ್ಲಿ ಸಾಗಿದೆ.

**ಸುಬ್ರಮಣ್ಯನ್ ಅವರ ಶಿಫಾರಸ್ಸು :** ಆರ್ಥಿಕ ಬೆಳವಣಿಗೆ ಕುಂಠಿತಗೊಳ್ಳುತ್ತಲೇ ಸಾರ್ವಜನಿಕ ಕ್ಷೇತ್ರ ಬ್ಯಾಂಕುಗಳ ದುರ್ಬಲತೆ ಅನುತ್ಪಾದಕ ಸಾಲದ ಏರಿಕೆಯ ಮೂಲಕ ಬಹಿರಂಗಗೊಳ್ಳುತ್ತದೆ. ಆಗ ರಿಸರ್ವ್ ಬ್ಯಾಂಕ್ ಅವುಗಳ ಸಾಧನೆಯನ್ನು ಅತ್ಯಂತ ಕಟುವಾಗ ವಿಮರ್ಶಿಸಿ, ಅದು ತಪ್ಪಾದರೂ ಸರಿಯೇ, ಕೆಲವು ಬ್ಯಾಂಕುಗಳು ವ್ಯಾವಹಾರಿಕವಾಗಿ ನಿರುಪಯುಕ್ತ ಸಂಸ್ಥೆಗಳೆಂದು ಘೋಷಿಸಬೇಕು.

ಕಾರ್ಯಕ್ರಮ : ಮೇ ೨೦೧೪ರಲ್ಲಿ ರಿಸರ್ವ್ ಬ್ಯಾಂಕ್ ಆಫ್ ಇಂಡಿಯ ನೇಮಕ ಮಾಡಿದ ನಾಯಕ್ ಸಮಿತಿ (ಇದರ ಬಗ್ಗೆ ಈ ಹಿಂದೆ ಪ್ರಸ್ತಾಪಿಸಲಾಗಿದೆ) ತನ್ನ ವರದಿಯಲ್ಲಿ ಅನಿಷ್ಟ ರೀತಿಯಲ್ಲಿ ಹೀಗೆ ಪ್ರಸ್ತಾಪಿಸಿದೆ : "ಸಾರ್ವಜನಿಕ ಬ್ಯಾಂಕುಗಳ ಹಣಕಾಸಿನ ಪರಿಸ್ಥಿತಿ ಬಹಳ ದುರ್ಬಲವಾಗಿದೆ. ಭಾಗಶಃ ನಿಯಂತ್ರಿತ ಕಷ್ಟಸಹಿಷ್ಣುತೆಯಿಂದ ಗೋಪ್ಯವಾಗಿಡಲಾಗಿದೆ." ಅಂದರೆ, ರಿಸರ್ವ್ ಬ್ಯಾಂಕ್‌ನ ಉದಾರ ನೀತಿಯೇ ಅವುಗಳನ್ನು ಜೀವಂತವಾಗಿರಿಸಿದೆ ಎಂದರ್ಥ. ಈ ರೀತಿಯ ಹೇಳಿಕೆ ಬ್ಯಾಂಕುಗಳ ಬಗ್ಗೆ ಸಾರ್ವಜನಿಕರಲ್ಲಿ ಆತಂಕ ಹುಟ್ಟಿಸುವ ಉದ್ದೇಶದಿಂದ ಮಾಡಲಾಗಿದೆ. ಆದರೆ ವಸ್ತುಸ್ಥಿತಿಯೆಂದರೆ, ಹಿಂದಿನ ಸರ್ಕಾರ ಸಾರ್ವಜನಿಕ ಕ್ಷೇತ್ರ ಬ್ಯಾಂಕುಗಳಿಗೆ ನೀಡುತ್ತಿದ್ದ ಬೆಂಬಲ ಅಂತಹ ಭಯವನ್ನು ಆಧಾರರಹಿತವಾಗಿಸಿತ್ತು. ಆದ್ದರಿಂದ ಬ್ಯಾಂಕುಗಳಿಗೆ ಸರ್ಕಾರ ಇನ್ನು ಮುಂದೆ ಬೆಂಬಲ ನೀಡುವುದಿಲ್ಲವೆಂದು ಹೇಳುವುದರ ಮೂಲಕ ಹಾಗೆ ಆತಂಕವನ್ನು ಸೃಷ್ಟಿಸಲು ಸಾಧ್ಯ.

**ಸುಬ್ರಮಣ್ಯನ್ ಅವರ ಶಿಫಾರಸ್ಸು :** "ಕಷ್ಟದಲ್ಲಿರುವ ಸಾರ್ವಜನಿಕ ಕ್ಷೇತ್ರ ಬ್ಯಾಂಕುಗಳಲ್ಲಿ ಹೊಸ ಬಂಡವಾಳ ಹೂಡಬಾರದು. ಅದರ ಬದಲು ಈಗಿರುವ ಆರ್ಥಿಕ ಬಿಕ್ಕಟ್ಟನ್ನು ನೆಪಮಾಡಿಕೊಂಡು, ಸಾರ್ವಜನಿಕ ಕ್ಷೇತ್ರವನ್ನು ಕಿರಿದುಗೊಳಿಸಿ, ಅವುಗಳ ಒಳ್ಳೆಯ ಭಾಗಗಳನ್ನು ಖಾಸಗಿ ಕ್ಷೇತ್ರಕ್ಕೆ ವರ್ಗಾಯಿಸಬೇಕು."

ಕಾರ್ಯಕ್ರಮ : ಮೋದಿ ಸರ್ಕಾರ ಬ್ಯಾಂಕುಗಳಿಗೆ ಬಂಡವಾಳ ನೀಡದೆ ಉಪವಾಸ ಕೆಡವಿದ್ದು ಮಾತ್ರವಲ್ಲ, ಆಯ್ಕೆಯ ಆಧಾರದ ಮೇಲೆ ಪುನರ್ ಬಂಡವಾಳೀಕರಣ ಮಾಡಿದೆ. ಅರ್ಧದಷ್ಟು ಸಾರ್ವಜನಿಕ ಕ್ಷೇತ್ರದ ಬ್ಯಾಂಕುಗಳ ಮಾರುಕಟ್ಟೆ ಪಾಲನ್ನು ಕಿರಿದುಗೊಳಿಸಿರುವುದಲ್ಲದೆ, ಈ ಬ್ಯಾಂಕುಗಳು ನಿರ್ಗಮಿಸುವ ಹಾದಿಯಲ್ಲಿವೆ. ಅವು ಬೇರೆಯವರ ಪಾಲಾಗುವ ಎಲ್ಲ ಸೂಚನೆಗಳೂ ಇವೆ.

ಪ್ರಭುತ್ವವನ್ನು ಟೀಕಿಸುವುದನ್ನು ಬಹಳಷ್ಟು ಸಲ "ಪಿತೂರಿ" ಎಂಬ ಚಮತ್ಕಾರಕ ಪದಸಂಯೋಜನೆ ಮಾಡಿ, ಒಂದು ಬಾರಿ ಹಾಗೆ ಕರೆದಲ್ಲಿ ಪ್ರಭುತ್ವ ತನ್ನಮೇಲೆ ಮಾಡಿದ ಟೀಕೆಯನ್ನು ಅಲ್ಲಗಳೆಯಬೇಕಾದ ಅಗತ್ಯವಿಲ್ಲ. ಆದರೆ ಈ ಪ್ರಕರಣದಲ್ಲಿ ಅಧಿಕಾರದಲ್ಲಿರುವವರೇ ಪಿತೂರಿಯ ಬಗ್ಗೆ ಸ್ಪಷ್ಟವಾಗಿ ಉದ್ಗರಿಸಿದ್ದಾರೆ. ಹಾಗಾಗಿ ವಿಮರ್ಶಕರು ಯಾವ ಹೊಸ ವಾದವನ್ನೂ ಮುಂದಿಡಬೇಕಾದ ಅಗತ್ಯವಿಲ್ಲ.

---

ಮೂಲ : **ಆ್ಯಸ್ಪೆಕ್ಟ್ಸ್ ಆಫ್ ಇಂಡಿಯನ್ ಎಕಾನಮಿ**

ನಂ. ೬೧, ರಿಸರ್ಚ್ ಯೂನಿಟ್ ಆಫ್ ಪೊಲಿಟಿಕಲ್ ಎಕಾನಮಿ

ಅನುವಾದ : **ಮುರಳಿಧರ ಚಿಕ್ಕಮಗಳೂರು**

ವಕೀಲರು, ನಂ. ೩, ಎರಡನೇ ಮಹಡಿ, ವಿ. ವಿ. ಪುರಂ, ಬೆಂಗಳೂರು – ೫೬೦ ೦೦೪

---

# ಮನ್ವಂತರ

ಪಿ. ಎಸ್. ಕೃಷ್ಣಮೂರ್ತಿ



ತಿಂಗಳ ಕಥೆ

**“ಯಾರು ? ಏನಾಯ್ತು ? ಯಾಕೆ ಅಳುವುದು ?” ಗುಡ್ಡ ಏರಿ ಬಂದ ಆಯಾಸದಲ್ಲಿ ಏದುಸಿರು ಬಿಡುತ್ತ ಕೇಳಿದರು ವೆಂಕಪ್ಪಜ್ಜ. ಹೆಂಗಸಿನಿಂದ ಉತ್ತರ ಬರಲೇ ಇಲ್ಲ. ಮತ್ತೆ ಅಳು. “ಏ ನಿನ್ನನ್ನೇ ಕೇಳುದು. ಇಲ್ಲಿ ಕೂತು ಏನು ಮಾಡ್ತಾ ಇದ್ದೀಯ ? ಅಳುದು ಯಾಕೇಂತ ?” ವೆಂಕಪ್ಪಜ್ಜ ಮತ್ತೆ ದನಿ ಎತ್ತರಿಸಿ ಕೇಳಿದರು. ಹೆಂಗಸು ಉತ್ತರಿಸದೆ ತಲೆ ಎತ್ತಿ ತೀಕ್ಷ್ಣ ನೋಟ ಬೀರಿದಳು. ಆ ನೋಟದಲ್ಲಿ ಬೆಂಕಿಯಿತ್ತು. ನೋವಿತ್ತು. ತಿರಸ್ಕಾರವಿತ್ತು. ವೆಂಕಪ್ಪಜ್ಜ ಸ್ವಲ್ಪ ಹೆದರಿ ಹಿಂದೆ ಸರಿದರು. ಆ ಹೆಂಗಸು ಮತ್ತೆ ಅಳು ಮುಂದುವರಿಸಿದಳು. ವೆಂಕಪ್ಪಜ್ಜನಿಗೆ ಫಕ್ಕನೆ ಪರಿಸರ ಬೋಧ ಬಂತು. ಈ ರಾತ್ರಿ ಇಷ್ಟು ಹೊತ್ತಿನಲ್ಲಿ ಬಂದದ್ದೆ ತಪ್ಪಾಯ್ತು. ರಂಜನನಿಗಾದರೂ ಹೇಳಬೇಕಿತ್ತು. ಇನ್ನು ಬೇಗ ಮನೆಗೆ ಮುಟ್ಟಿದರೆ ಸಾಕು. ವೆಂಕಪ್ಪಜ್ಜ ನಡುಗುವ ಕಾಲಲ್ಲಿ ಇಳಿಯಲು ಹೆಜ್ಜೆ ಊರಿದರು. ಜೊತೆಗೆ ಅಸಾಧ್ಯ ಧಗೆ, ಬಾಯಾರಿಕೆ, ಕೆಳಗೆ ಹೆಜ್ಜೆ ಊರಿದವರ ಕಾಲು ಮರಳಲ್ಲಿ ಹೂತುಹೋಯಿತು. ಅರೆ ? ಇಲ್ಲಿ ಎಲ್ಲಿಂದ ಹೊಯ್ಗೆ ಬಂದು ತುಂಬಿದೆ ? ಇನ್ನೊಂದು ಹೆಜ್ಜೆಯಿಟ್ಟರೆ ಅಲ್ಲೂ ಮರಳು. ಕಣ್ಣು ಕಿರಿದು ಮಾಡಿ ನೋಡಿದರೆ ಸುತ್ತಲೂ ಬರೀ ಮರಳು. ಅರೆ ! ಈಗ ಅಳು, ಹಸಿ ವಾಸನೆ ಎರಡೂ ನಿಂತು ಬಿಟ್ಟಿತಲ್ಲಾ ? ತಿರುಗಿ ನೋಡಿದರೆ ಹೆಂಗಸು ಕಾಣಲೇ ಇಲ್ಲ ! ಮನೆಯಿದ್ದ ಜಾಗದಲ್ಲೂ ಮರಳು. ನೋಟ ತಲುಪಿದಲ್ಲೆಲ್ಲಾ ಬರೀ ಮರಳು.**



“ಇದ. ಕಾಫಿ ಇಲ್ಲಿ ಮಡಗಿದ್ದೆ. ಮತ್ತೆ. ಆ ಮರ ಕಡಿವ ಅಬ್ದುಲ್ಲ ಮತ್ತೆ ಫೋನ್ ಮಾಡಿದ್ದಾನೆ. ರಂಜನ ಹೇಳ್ತಾ ಇದ್ದ ಬೆಳಗ್ಗೆ.” ಬೆಳಗ್ಗಿನ ತೋಟದ ಸುತ್ತಾಟ ಮುಗಿಸಿ ಚಾವಡಿಗೆ ಬಂದು ಕುಳಿತ ವೆಂಕಪ್ಪಜ್ಜನ ಮುಂದೆ ಕಾಫಿ ಇರಿಸುತ್ತಾ ಹೇಳಿದರು ಸಾವಿತ್ರಿ. ವೆಂಕಪ್ಪಜ್ಜ ಏನೂ ಮಾತಾಡದೆ ಮೌನವಾಗಿ ಕಾಫಿ ಗ್ಲಾಸು ಕೈಯಲ್ಲಿ ಹಿಡಿದು ಚಿಂತಾಧೀನರಾಗಿ ಕುಳಿತರು.

ಆನು ನಿಂಗಳತ್ರೆ ಕೇಳಿ ಮುಂದುವರಿಸಲಕ್ಕೂ ಹೇಳಿದ್ದೆ. ಏನು ಮಾಡಬೇಕು ಕೇಳ್ತಾ ಇದ್ದ ಕೆಲಸಕ್ಕೆ ಹೋಗುವ ಮೊದಲು. “ಅಬ್ದುಲ್ಲ ಒಂದು ಲಕ್ಷಕ್ಕೆ ತಕ್ಕೊಳ್ತಾನಂತೆ” ಎಂದು ಸಾವಿತ್ರಿ ಅಲ್ಲೇ ಒಳಕೋಣೆಯಲ್ಲಿ ಟಿ.ವಿ. ಹಾಕುತ್ತಾ ಮತ್ತೆ ಹೇಳಿದರು. ನಿಧಾನವಾಗಿ ಕಾಫಿ ಹೀರುತ್ತಿದ್ದ ವೆಂಕಪ್ಪಜ್ಜ ಅದಕ್ಕೂ ಮಾತಾಡಲಿಲ್ಲ. ಇದು ಮೂರನೇ ಸಲ ಸಾವಿತ್ರಿ ವೆಂಕಪ್ಪಜ್ಜನಿಗೆ ಹೇಳ್ತಾ ಮಾರುವುದಕ್ಕೇ ಮಗನ ಈ ವರಾತ ಎಂದು ವೆಂಕಪ್ಪಜ್ಜನಿಗೆ ಗೊತ್ತು. ಅಲ್ಲಿ ರಬ್ಬರ್ ಗಿಡ ನಡಿಸ್ತಾನಂತೆ. ಈಗ ರಬ್ಬರಿಗೆ ಒಳ್ಳೆ ರೇಟು ಉಂಟಲ್ಲ ? ನೂರು ಗಿಡ ನೆಡಿಸಿದ್ರೆ ಆರು–ಏಳು ವರ್ಷ ಕಳೆಯುವಾಗ ಹಾಲು ಸಿಗಲು ಆರಂಭವಾಗುತ್ತೆ ಎಂದು ರಂಜನನ ಲೆಕ್ಕಾಚಾರ. ರಬ್ಬರಿಗೆ ಕೆಲಸವೂ ಕಡಿಮೆಯಂತೆ. ಅಡಿಕೆಯಷ್ಟು ಕಿರಿಕಿರಿ ಇಲ್ಲ. ಒಂದು ಕಿಲೋ ಅಡಿಕೆ ಮಾರುವ ಮೊದಲು ಅದೆಷ್ಟು ಕೆಲಸ ? ಮರಕ್ಕೆ ಮದ್ದು ಸಿಂಪಡಿಸುವುದು, ಕೊಯ್ಯುವುದು, ಒಣಗಿಸುವುದು, ಮಳೆ ಬಂದಾಗ ಎಲ್ಲ ಬಾಚಿ ಒಳಗಿಡುವುದು, ಬಿಸಿಲು ಬಂದಾಗ ಮತ್ತೆ ಹೊರಗೆ ಹಾಕುವುದು, ಹೊರಗಿನ ಸಿಪ್ಪೆ ತೆಗೆಯುವುದು ಎಲ್ಲವೂ ವರ್ಷ ಪೂರ್ತಿ ಕೆಲಸ. ಈಗಂತೂ ಕೆಲಸದವರ ಮಜೂರಿ ದಿನಕ್ಕೆ ಮುನ್ನೂರು ದಾಟಿದೆ. ಕೊಟ್ಟರೂ ಜನ ಸಿಗುವುದು ಕಷ್ಟ.

ಇಷ್ಟೆಲ್ಲಾ ಇದ್ದರೂ ಮರ ಕಡಿದು ಮಾರುವುದಕ್ಕೆ ವೆಂಕಪ್ಪಜ್ಜನಿಗೆ ಒಂದು ಚೂರು ಇಷ್ಟ ಇಲ್ಲ. ಸಾವಿತ್ರಿಯ ಪ್ರಶ್ನೆಗೆ ಉತ್ತರ ಕೊಡದೆ “ಇದ. ಗ್ಲಾಸು ಇಲ್ಲಿ ಮಡಗಿದ್ದೆ” ಎಂದಷ್ಟೆ ಹೇಳಿ ಮತ್ತೆ ಅಂಗಳಕ್ಕೆ ಇಳಿದವರು ಒಂದು ಕ್ಷಣ ಕತ್ತೆತ್ತಿ ಮನೆಯ ಹಿಂದಿನ ಗುಡ್ಡದ ಕಡೆಗೆ ದೃಷ್ಟಿ ಹಾಯಿಸಿದರು. ಗುಡ್ಡೆ ಇದ್ದದ್ದು ಮುಕ್ಕಾಲು ಎಕರೆ, ಅಷ್ಟೆ. ಮನೆಯ ಹಿಂದಿನ ಬದಿ ಮಣ್ಣಿನ ಮಾರ್ಗ, ನಂತರ ಇಳಿಜಾರದ ಗುಡ್ಡೆ. ಮನೆಯ ಎದುರು ಒಂದೆಕರೆ ಅಡಿಕೆ ತೋಟ. ರಂಜನನಿಗೆ ಅನುದಾನಿತ ಶಾಲೆಯಲ್ಲಿ ಟೀಚರ್ ಕೆಲಸ ಸಿಕ್ಕಿದ ಕಾರಣ ಬಚವಾಯ್ತು. ಇಲ್ಲದಿದ್ದರೆ ಬರೀ ಅಡಿಕೆಯಲ್ಲಿ ಎಂತ ಆಗ್ತದೆ?

ವೆಂಕಪ್ಪಜ್ಜನ ಗುಡ್ಡೆಗೆ ತಾಗಿಕೊಂಡಿರುವುದೇ ಹತ್ತಿರದ ಮನೆಯ ರಾಮಣ್ಣನ ಮನೆಯ ಗುಡ್ಡ. ಅಲ್ಲಿಯ ಮರಗಳನ್ನೆಲ್ಲಾ ಮಾರಿ ಸುಮಾರು ಎರಡು ವರ್ಷ ಹತ್ತಿರಕ್ಕೆ ಬಂದಿರಬೇಕು. ಬರೀ ಬೋಳು ಬೋಳು. ಅಲ್ಲಲ್ಲಿ ಕೆಲವು ಉಪ್ಪಳಿಕನ ಗಿಡಗಳು ಈಗಷ್ಟೇ ತಲೆ ಎತ್ತಿ ನಿಂತಿವೆ. ವೆಂಕಪ್ಪಜ್ಜನ ಗುಡ್ಡ ಮಾತ್ರ ಹಸಿರಲ್ಲಿ ನಳನಳಿಸುತ್ತಿದೆ. ಎಷ್ಟೆಲ್ಲಾ ಜಾತಿಯ ಮರಗಳು ? ಗೇರುಬೀಜ, ರೆಂಜೆ, ಅತ್ತಿ, ಮಾವು, ಒಂದೆರಡು ಗಂಧದ ಮರ ಕೂಡ ಇದ್ದ ಹಾಗೆ ನೆನಪು. ಎಲ್ಲವೂ ವೆಂಕಪ್ಪಜ್ಜ ಸಣ್ಣ

ಪ್ರಾಯದಲ್ಲಿ ನೆಟ್ಟು ಬೆಳೆಸಿದ್ದು. ಇಷ್ಟು ವರ್ಷದಲ್ಲಿ ಎಲ್ಲವೂ ಉದ್ದುದ್ದ ಬೆಳೆದು ನಿಂತಿವೆ. ಸುತ್ತಲೂ ಹಸಿರು. ಇದನ್ನು ಕಡಿದು ಮಾರಲಿಕ್ಕಾದರೂ ಹೇಗೆ ಮನಸ್ಸು ಬಂತು ಅವನಿಗೆ ? ವೆಂಕಪ್ಪಜ್ಜ ದೀರ್ಘ ನಿಶ್ವಾಸದಿಂದ ಎರಡು ಹೆಜ್ಜೆ ಮುಂದೆ ಹೋದವರೇ ಸಂತೋಷದಿಂದ ಕೂಗು ಹಾಕಿದರು, "ಏ ಒಪ್ಪಕ್ಕ. ಏನು ವಿಶೇಷ ?" ಅಷ್ಟರಲ್ಲೇ ಒಪ್ಪಕ್ಕ ನಗುಮುಖದಿಂದ ಅಂಗಳ ದಾಟಿ ಬರ ಬರ ಬಂದರು. "ಏನು ಅತ್ತಿಗೆ ? ಕುತ್ಕೊಳ್ಳಿ. ಆಸರಿಂಗೆ ತತ್ತೆ." ಒಳಮನೆಯಿಂದ ಟಿ.ವಿ. ಆಫ್ ಮಾಡಿ ಬಂದ ಸಾವಿತ್ರಿ ಹೇಳಿದರು. "ಈಗ ಬರೀ ನೀರು ಸಾಕು." ಎಂದು ಒಪ್ಪಕ್ಕ ಕೈ ಕಾಲು ತೊಳೆದು ಬಂದರು. ವೆಂಕಪ್ಪಜ್ಜನ ಒಬ್ಬರೇ ತಂಗಿ, ಸರಸ್ವತಿ, ಆದರೆ ಎಲ್ಲರ ಬಾಯಲ್ಲಿ ಒಪ್ಪಕ್ಕ ಆಗಿದ್ದರು. "ನಾನು ಒಂದು ಸಲ ಇಲ್ಲಿ ದೇವಸ್ಥಾನಕ್ಕೆ ಬಂದ್ದು." ಎಂದು ಒಪ್ಪಕ್ಕ ಆರಾಮವಾಗಿ ಮಾತಿಗೆ ಕೂತರು. "ಕಾರ್ತಿಕಂಗೆ ಎಲ್ಲಿಯಾರು ಕೂಸು ಸಿಕ್ಕಿತ್ತೋ ?" ವೆಂಕಪ್ಪಜ್ಜ ಕೇಳಿದರು. "ಎಲ್ಲಿ ಸಿಗ್ತದೇ ?" ಒಪ್ಪಕ್ಕ ಅಸಹನೆ, ಕೋಪ, ನಿರಾಸೆ ಎಲ್ಲ ಬೆರೆತ ಸ್ವರದಲ್ಲಿ ಹೇಳಿದರು. ಒಪ್ಪಕ್ಕನ ಒಬ್ಬನೇ ಮಗ ಕಾರ್ತಿಕನಿಗೆ ಮದುವೆಗೆ ಹುಡುಗಿ ನೋಡುವುದು ಒಂದು ವರ್ಷದ ಮೇಲೆ ಆಗಿತ್ತು. ಇನ್ನೂ ಸಿಗ್ಲಿಲ್ಲ. "ಈಗ ಬೇಗ ಸಿಕ್ಕುತ್ತಿಲ್ಲೆ. ಬೆಂಗ್ಲೂರಿನಲ್ಲಿದ್ದಾನೆ, ಒಳ್ಳೆ ಕೆಲಸ ಅಂದ್ರೂ ಅಷ್ಟು ಬೇಗ ಜಾತಕದಲ್ಲಿ ಸೇರಬೇಕಲ್ಲಾ. ಈಗ ನಮ್ಮದಲ್ಲಿ ಕೂಸುಗೊ ಎಲ್ಲದ್ದವು ? ಇರುವವರೂ ಅಷ್ಟು ಬೇಗ ಎಲ್ಲಿ ಒಪ್ತಾರೆ ? ನೋಡುವ. ಯೋಗ ಇದ್ದ ಹಾಗೆ ಆಗ್ತದೆ. ಒಪ್ಪಕ್ಕ ನಿಟ್ಟುಸಿರು ಬಿಟ್ಟರು. "ಮತ್ತೆ ನಮ್ಮ ನೆರೆಯ ಮೂರ್ತಿ ಗೊತ್ತುಂಟಲ್ಲಾ ? ಅವನ ಮಗ ಭಾಸ್ಕರ. ಮೊನ್ನೆ ಮದುವೆ ಆಯಿತಷ್ಟೇ. ಬಂಟರ ಹುಡುಗಿ. ಮತ್ತೆಂತ ಮಾಡ್ಲಿಕ್ಕೆ ಆಗ್ತೆ ? ಅವನು ಅಡಿಕೆ ತೋಟ ನೋಡಿಕೊಳ್ಳುವುದಲ್ಲಾ ? ವರ್ಷ ನಲುವತ್ತು ಕಳೆದ್ರೂ ಸಿಗದಿದ್ದರೆ ಮತ್ತೆಂತ ಮಾಡುವುದು ? ಆದರೂ ಹುಡುಗಿ ಒಳ್ಳೆ ಗುಣದವಳು" ಒಪ್ಪಕ್ಕ ಹೇಳಿದರು. "ಈಗಿನ ಕೃಷಿಕರು, ಅಡಿಗೆ ಕೆಲಸಕ್ಕೆ ಹೋಗುವವರು, ಪೌರೋಹಿತ್ಯದವರು, ಇವರಿಗೆಲ್ಲಾ ಕೂಸು ಸಿಗುವುದು ಕಷ್ಟ. ಅವರೆಲ್ಲ ಆಧುನಿಕ ಅಸ್ಪೃಶ್ಯರ ಹಾಗೆ ಅಲ್ವ ?" ವೆಂಕಪ್ಪಜ್ಜ ವ್ಯಥೆಯಿಂದ ಹೇಳಿದರು.

"ನಾನು ರೋಡಿನಿಂದ ಈಚೆಗೆ ತಿರುಗುವಾಗ ಎದುರಿನಿಂದ ಒಂದು ಬೈಕು ಹೋಗುದು ನೋಡಿದೆ. ಬೈಕಿನವನನ್ನು ನೋಡಿದರೆ ಈ ಕಡೆಯವರ ಹಾಗೆ ಕಾಣುದಿಲ್ಲ. ಓ. ರಾಮಣ್ಣನ ಜಾಗ ತಗೊಂಡವರಾ ?" ಸಾವಿತ್ರಿ ತಂದ ಕಾಫಿ, ಉಂಡ್ಳಕಾಳು ಸವಿಯುತ್ತಾ ಕೇಳಿದರು ಒಪ್ಪಕ್ಕ. "ಹೌದು. ಅವರು ತೆಂಕ್ಲಾಗಿಯಾಣ ಕ್ರಿಶ್ತಿಯಾನ್ ಅಲ್ವಾ ? ಈಗ ಈ ಕಡೆಗೂ ಬಂದಿದ್ದಾರೆ" ಸಾವಿತ್ರಿ ಹೇಳಿದರು. ನೆರೆಯ ರಾಮಣ್ಣ ಜಾಗೆ ಮಾರಿ ಬೆಂಗಳೂರಿನ ಮಗನ ಮನೆಗೆ ಹೋಗಿ ಎರಡು ವರ್ಷ ಕಳೆದಿತ್ತು. ಆದರೂ ಈಗಲೂ ರಾಮಣ್ಣನ ಜಾಗೆ ಎಂಬ ಪ್ರಯೋಗ ಮಾತ್ರ ಹೋಗಿಲ್ಲ. ತಗೊಂಡವರು ಕಣ್ಣನ್ನೂರಿನ ಕಡೆಯ ಕ್ರಿಶ್ತಿಯನ್ನರು, ಈಗ ಅಡಿಕೆ ತೋಟಕ್ಕೆ ದೊಡ್ಡ ಡಿಮಾಂಡ್ ಏನೂ ಇಲ್ಲ.

"ವೆಂಕಪ್ಪ, ನೀನು ಪುಣ್ಯ ಮಾಡಿದ್ದೆ. ರಂಜನ ಇಲ್ಲೇ ಇದ್ದದ್ದು ಎಷ್ಟು ಒಳ್ಳೇದಾಯ್ತು ? ಈ ಪ್ರಾಯಲ್ಲಿ ಬೆಂಗಳೂರಿಗೆ ಹೋಗಿ ಎಂತ ಮಾಡ್ಲೆ ? ಇಲ್ಲಿ ಆದ್ರೆ ತೋಟಕ್ಕೆ ಒಂದು ಸುತ್ತು ಹಾಕಿ, ಸಂಜೆ ಪೇಟೆಗೆ ಹೋಗಿ ಬಂದರೆ ಎಷ್ಟು ಸಮಾಧಾನ ಆಗ್ತದೆ ?" ಹೊರಡುವ ಮುಂಚಿನ ದಿನ ರಾಮಣ್ಣ ಹೇಳಿದ ಮಾತು ವೆಂಕಪ್ಪಜ್ಜನ ಕಿವಿಯಲ್ಲಿ ಈಗಲೂ ಗುಯಿಗುಟ್ಟುತ್ತಿದೆ. ರಾಮಣ್ಣ ಮಾತ್ರ ಅಲ್ಲ, ಇನ್ನೂ ಕೆಲವರು ನೆರೆಕರೆಯವರು ಜಾಗ ಮಾರಿ ಬೆಂಗಳೂರು, ಮಂಗಳೂರು ಎಂದೆಲ್ಲ ಹೋಗಿಯಾಗಿದೆ. ಜಾಗ ಕ್ರಯಕ್ಕೆ ತೆಗೆದುಕೊಂಡವರಲ್ಲಿ ಹೆಚ್ಚಿನವರು ಕಣ್ಣನ್ನೂರಿನ, ಪಯ್ಯನ್ನೂರಿನ ಕಡೆಯ ಕ್ರಿಶ್ತಿಯನ್ನರು, ಪೇಟೆಯಲ್ಲಿ ಈಗ ಅವರ ಇಗರ್ಜಿ ಕೂಡ ದೊಡ್ಡದಾಗಿತ್ತು. ಅದೂ ಇದೂ ಮಾತಾಡಿ ಒಪ್ಪಕ್ಕ ಸಂಜೆ ಹೊರಟರು.

"ಅಪ್ಪಾ, ಎಂತ ಮಾಡೆಕು ? ಮರ ಒಟ್ಟು ಕೊಡ್ತಲ್ಲದೋ ? ಬೀಜದ ಮರದಲ್ಲೆಲ್ಲ ಈಗ ಬೀಜ ಆಗುವುದೂ ಇಲ್ಲ. ಒಟ್ಟು ಒಂದು ಲಕ್ಷ ಸಿಕ್ಕುಗು." ರಂಜನ ರಾತ್ರಿ ಊಟ ಮಾಡುವಾಗ ಮತ್ತೆ ಹೇಳಿದ. "ರಬ್ಬರ್ ಎಲ್ಲ ನಮಗೆ ಕಷ್ಟ ಅಲ್ವ ? ಅದನ್ನು ನೋಡ್ಲಿಕ್ಕೆ ಒಬ್ಬ ಜನ ಬೇಕು. ನಮಗೆ ಅದರ ವಿಷಯ ಸೀರೆ ಗೊತ್ತೂ ಇಲ್ಲ." ವೆಂಕಪ್ಪಜ್ಜ ಮತ್ತೂ ಏನೂ ಹೇಳಲು ಹೊರಟರು. "ನಮ್ಮಿಂದ ಆಗದೆ ಏನೂ ? ಮನಸ್ಸು ಮಾಡಿದ್ರೆ ಎಲ್ಲಾ ಆಗ್ತದೆ. ಇನ್ನು ಬೇರೆ ಯೋಚನೆ ಮಾಡ್ಲೆ ಎಂತ ಇಲ್ಲೆ." ರಂಜನ ಖಡಾಖಡಿ ಹೇಳಿದ. ವೆಂಕಪ್ಪಜ್ಜ ಮಾತಿಲ್ಲದೆ ಕುಳಿತರು. ತನ್ನ ಅಧಿಕಾರ ಮುಗಿದುಹೋಗಿದೆ, ದೇಹ ಮುದಿಯಾಗಿದೆ, ಇನ್ನು ಒಂದು ಘಟನೆ ಮಾತ್ರ ಬಾಕಿ, "ಆತು. ಹಾಗಾದ್ರೆ ಹಾಗೆ" ವೆಂಕಪ್ಪಜ್ಜ ಊಟ ಮುಗಿಸಿ ಸೋತ ನಡಿಗೆಯಲ್ಲಿ ಎದ್ದು ಹೋದರು.

ಮರುದಿನವೇ ಅಬ್ದುಲ್ಲ ಬಂದ, ಜೊತೆಗೆ ನಾಲ್ಕು ಜನರು ಕೂಡ ಇದ್ದರು. ಮರ ಸಿಗಿಯಲು ಯಂತ್ರ. ಆದರೂ ಎಲ್ಲ ಮರ ಕಡಿಯಬೇಕಾದ್ರೆ ಎರಡು ಮೂರು ದಿನವಾದರೂ ಬೇಕಿತ್ತು. ವೆಂಕಪ್ಪಜ್ಜ ಹಗಲಿಡೀ ಅಂಗಳಕ್ಕೆ ಇಳಿಯಲೇ ಇಲ್ಲ. ಒಂದೊಂದು ಮರವೂ ಮುರಿದು ಬೀಳುವ ಸದ್ದು ಸಣ್ಣದಾಗಿ ಜಗಲಿಗೆ ಬಡಿಯುತ್ತಿತ್ತು. ನಡುನಡುವೆ ಲಾರಿ ಬಂದ ದಿಮ್ಮಿಗಳನ್ನು ತುಂಬಿಸಿ ಹೋಗುವ ಸದ್ದು. ಪ್ರತಿ ಮರ ಧರೆಗುರುಳಿದಾಗಲೂ ವೆಂಕಪ್ಪಜ್ಜನ ಮನಸಲ್ಲಿ ಸಂಕಟ. ಸಂಜೆ ಹೊತ್ತಿಗೆ ಮನಸ್ಸು ತಾಳಲಾರದೆ ಅಂಗಳಕ್ಕೆ ಇಳಿದವರು ಗುಡ್ಡೆ ಕಡೆಗೆ ನೋಡಿದರು. ಮೊದಲ ದಿನದ ಕೆಲಸ ಮುಗಿಸಿ ಅಬ್ದುಲ್ಲ ಹೋಗಿಯಾಗಿತ್ತು. ಗುಡ್ಡದ ಹೆಚ್ಚು ಕಡಿಮೆ ಅರ್ಧಾಂಶ ಬೋಳಾಗಿತ್ತು. ಮತ್ತೆ ಕೆಲವು ರೆಂಬೆ ಕೊಂಬೆ ಇಲ್ಲದೆ ಬೆತ್ತಲಾಗಿ ನಿಂತಿದ್ದವು, ನಾಳೆಯ ಕ್ಷಣಗಣನೆಯೊಂದಿಗೆ. ಅಬ್ದುಲ್ಲ ಸಣ್ಣ ಸಣ್ಣ ಗಿಡಗಳನ್ನೂ ಬಿಟ್ಟಿರಲಿಲ್ಲ. ವೆಂಕಪ್ಪಜ್ಜ ನೋಡಲಾರದೆ ಒಳ ಬಂದರು. ರಾತ್ರಿ ನಿದ್ದೆಯಿಲ್ಲದೆ ಹೊರಳಾಡಿದರು. ಕಣ್ಣ ತುಂಬ ಹಳೆಯ ನೆನಪು, ಎಲ್ಲಿಂದೆಲ್ಲಿಂದಲೋ ಗಿಡ ತಂದು ನೆಟ್ಟಿದ್ದು, ನೀರು ಹಾಕಿದ್ದು, ಗೇರು ಮರದಲ್ಲಿ ಮೊದಲು ಫಸಲು ಬಂದಾಗ ಮನ ತುಂಬಿದ್ದು, ಮಾವಿನ ಮರದ ಮಿಡಿ ಉಪ್ಪಿನಕಾಯಿ ಹಾಕಿದ್ದು... ಎಲ್ಲ ಅರೆಮಂಪರಲ್ಲಿ ತೇಲಿ ಬಂದ ನೆನಪು. ಯಾರೋ ಅಳುವ ಸದ್ದು ಕೇಳಿ ಬಂದ ನೆನಪು.

"ಅಮ್ಮಾ. ಕೂ ಕೂ ಪಕ್ಷಿಯ ಸ್ವರ ಕೇಳುದೇ ಇಲ್ಲ. ಎಲ್ಲಿ ಹೋಯ್ತು ?" ಮರುದಿನ ಶಾಲೆಗೆ ಹೊರಡುವ ಗಡಿಬಿಡಿಯಲ್ಲಿದ್ದ ಶಶಾಂಕ ಅಂಗಳಕ್ಕೆ ಇಳಿಯುತ್ತಾ ಕೇಳಿದ. ಹೌದಲ್ಲ ? ಅಲ್ಲೇ ಜಗಲಿಯಲ್ಲಿ ಕೂತಿದ್ದ ವೆಂಕಪ್ಪಜ್ಜನೂ ಅಂದುಕೊಂಡರು. ದಿನಾ ಬೆಳಗ್ಗೆ, ಬಹುಶಃ ಕೋಗಿಲೆ ಇರಬೇಕು, ರಾಗವಾಗಿ ಸದ್ದು ಮಾಡುತ್ತಿತ್ತು. ಶಾಲೆಗೆ ಹೊರಡುವಾಗ ಶಶಾಂಕ ಅದರ ರೀತಿಯಲ್ಲೇ ಕೂ ಕೂ ಸದ್ದು ಮಾಡುತ್ತಿದ್ದ. ಕೋಗಿಲೆ ಮಾತ್ರ ಅಲ್ಲ, ಅದೆಷ್ಟು ಹಕ್ಕಿಗಳ ಗದ್ದಲ ಕೇಳುತ್ತಿತ್ತು ? ಮರಕುಟಿಗ, ಗಿಳಿ, ಕುಪ್ಪು, ಬಜಕ್ಕರೆ ಹಕ್ಕಿ. "ಅಮ್ಮಾ. ಕೂ ಕೂ ಪಕ್ಷಿಯ ಮನೆ ಇದ್ದ ಮರ ಕಡಿದು ಬಿಟ್ರಲ್ಲಾ. ಅದು ಈಗ ಕಾಣುವುದೇ ಇಲ್ಲ." ಶಶಾಂಕ ಅಂಗಳದಿಂದ ಬಂದವನೇ ಸಪ್ಪೆ ಮುಖದಲ್ಲಿ ಹೇಳಿದ. "ಅಪ್ಪಾ, ಯಾಕೆ ಮರ ಕಡಿದದ್ದು ?" ಶಶಾಂಕ ಅಳು ದನಿಯಲ್ಲಿ ಕೇಳಿದ. "ನೀನು ಬೇಗ ಬೈಕು ಹತ್ತು. ಶಾಲೆಗೆ ಹೊತ್ತಾಯ್ತು" ರಂಜನ ಉತ್ತರ ಹೇಳದೆ ಮಗನನ್ನು ಗದರಿಸಿದ. ವೆಂಕಪ್ಪಜ್ಜ ಕುಳಿತಲ್ಲೇ ವಿಷಣ್ಣನಾದರು. ಹೌದಲ್ಲ ? ಪಾಪ ಎಲ್ಲಿ ಹೋಗಿರ್ತದೆ ? ಅದರ ಗೂಡಲ್ಲಿ ಎರಡು ಸಣ್ಣ ಮರಿಗಳೂ ಇದ್ದವಂತೆ. ಮೊನ್ನೆ ಶಶಾಂಕ ಹೇಳ್ತಾ ಇದ್ದ. ಅಬ್ದುಲ್ಲ ಎರಡನೇ ದಿನವೂ ಬಂದ. ಮತ್ತದೇ ಸದ್ದು. ಮರ ಬೀಳುವ, ಲಾರಿಯಲ್ಲಿ ತುಂಬಿಸಿ ಹೋಗುವ ಸದ್ದು, ವೆಂಕಪ್ಪಜ್ಜ ನಂತರದ ಎರಡು ದಿನವೂ ಅಂಗಳಕ್ಕೆ ಇಳಿಯಲೇ ಇಲ್ಲ. ಅಂತೂ ಮೂರು ದಿನಕ್ಕೆ ಮುಗಿದಿತ್ತು. ಎಲ್ಲ ಮರ ಕಡಿದು ಸಾಗಿಸಿ ಆಗಿತ್ತು.

ಎಷ್ಟು ದಿನಾ ಅಂತ ವೆಂಕಪ್ಪಜ್ಜ ಒಳಗೆ ಕುಳಿತುಕೊಳ್ತಾರೆ ? ವೆಂಕಪ್ಪಜ್ಜ ಮರುದಿನವೇ ಎಂದಿನಂತೆ ಅಂಗಳಕ್ಕೆ ಇಳಿದರು. ಅಂಗಳದಲ್ಲಿ ತೋಟದ ಕಡೆ ಹೆಜ್ಜೆ ಹಾಕುವಾಗ ಕತ್ತು ತಿರುಗಿಸಿ ಗುಡ್ಡದ ಅವಸ್ಥೆ ನೋಡಬೇಕೆಂದುಕೊಂಡರೂ ಅದು ಹೇಗೊ ತಡೆದುಕೊಂಡರು, ಅಡಿಕೆ ತೋಟದಲ್ಲಿ ಈಗ ಖಾಯಂ ಕೆಲಸದವರು ಯಾರೂ ಇಲ್ಲ. ಸ್ವಲ್ಪ ಹೊತ್ತು ಹಾಗೇ ತಿರುಗಾಡಿ ಬಂದವರಿಗೆ ಅಂಗಳ ತಲುಪುತ್ತಲೇ ಎದುರಿಗೇ ಕಂಡಿತ್ತು ಬೋಳಾದ ಗುಡ್ಡೆ. ಬರೀ ಮರಗಳ ಬೇರು ಮಾತ್ರ ಉಳಿದಿದೆ. ಬಹುಶಃ ಅದನ್ನೂ ಕೀಳಬೇಕಾಗಿ ಬರಬಹುದೋ ಏನೊ ? ಇಲ್ಲದಿದ್ದರೆ ರಬ್ಬರ್ ಗಿಡಕ್ಕೆ ಜಾಗ ಎಲ್ಲಿ ? ಗುಡ್ಡೆಯಿಡೀ ಬಟಾ ಬಯಲು. ಸುಡುವ ಬಿಸಿಲು. ನೀರವ ಮೌನ. ಇನ್ನು ನೋಡಲಾರದೆ ಅದು ಹೇಗೋ ನಡೆದು ಬಂದು ಚಾವಡಿಯಲ್ಲಿ ಕುಸಿದರು. ಮೂಗಿಗೆ ಒಂದು ತರದ ಹಸಿ ವಾಸನೆ. ಸಣ್ಣದಾಗಿ ಅಳುವ ಸದ್ದು.

ರಾತ್ರಿಯಿಡೀ ಅರೆಮಂಪರಲ್ಲಿ ಹೊರಳಾಡುತ್ತಿದ್ದವರಿಗೆ ಹೇಗೋ ನಿದ್ದೆ ಹತ್ತಿತ್ತು. ನಿದ್ದೆಯಲ್ಲಿ ಯಾರೋ ಮತ್ತೆ ಅಳುವ ಸದ್ದು. ವೆಂಕಪ್ಪಜ್ಜ ಎದ್ದು ಕುಳಿತರು. ಬಹುಶಃ ಶಶಾಂಕ ಅಳ್ತಾ ಇದ್ದನೋ ಏನೋ. "ಸಾವಿತ್ರಿ ಇದಾ" ಎನ್ನುತ್ತ ಸಾವಿತ್ರಿಯನ್ನು ಅಲುಗಿಸಿದರು. "ಏನಾಯ್ತು ?" ಸಾವಿತ್ರಿ ಅರೆ ಮಂಪರಲ್ಲಿ ಕೇಳಿದರು. ಶಶಾಂಕ ಯಾಕೆ ಅಳುವುದು. ಹೊಟ್ಟೆನೋವೋ ಏನೋ ? ವೆಂಕಪ್ಪಜ್ಜನ ಪ್ರಶ್ನೆಗೆ ಎದ್ದು ಕುಳಿತ ಸಾವಿತ್ರಿ ಹೊರಗೆ ಕಿವಿಯಾನಿಸಿದರು. "ಎಲ್ಲಿ. ಎನಗೆ ಕೇಳ್ತಿಲ್ಲೇ, ನೀವು ಮಲಗಿ. ಏನು ಮಾಡ್ಲಿಕ್ಕೆ ? ಮರ ಕಡಿಸಲಿಕೆ ನನಗೂ ಇಷ್ಟ ಇಲ್ಲ. ಅವನು ಅಷ್ಟು ಹೇಳುವಾಗ ಎಂತ ಮಾಡ್ಲಿಕೆ ? ಸಾವಿತ್ರಿ ಅದೇನೋ ಪಿರಿ ಪಿರಿ ಮಾತಾಡಿ ಮತ್ತೆ ಆಕಳಿಸಿ ಮಲಗಿದರು. ಶಶಾಂಕನದಲ್ಲದೆ ಮತ್ತೆ ಯಾರ ಸ್ವರ ? ಈಗಲೂ ಸಣ್ಣದಾಗಿ ಕೇಳ್ತಾ ಇದೆಯಲ್ಲ ?

ವೆಂಕಪ್ಪಜ್ಜ ಮತ್ತೇನೂ ಹೇಳದೆ ಮಲಗಿದರು. ಅದೆಷ್ಟೋ ಹೊತ್ತಿಗೆ ಮಂಪರು ಹತ್ತಿತು. ನಿದ್ರೆಯಲ್ಲೂ ಅದೇನೋ ಕನಸು. ಬೋಳು ಗುಡ್ಡೆಯಲ್ಲಿ ಮತ್ತೆ ಹಸಿರು ತುಂಬಿದಂತೆ, ಹಕ್ಕಿ ಮತ್ತೆ ಹಾಡಿದಂತೆ, ಮನಸ್ಸು ತಂಪಾದಂತೆ.

ಮರುದಿನ ತೋಟದಲ್ಲಿ ನಡೆಯುವಾಗಲೂ ಅದೇ ಹಸಿ ವಾಸನೆ. ಯಾರೋ ಅಳುವ ಸದ್ದು. ಊಟ ಮುಗಿಸಿ ಚಾವಡಿಯಲ್ಲಿ ಮಲಗಿದಾಗಲೂ ಅದೇ ಸದ್ದು. ಬಹುಶಃ ತನಗೆ ಮಾತ್ರ ಕೇಳುವುದೋ ಏನೋ. ಪ್ರಾಯ ಎಪ್ಪತ್ತೈದು ಕಳೆಯಿತಲ್ಲ. ತನಗೆ ಮಾತ್ರ ಅನ್ನಿಸುವದೋ ಏನೂ. ವೆಂಕಪ್ಪಜ್ಜ ಮತ್ತೆ ಯಾರ ಹತ್ತಿರವೂ ಹೇಳಲು ಹೋಗಲೇ ಇಲ್ಲ. ಅದನೋ ಈಚೆಗೆ ಏನೋ ನಿಶ್ಶಕ್ತಿ, ಆಯಾಸ, ವೆಂಕಪ್ಪಜ್ಜ ಈಗ ತೋಟಕ್ಕೆ ಹೋಗುವುದನ್ನೂ ಕಡಿಮೆ ಮಾಡಿದ್ದಾರೆ. ಹಸಿ ವಾಸನೆ, ಅಳುವ ಸದ್ದು ಕೇಳಿ ಬರುವುದು ನಡೆದೇ ಇದೆ. ಇವತ್ತು ರಾತ್ರಿ ಮಲಗಿದಾಗಲೂ ಹಾಗೆ. ಕಣ್ಣಿಗೆ ನಿದ್ದೆ ಹತ್ತುತ್ತಿದ್ದಂತೆಯೇ ಮತ್ತೆ ಅಳು. ಈಗ ಮತ್ತೂ ದೊಡ್ಡದಾಗಿ ಕೇಳಿ ಬರುತ್ತಾ ಇದೆ. ದೀನವಾದ ಮನ ಕರಗುವ ಅಳು, ಇಷ್ಟು ದಿನ ಸಹಿಸಿಕೊಂಡಿದ್ದ ವೆಂಕಪ್ಪಜ್ಜ ಇನ್ನು ತಡೆಯಲಾರದೆ ಮೆತ್ತಗೆ ಕೋಣೆಯ ಬಾಗಿಲು ತೆರೆದು ಹೊರ ಬಂದರು. ಇದು ಎಲ್ಲಿಂದ ಕೇಳಿ ಬರ್ತಾದೆ? ಎಷ್ಟು ದಿನ ಆಯ್ತು? ಪತ್ತೆ ಹಚ್ಚಲೇ ಬೇಕು. ನಿಧಾನವಾಗಿ ಚಾವಡಿ ಬಾಗಿಲು ತೆರೆದು ಸದ್ದು ಮಾಡದೆ ಅಂಗಳಕ್ಕೆ ಇಳಿದರು. ಅಂಗಳದಲ್ಲೆಲ್ಲ ಬೆಳದಿಂಗಳು ಹರಡಿ ನಿಂತಿದೆ. ಹುಣ್ಣಿಮೆ ಬಹುಶಃ ನಾಳೆಯೂ ನಾಡಿದ್ದೋ ಇರಬೇಕು. ಆದರೆ ಯಾಕೆ ಒಂದು ರೀತಿಯ ಉರಿ? ನಿಧಾನವಾಗಿ ಅಂಗಳ ದಾಟಿ ಮುಂದೆ ಬಂದು ಕಿವಿಗೊಟ್ಟಾಗ ಗೊತ್ತಾಯ್ತು. ಓಹ್! ಇದು ಮನೆಯ ಹಿಂದಿನ ಗುಡ್ಡದಿಂದಲೇ. ಯಾರು ಈ ಹೊತ್ತಿಗೆ. ಒಂದೊಂದು ಸಲ ನಾಲ್ಕು ಮನೆಯ ಆಚೆಯ ನಾರಾಯಣ ನಾಯ್ಕ ಕುಡಿದ ಮತ್ತಿನಲ್ಲಿ ಗುಡ್ಡದ ಮಾರ್ಗದಲ್ಲಿ ಬೀಳುವುದುಂಟು. ಅವನೋ ಏನೋ?

ವೆಂಕಪ್ಪಜ್ಜ ಅಲ್ಲೇ ಅಂಗಳದಲ್ಲಿದ್ದ ಉದ್ದದ ಕೋಲು ಊರಿ ನಿಧಾನಕ್ಕೆ ನಡೆದು ಮಣ್ಣಿನ ಮಾರ್ಗಕ್ಕೆ ಗುಡ್ಡದ ಬದಿಗೆ ಬಂದರು. ಹೌದು, ಇಲ್ಲೆಲ್ಲೋ ಹತ್ತಿರದಲ್ಲೆ. ಈಗ ಅಳು ಮತ್ತೂ ಹತ್ತಿರದಿಂದ ಕೇಳಿ ಬರ್ತಿದೆ. ಆದರೆ ಕಣ್ಣು ಕಿರಿದು ಮಾಡಿ ನೋಡಿದರೆ ಯಾರೂ ಇಲ್ಲ. ವೆಂಕಪ್ಪಜ್ಜ ಏದುಸಿರು ಬಿಡುತ್ತ ಕೋಲು ಊರಿಕೊಂಡು ಮುಂದೆ ಬಂದರು. ಮರ ಕಡಿದ ಜನರು ಅಲ್ಲಲ್ಲಿ ಮಣ್ಣು ಸರಿಸಿ ಇಳಿಯಲು ಮೆಟ್ಟಲಿನ ಹಾಗೆ ದಾರಿ ಮಾಡಿದ್ದರು. ಮೇಲೆ ಬರುತ್ತಿದಂತೆಯೇ ಅಲ್ಲಿ ಯಾರೋ ಕೂತ ಹಾಗೆ ಅನ್ನಿಸಿತು. ಯಾರು ಈ ಹೊತ್ತಿನಲ್ಲಿ? ಅನ್ನಿಸಿತು. ಆಕೃತಿ ಅಸ್ಪಷ್ಟ. ನಾರಾಯಣನ ಹಾಗೆ ಕಾಣುದಿಲ್ಲ. ವೆಂಕಪ್ಪಜ್ಜ ಹೆದರಿಕೆ ಆಶ್ಚರ್ಯದಿಂದ ಮತ್ತೆ ಮೇಲೆ ನಡೆದು ಬಂದರು. ಓ! ಯಾರೋ ಹೆಂಗಸು ಅಳುತ್ತಿದ್ದಾಳೆ! ವೆಂಕಪ್ಪಜ್ಜ ಹತ್ತಿರ ಹೋಗಿ ನೋಡಿದರು. ಆ ಹೆಂಗಸು ಕುಕ್ಕುರುಗಾಲಲ್ಲಿ ಕೂತು ಬಿಕ್ಕಿ ಬಿಕ್ಕಿ ಅಳುತ್ತಿದ್ದಾಳೆ. ಎಲ್ಲ ಕಳೆದುಕೊಂಡವರ ದೀನ ರೋದನ. ಹೆಂಗಸಿನ ಚರ್ಮ ಅಲ್ಲಲ್ಲಿ ಕಿತ್ತು ಬಂದಿದೆ. ಕೈ ಬೆರಳಲ್ಲಿ ಒಸರುವ ರಕ್ತ. ಅದೇ ಹಸಿ ವಾಸನೆ. ಆದರೂ ಈ ಹೆಂಗಸು ಮೊದಲು ತುಂಬ ಚಂದ ಇದ್ದಿರಬೇಕು. ಆದರೆ ಈಗ ಅರ್ಧ ಸೌಂದರ್ಯ ಮಾಸಿದ ಹಾಗಿದೆ.

"ಯಾರು? ಏನಾಯ್ತು? ಯಾಕೆ ಅಳುವುದು?" ಗುಡ್ಡ ಏರಿ ಬಂದ ಆಯಾಸದಲ್ಲಿ ಏದುಸಿರು ಬಿಡುತ್ತ ಕೇಳಿದರು ವೆಂಕಪ್ಪಜ್ಜ. ಹೆಂಗಸಿನಿಂದ ಉತ್ತರ ಬರಲೇ ಇಲ್ಲ. ಮತ್ತೆ ಅಳು. "ಏ ನಿನ್ನನ್ನೇ ಕೇಳುದು. ಇಲ್ಲಿ ಕೂತು ಏನು ಮಾಡ್ತಾ ಇದ್ದೀಯ? ಅಳುದು ಯಾಕೇಂತ?" ವೆಂಕಪ್ಪಜ್ಜ ಮತ್ತೆ ದನಿ ಎತ್ತರಿಸಿ ಕೇಳಿದರು. ಹೆಂಗಸು ಉತ್ತರಿಸದೆ ತಲೆ ಎತ್ತಿ ತೀಕ್ಷ್ಣ ನೋಟ ಬೀರಿದಳು. ಆ ನೋಟದಲ್ಲಿ ಬೆಂಕಿಯಿತ್ತು. ನೋವಿತ್ತು. ತಿರಸ್ಕಾರವಿತ್ತು. ವೆಂಕಪ್ಪಜ್ಜ ಸ್ವಲ್ಪ ಹೆದರಿ ಹಿಂದೆ ಸರಿದರು. ಆ ಹೆಂಗಸು ಮತ್ತೆ ಅಳು ಮುಂದುವರಿಸಿದಳು. ವೆಂಕಪ್ಪಜ್ಜನಿಗೆ ಫಕ್ಕನೆ ಪರಿಸರ ಬೋಧ ಬಂತು. ಈ ರಾತ್ರಿ ಇಷ್ಟು ಹೊತ್ತಿನಲ್ಲಿ ಬಂದದ್ದೆ ತಪ್ಪಾಯ್ತು. ರಂಜನನಿಗಾದರೂ ಹೇಳಬೇಕಿತ್ತು. ಇನ್ನು ಬೇಗ ಮನೆಗೆ ಮುಟ್ಟಿದರೆ ಸಾಕು. ವೆಂಕಪ್ಪಜ್ಜ ನಡುಗುವ ಕಾಲಲ್ಲಿ ಇಳಿಯಲು ಹೆಜ್ಜೆ ಊರಿದರು. ಜೊತೆಗೆ ಅಸಾಧ್ಯ ಧಗೆ, ಬಾಯಾರಿಕೆ, ಕೆಳಗೆ ಹೆಜ್ಜೆ ಊರಿದವರ ಕಾಲು ಮರಳಲ್ಲಿ ಹೂತುಹೋಯಿತು. ಅರೆ? ಇಲ್ಲಿ ಎಲ್ಲಿಂದ ಹೊಯ್ಗೆ ಬಂದು ತುಂಬಿದೆ? ಇನ್ನೊಂದು ಹೆಜ್ಜೆಯಿಟ್ಟರೆ ಅಲ್ಲೂ ಮರಳು. ಕಣ್ಣು ಕಿರಿದು ಮಾಡಿ ನೋಡಿದರೆ ಸುತ್ತಲೂ ಬರೀ ಮರಳು. ಅರೆ! ಈಗ ಅಳು, ಹಸಿ ವಾಸನೆ ಎರಡೂ ನಿಂತು ಬಿಟ್ಟಿತಲ್ಲಾ? ತಿರುಗಿ ನೋಡಿದರೆ ಹೆಂಗಸು ಕಾಣಲೇ ಇಲ್ಲ! ಮನೆಯಿದ್ದ ಜಾಗದಲ್ಲೂ ಮರಳು. ನೋಟ ತಲುಪಿದಲ್ಲೆಲ್ಲಾ ಬರೀ ಮರಳು. ಸುತ್ತಲೂ ಮರುಭೂಮಿಯ ಪ್ರತೀತಿ. ಅಸಾಧ್ಯ ಸೆಕೆ. ವೆಂಕಪ್ಪಜ್ಜ ಸರ್ವ ಶಕ್ತಿಯನ್ನೂ ಬಳಸಿ ಮುಂದೆ ಕಾಲೆಳೆದುಕೊಂಡು ಹೊರಟರು. ಮನೆ ತಲುಪಬೇಕು. ಬೇಗ. ಅದೆಷ್ಟು ಬೇಗ. ವೆಂಕಪ್ಪಜ್ಜನು ಮರುಳಲ್ಲಿ ಕಾಲೂರಿ ನಡೆಯುತ್ತಲೇ ಇದ್ದರು.

ಪಿ. ಎಸ್. ಕೃಷ್ಣಮೂರ್ತಿ
ಪೆರ್ಡಾಲ ಹೌಸ್, ಬದಿಯಡ್ಕ
ಕಾಸರಗೋಡು, ಕೇರಳ – ೬೭೧ ೫೫೧




## ನಿನ್ನ ಹೊತ್ತೂ ನಾ ಹೊತ್ತೆ !



ನಾನೆಷ್ಟು ಹೊತ್ತೆ –
ಎಂಬುದು ನಿನಗೆ ಗೊತ್ತೆ ಮಗಾ?
ಅವರ ಮನೆಯಲ್ಲಿ:
ನಿತ್ಯ ಹೊತ್ತು ಮೂಡುವ ಮುನ್ನ
ತಿಪ್ಪೆಗೆ ದನಗಳ ಕಸವ ಹೊತ್ತೆ;
ಸೊಪ್ಪಿನ ಮಡಿಗೆ ನೀರು ಹೊತ್ತೆ;
ಮನೆ–ಬಚ್ಚಲುಗಳಿಗೆ ನೀರು ಹೊತ್ತೆ;
ಹೊತ್ತು ಏರಿದಂತೆ –
ಸೌದೆ ಹೊರೆ ಮಾಡಿ ಹೊತ್ತೆ;
ಬರಿದಾದುಕೆ ಮತ್ತೆ ನೀರು ಹೊತ್ತೆ;
ಮೈಲಿಗೆ ಬಟ್ಟೆಯ ಮೂಟೆ ಮಾಡಿ ಹೊತ್ತೆ;
ಮಡಿ ಮಾಡಿ ಮತ್ತೆ ಒಳಕ್ಕೆ ಹೊತ್ತೆ;
ಹೊತ್ತು ಇಳಿದಂತೆ –
ಪಾತ್ರೆಗಳ ತೊಳೆದು ಒಳಕ್ಕೆ ಹೊತ್ತೆ;
ದನಗಳ ಕೊಟ್ಟಿಗೆಗೆ ಹುಲ್ಲು ಹೊತ್ತೆ;
ಹಾಸಿಗೆ ದಿಂಬು ಮೆತ್ತೆಗಳ ಹೊತ್ತೆ;
ದುಡಿಸುವವರ ಸುಖ ನಿದ್ರೆಗೆಂದು ಹೊತ್ತೆ;
ನಮ್ಮ ಗುಡಿಸಲಿಗೆ ಬಂದೆ –
ನಿನ್ನನು ಹೊತ್ತು ಬಂದೆ
ಹೊತ್ತಿದ್ದ ನಿನ್ನನು
ನಾ ಹೆತ್ತೆ ಮಗು!
ಮಗ್ಗುಲಿಗೆ ಬಂದ
ನಿನ್ನ ನೋಡಿ – ಮಗಾ
ನಾ ಹೊತ್ತುದೆಲ್ಲವ ಮರೆತೆ!

ಎಲ್. ನರಸಿಂಹಯ್ಯ
'ವಿಜಯ ಗೋಕುಲ', ೪೦ ಅಡಿ ರಸ್ತೆ, ಸಪ್ತಗಿರಿ ಬಡಾವಣೆ, ತುಮಕೂರು – ೫೭೨ ೧೦೨



# ಬುಧ ಗ್ರಹದ ಚಲನವಲನ

**ಕ**ಳೆದ ತಿಂಗಳು ಸೂರ್ಯನಿಗೆ ಅಡ್ಡವಾಗಿ ಹಾದುಹೋದ ಬುಧ ಗ್ರಹ ಈ ತಿಂಗಳಲ್ಲಿ ಬೆಳಗಿನ ಜಾವ ಕಾಣಿಸಿಕೊಳ್ಳುತ್ತಿದೆ. ಆದರೆ, ಈ ಕ್ಷೀಣ ಚುಕ್ಕೆಯನ್ನು ಗುರುತಿಸುವುದು ಹೇಗೆ? ೩ರಂದು ಮುಂಜಾವು ಸುಮಾರು ೪:೪೫ / ೫:೦೦ ಗಂಟೆಗೆ ಪೂರ್ವ ದಿಗಂತದತ್ತ ದೃಷ್ಟಿ ಹರಿಸಿ. ಉದಯಿಸುತ್ತಿರುವ ಬಾಲಚಂದ್ರನ ಪಕ್ಕದಲ್ಲಿಯೇ ಬುಧ ಗ್ರಹ ಕಾಣುವುದು. ಸುಮಾರು ೫:೧೫ರ ಹೊತ್ತಿಗೆ ಸ್ಪಷ್ಟವಾಗಿಯೇ ಕಾಣುವುದು. ಆ ಮುಂದೆ ಅರುಣೋದಯದ ಕೆಂಪು ಗ್ರಹವನ್ನು ಮುಚ್ಚಿಬಿಡುವುದು. (ಚಂದ್ರ ಇನ್ನೂ ಸ್ವಲ್ಪ ಹೆಚ್ಚು ಹೊತ್ತು ಕಾಣುವುದು.) ತನ್ನ ಪಥವನ್ನು ಮುಂದುವರೆಸುವ ಬುಧ ೫ರಂದು ಗರಿಷ್ಠ ಎತ್ತರ ತಲುಪಿ ಪುನಃ ಕೆಳಗಿಳಿಯ ತೊಡಗುವುದು. ೧೯ರ ಮುಂಜಾವು ಅದು ರೋಹಿಣಿ ನಕ್ಷತ್ರದ ಪಕ್ಕದಲ್ಲಿ ಹಾಜ ರಾಗುವುದು. ಇದೂ ಸಹ ಅರುಣೋದಯದ ಕೆಂಪಿನಲ್ಲಿ ಕರಗಿ ಹೋಗಬಹುದು. ಹುಡುಕ ಬಲ್ಲಿರಾ? ಎಂಬುದೇ ಸವಾಲು.

ಇಂತಹುದೇ ಇನ್ನೊಂದು ಸವಾಲು ನೆಪ್ಚೂನ್ ಕುರಿತಾದದ್ದು. ೨೬ರ ಬೆಳಗಿನ ಜಾವ ಚಂದ್ರನನ್ನು ಹುಡುಕಿ. ದುರ್ಬೀನಿನ ಮೂಲಕ ನೋಡಿದಾಗ ಅದರ ಅಂಚಿನಲ್ಲಿ ಕ್ಷೀಣವಾದ ಎರಡು ಮೂರು ಚುಕ್ಕೆಗಳು ಕಾಣುತ್ತವೆ. ಪ್ರಕಾಶಮಾನವಾದದ್ದು ಲ್ಯಾಂಬ್ಡಾ ಅಕ್ವೇರಿಯೈ ಎಂಬ ನಕ್ಷತ್ರ; ಕ್ಷೀಣವಾದದ್ದೇ ನೆಪ್ಚೂನ್.




ಈ ಎರಡೂ ಸವಾಲುಗಳು ಚಂದ್ರ ಆಯಾ ಗ್ರಹಗಳನ್ನು ಮರೆಮಾಡುವ ಆಚ್ಛಾದನೆಗಳೇ ಆದರೂ ನಮ್ಮ ಹಗಲಿನಲ್ಲಿ ಅವು ನಡೆಯುತ್ತವೆ; ಆದ್ದರಿಂದ ಹೀಗೆ ಅವು ಸಮೀಪಿಸುವುದನ್ನು ಮಾತ್ರ ನೋಡಬಹುದು.

ಸಂಜೆ ನೆತ್ತಿಯಲ್ಲಿ ಕಾಣುವ ಗ್ರಹ ಗುರು. ೧೧ರಂದು ಚಂದ್ರ ಇದರ ಪಕ್ಕ ಹಾದು ಹೋಗುತ್ತದೆ. ಪೂರ್ವದ ಅಂಚಿನಲ್ಲಿ ಕಾಣುವ ಎರಡು ಪ್ರಕಾಶಮಾನವಾದ ಚುಕ್ಕೆಗಳು ಮಂಗಳ ಮತ್ತು ಶನಿ. ಚಂದ್ರ ೧೭ರಂದು ಮಂಗಳದ ಪಕ್ಕ ಮತ್ತು ೧೯ರಂದು ಶನಿಯ ಪಕ್ಕ ಹಾದುಹೋಗುತ್ತದೆ.

ಶುಕ್ರ ಗ್ರಹ ಈ ತಿಂಗಳ ಕೊನೆಗೆ ನೋಡಲು ಸಿಗಬಹುದು. ೬ರಂದು ಅದು ಸೂರ್ಯನ ಆಚೆ ಬದಿಯಿಂದ ಹಾದು ಹೋಗುವುದನ್ನು ಸೋಹೋ ಬಾಹ್ಯಾಕಾಶ ವೀಕ್ಷಣಾಲಯದ ಚಿತ್ರಗಳಲ್ಲಿ ನೋಡಬಹುದು.



*ಚಂದ್ರ–ಮಂಗಳ–ಶನಿ*
*೧೮ರಂದು ಸಂಜೆ*

ಸಂಜೆಯ ಆಕಾಶದಲ್ಲಿ ಪೂರ್ವದ ಅಂಚಿನಲ್ಲಿ ಆಕಾಶಗಂಗೆಯನ್ನೂ ಕಾಣ ಬಹುದು. ಸಂಜೆಯ ಆಕಾಶದಲ್ಲಿ ಕಾಣುವ ನಕ್ಷತ್ರಪುಂಜಗಳನ್ನು ನಕ್ಷೆಯ ಸಹಾಯದಿಂದ ಗುರುತಿಸಬಹುದು. ನೆತ್ತಿಯಿಂದ ಸ್ವಲ್ಪ ಪಶ್ಚಿಮಕ್ಕೆ ಸರಿದಿರುವುದೇ ಸಿಂಹರಾಶಿ. ಅದರ ಪಕ್ಕದ್ದು ಕನ್ಯಾ. ಈ ರಾಶಿಯ ಪ್ರಕಾಶಮಾನ ನಕ್ಷತ್ರ ಚಿತ್ರಾ. ಮಂಗಳದಿಂದ ಕೆಳಗೆ (ದಿಗಂತದ ಕಡೆಗೆ) ವೃಶ್ಚಿಕ, ಧನುರಾಶಿಗಳು ಕಾಣುವುವು. ಪೂರ್ವದಲ್ಲಿ ಉದಯಿಸುತ್ತಿರುವುದು ವೃಶ್ಚಿಕರಾಶಿ; ಅದರಲ್ಲಿಯ ಪ್ರಕಾಶಮಾನ ನಕ್ಷತ್ರ ಜ್ಯೇಷ್ಠಾ. ಅದರ ಪಕ್ಕ ಈಗಾಗಲೇ ಶನಿಗ್ರಹ ವಿರಾಜಮಾನ ವಾಗಿದೆ. ಈ ತಿಂಗಳ ಹುಣ್ಣಿಮೆಯಂದು ಚಂದ್ರ ಈ ನಕ್ಷತ್ರದ ಪಕ್ಕದಲ್ಲಿಯೇ ಕಾಣುತ್ತದೆ. ಆದ್ದರಿಂದ, ಈ ತಿಂಗಳ ಹೆಸರು ಜ್ಯೇಷ್ಠಾ ಎಂದಿದೆ. ದಕ್ಷಿಣದಲ್ಲಿ ಕಿನ್ನರ (ಸೆಂಟಾರಸ್) ಸ್ಪಷ್ಟವಾಗಿ ಕಾಣುತ್ತದೆ. ಅದರ ಪಕ್ಕ ತ್ರಿಶಂಕು ಅಥವಾ ದಕ್ಷಿಣ ಶಿಲುಬೆ ಇದೆ. ಕನ್ಯಾರಾಶಿಯ ದಕ್ಷಿಣಕ್ಕೆ ಕಾಣುವ ಪುಂಜ ಕಾರ್ವಸ್ ಅಥವಾ ಹಸ್ತ. ಉತ್ತರಕ್ಕೆ ಕಾಣುವ ಕೆಂಪು ನಕ್ಷತ್ರ ಸ್ವಾತಿ. ಆ ನಕ್ಷತ್ರ ಪುಂಜಕ್ಕೆ ಬೂಟೆಸ್ (ಸಹದೇವ) ಎಂಬ ಹೆಸರಿದೆ. ಇನ್ನೂ ಮುಂದಕ್ಕೆ ಪರಿಚಿತ ಸಪ್ತರ್ಷಿಮಂಡಲ ಇದೆ. ಸಹದೇವದ ಪಕ್ಕದಲ್ಲಿ ಕಾಣುವ ಚಿಕ್ಕ ಪುಂಜ ಉತ್ತರ ಕಿರೀಟ (ಕರೋನ ಬೋರಿಯೋಲಿಸ್).

ಜೂನ್ ೨೭ರಂದು ಸಹದೇವದ ದಿಕ್ಕಿನಿಂದ ಹೊರಟಂತೆ ಕಾಣುವ ಉಲ್ಕಾವೃಷ್ಟಿ ಗರಿಷ್ಠ ಮುಟ್ಟಲಿದೆ. ಇದಕ್ಕೆ ಬೂಟೆಡ್ಸ್ ಎಂದೇ ಹೆಸರು.

ಶನಿ ಮತ್ತು ಜ್ಯೇಷ್ಠಾ ನಕ್ಷತ್ರ ಗಳನ್ನೂ ಗುರುತಿಸಿ ಅವುಗಳ ಆಸುಪಾಸನ್ನು ಗಮನಿಸಿದರೆ ಅಸಂಖ್ಯಾತ ನಕ್ಷತ್ರಗಳ ಆಕಾಶಗಂಗಾ ನದಿ ಕಾಣುವುದು. ಹುಣ್ಣಿಮೆಯ ಚಂದ್ರ ನದಿಯಲ್ಲಿಯೇ ಮಿಂದು ಮುಂದುವರೆಯುವನು. ಆದ್ದರಿಂದ ಆ ಮುಂದಿನ ದಿನಗಳಲ್ಲಿ ಅಂದರೆ ೨೦ರ ನಂತರ ಸಂಜೆಯಲ್ಲಿ ಈ ಭಾಗವನ್ನು ವೀಕ್ಷಿಸಿದಲ್ಲಿ ಹುಣ್ಣಿಮೆಯ ಚಂದ್ರನ ಬೆಳಕಿನ ತೊಂದರೆ ಇರುವುದಿಲ್ಲ.

೨೧ರಂದು ದಕ್ಷಿಣಾಯನ. ಸೂರ್ಯ ಉತ್ತರದ ತುದಿಯನ್ನು ತಲುಪಿ ದಕ್ಷಿಣಕ್ಕೆ ಹೊರಳುವ ದಿನ.

### ಖಗೋಳ ದಿನಚರಿ

| | |
|---|---|
| ಜೂನ್ ೩ | ಬುಧ–ಚಂದ್ರ ಜೋಡಿ (ಮುಂಜಾವು).[ಛಿ] |
| | ಚಂದ್ರ–ಭೂಮಿ ನಡುವೆ ಕನಿಷ್ಠ ಅಂತರ |
| ೫ | ಅಮಾವಾಸ್ಯೆ ೦೮.೩೦ಕ್ಕೆ. |
| | ಬುಧ ಗ್ರಹದ ಗರಿಷ್ಠ ಕೋನೋನ್ನತಿ(ಮುಂಜಾವು).[ಛಿ] |
| ೬ | ಶುಕ್ರ–ಸೂರ್ಯ ಜೋಡಿ |
| ೧೧ | ಗುರು–ಚಂದ್ರ ನಡುವೆ ೨ ಡಿಗ್ರಿ ಅಂತರ(ಸಂಜೆ)[ಛಿ] |
| ೧೨ | ಚಾಂದ್ರಮಾಸದ ಮೊದಲ ಪಾದ |
| ೧೫ | ಭೂಮಿ–ಚಂದ್ರ ನಡುವೆ ಗರಿಷ್ಠ ಅಂತರ |
| ೧೭ | ಚಂದ್ರ–ಮಂಗಳ ಜೋಡಿ (ಸಂಜೆ)[ಛಿ] |
| ೧೯ | ಶನಿ ಚಂದ್ರ ಜೋಡಿ (ಸಂಜೆ)[ಛಿ] |
| | ಬುಧ–ರೋಹಿಣಿ ಜೋಡಿ (ಮುಂಜಾವು)[ಛಿ] |
| ೨೦ | ಹುಣ್ಣಿಮೆ ೧೬:೩೨ಕ್ಕೆ |
| ೨೧ | ದಕ್ಷಿಣಾಯನ ೦೪:೦೪ಕ್ಕೆ |
| ೨೬ | ಚಂದ್ರ–ನೆಪ್ಚೂನ್ ಜೋಡಿ |
| ೨೭ | ಚಾಂದ್ರಮಾಸದ ಕೊನೆಯ ಪಾದ |
| ೩೦ | ಮಂಗಳದ ಹಿನ್ನಡೆ ಮುಕ್ತಾಯ |

([ಛಿ] ಛಾಯಾಗ್ರಹಣಕ್ಕೆ ಸದವಕಾಶ)

**ಡಾ|| ಬಿ. ಎಸ್. ಶೈಲಜಾ**
ಜವಾಹರಲಾಲ್ ನೆಹರು ತಾರಾಲಯ, ಹೈಗ್ರೌಂಡ್ಸ್, ಬೆಂಗಳೂರು – ೫೬೦ ೦೦೧

# ಸರ್ವದೈವ ಭಂಜಕ – ಅಂಬೇಡ್ಕರ್



**ದಲಿತರಿಗೆ ಮತ್ತು ದಲಿತೇತರರಿಗೆ ತಮ್ಮನ್ನು ದೈವೀಕರಿಸುವ ಬಗ್ಗೆ, ತಮ್ಮನ್ನು ಸಂತನೆಂದು ಪರಿಗಣಿಸಿ ಸಂತ ಚರಿತ್ರೆಯನ್ನು ಬರೆಯುವುದರ ಬಗ್ಗೆ ಅಂಬೇಡ್ಕರ್ ಎಚ್ಚರಿಸಿದ್ದರು. ಅವರೊಡನೆ ಹತ್ತಿರವಾಗಿ ತೀವ್ರವಾಗಿ ತೊಡಗಿಸಿಕೊಳ್ಳಲು ಅವರ ಹಿಂಬಾಲಕರಿಗೆ ಸಾಧ್ಯವಾಗಿಲ್ಲ. ಅವರು ದಲಿತರ ಒಬ್ಬ ಅಧಿಕೃತ ಚಿಂತಕರಾಗುತ್ತಾರೆಯೇ ವಿನಾ ಅವರ ಸಹ ಚಿಂತಕರಾಗುವುದಿಲ್ಲ. ದಲಿತರಿಗೂ ಅವರ ಬಗ್ಗೆ ಬರೆಯಲು ಕೆಲವು ಸಂಶಯಗಳು ಇರಲೂಬಹುದು. ಹೀಗಾಗಿ ಅವರು ಬರೆಯಲಿಲ್ಲ. ಇನ್ನು ದಲಿತೇತರರು ಅವರ ಬಗ್ಗೆ ಬರೆಯಲು ಮಾನಸಿಕವಾಗಿ ಅನರ್ಹರಾಗಿರುತ್ತಾರೆ. ದಶಕಗಳಷ್ಟು ಕಾಲ ಅವರ ಚಿಂತನಾಕ್ರಮವನ್ನು ಅಸ್ತವ್ಯಸ್ತವೆಂದು ಪರಿಗಣಿಸಿ, ಅವರನ್ನು ಮೂಲೆಗುಂಪು ಮಾಡಲಾಯಿತು.**

ಮೂಲ : **ಪ್ರತಾಪ್ ಭಾನು ಮೆಹತಾ**
ಕನ್ನಡಕ್ಕೆ : **ಡಾ॥ ಕೆ. ಸುಂದರ ರಾಜ್**

**ಸಾ**ಮಾನ್ಯವಾಗಿ ವ್ಯಕ್ತಿಗಳ ವಾರ್ಷಿಕ ಉತ್ಸವಗಳು ಆ ವ್ಯಕ್ತಿ ಮಾಡಿರುವ ಸಾಧನೆಗಳ ಬಗ್ಗೆ, ವೈಫಲ್ಯಗಳ ಬಗ್ಗೆ ಮೌಲಿಕವಾಗಿ ಮಾತನಾಡುವ ಸಮಯಗಳಾಗಿರುತ್ತವೆ. ಆದರೆ ಭೀಮರಾವ್ ಅಂಬೇಡ್ಕರ್‌ರವರ ಬಗ್ಗೆ ಇಂತಹ ಪ್ರಯತ್ನ ವನ್ನೇನಾದರೂ ಮಾಡಿದರೆ, ಅದು ದುರಹಂಕಾರದ್ದೂ ದಡ್ಡತನದ್ದೂ ಆಗಿರುತ್ತದೆ. ಹಿರಿಯ ನಾಯಕರು ಗಳನ್ನು ಮೌಲ್ಯಮಾಪನ ಮಾಡುವಾಗ ಅವರ ನಾಗರಿಕತೆಯ ಮಟ್ಟ ಯಾವುದೆಂದು ನೋಡುತ್ತೇವೆ. ಅಂಬೇಡ್ಕರ್‌ರವರ ವಿಚಾರದಲ್ಲಿ ಇದನ್ನು ತದ್ವಿರುದ್ಧವಾಗಿಯೇ ನೋಡಬೇಕಾಗುತ್ತದೆ. ಒಂದು ಸಂಪೂರ್ಣ ನಾಗರಿಕತೆಯನ್ನು ಅಳೆಯಲು ಅವರೇ ಅಳತೆಗೋಲಾಗಿಬಿಡುತ್ತಾರೆ. ಅವರನ್ನು ನಾವು ತೊಡಗಿಸಿಕೊಂಡಾಗ, ಅವರ ಆದರ್ಶಗಳು, ಅವರು ನ್ಯಾಯದ ಬಗ್ಗೆ ತಳೆದ ನಿಲುವುಗಳು, ಅವರ ತರ್ಕಪೂರ್ಣವಾದ ವಾದಗಳು, ಅವರ ಸಾಂಸ್ಥಿಕ ಕಲ್ಪನೆಗಳು – ಇದೆಲ್ಲದರ ಮೂಲಕ ನಮ್ಮನ್ನು ನಾವೇ ಅಳೆದುಕೊಳ್ಳಬೇಕಾಗುತ್ತದೆ.

ಹಲವು ಕಾರಣಗಳಿಗೆ ಅಂಬೇಡ್ಕರ್‌ರವರ ಬಗ್ಗೆ ಬರೆಯುವುದು ಬಹಳ ಕಷ್ಟದ ಕೆಲಸ. ಅವರ ಪಾಂಡಿತ್ಯಪೂರ್ಣ ವಿಚಾರಗಳಷ್ಟೇ ಅವರಿಗೆ ಸಹಾಯವಾಗಿಲ್ಲ. ಅವರ ಸಂಪೂರ್ಣ ಜೀವನ ಚರಿತ್ರೆಯೊಂದು ಇನ್ನೂ ಬರಬೇಕಾಗಿದೆ. ಟಿಪ್ಪಣಿ ಸಹಿತವಾದ, ಅಧಿಕೃತವಾಗಿ ಪರಿಷ್ಕರಣಗೊಂಡ ಅವರ ಎಲ್ಲ ಲೇಖನಗಳೂ ಲಭ್ಯವಿಲ್ಲ. ಅವರ ಪತ್ರ ವ್ಯವಹಾರಗಳು ಸಾಂಸ್ಥಿಕ ಒಡೆತನಗಳ ಸಮಸ್ಯೆ ಗಳಿಂದಾಗಿ ಸರಿಯಾಗಿ ದೊರಕುತ್ತಿಲ್ಲ. ಅವರ ೧೨೫ನೇ ವರ್ಷದ ಜಯಂತಿಯ ಸಂದರ್ಭದಲ್ಲಿ ಮಾಡಲೇಬೇಕಾದ ಒಂದು ಕೆಲಸವೆಂದರೆ ಅಧಿಕೃತವಾಗಿ ಪರಿಷ್ಕರಣಗೊಂಡ ಅವರ ಪತ್ರ ವ್ಯವಹಾರಗಳನ್ನು ಮತ್ತು ಅವರ ಲೇಖನಗಳನ್ನು ಪ್ರಕಟ ಮಾಡುವುದು. ಆದರೆ ಅವರ ಬರವಣಿಗೆಯನ್ನು ಆಳವಾಗಿ ನೋಡಿದರೆ, ಅವರಲ್ಲಿ ನೆಹರೂ ಗಾಂಧಿಗಳಷ್ಟು ಆತ್ಮೀಯವಾದ ವ್ಯಕ್ತಿತ್ವ ಕಂಡುಬರುವುದಿಲ್ಲ. ಗಾಂಧಿ ನೆಹರೂಗಳಿಗೆ ಪಾಂಡಿತ್ಯ, ಸಾಂಸ್ಥಿಕ ಅಧಿಕಾರ, ದಟ್ಟ ಸಾಮಾಜಿಕ ಬೆಂಬಲಗಳು ಮತ್ತು ಸಮಕಾಲೀನ ಸ್ಮರಣೆಗಳು ಪೂರ್ಣ ಪ್ರಮಾಣದಲ್ಲಿ ದೊರಕಿದವು. ಅಂಬೇಡ್ಕರ್ ಅಲಕ್ಷ್ಯಗಳ ಪರದೆಯ ಹಿಂದೆಯೇ ವಿಜೃಂಭಿಸಬೇಕಾಗಿದೆ. ಅವರನ್ನು ಅಲಕ್ಷ್ಯಗೊಳಿಸುವ ಎಲ್ಲ ಪ್ರಯತ್ನಗಳೂ ಅವರು ಗಳಿಸಿದ ತೀಕ್ಷ್ಣ ರಾಜಕೀಯ ನೈತಿಕ ಅಧಿಕಾರಿಗಳಿಂದ ವಿಫಲಗೊಂಡಿದೆ. ಅವರ ತಲೆಮಾರಿನ ನಾಯಕರಲ್ಲಿ, ಧಾರ್ಮಿಕ ಮಹತ್ವವನ್ನು ಮೀರಿಸಿ, ಲಕ್ಷಾಂತರ ಹಿಂಬಾಲಕರನ್ನು ಪಡೆದ ಏಕೈಕ ವ್ಯಕ್ತಿಯೆಂದರೆ ಅಂಬೇಡ್ಕರ್. ಅವರು ದೈವೀಕರಣಗೊಂಡಿದ್ದಾರೆ. ಅವರ ಸ್ಮಾರಕಗಳು ದಲಿತರ ಕಾಲನಿಗಳಲ್ಲಿ ಚಿರಸ್ಥಾಯಿಯಾಗಿವೆ. ಅವರಿಗೆ ಸರಿಸಾಟಿಯಾಗುವವರು ಪೂರ್ವಕಾಲದ ಧರ್ಮ ಗುರುಗಳು, ರಾಜಕೀಯ ಮುತ್ಸದ್ದಿಗಳಲ್ಲ. "ಜೈ ಭೀಮ್" ಎನ್ನುವುದು ದಲಿತ ಹೋರಾಟದ ತಾರಕ ಮಂತ್ರ. "ಜೈ ಶ್ರೀರಾಮ್" ಘೋಷಣೆಗಿಂತ ಸಣ್ಣ ಸ್ವರದಲ್ಲಿ, ಆದರೆ ಶಕ್ತಿಪೂರ್ಣವಾಗಿ ಹೊರಹೊಮ್ಮುತ್ತಿದೆ. ಅವರು ಕೇವಲ ನಾಯಕರಾಗಿಲ್ಲ. ಪ್ರವಾದಿಗಳೂ ವಿಮೋಚನೆ ನೀಡುವವರೂ ಆಗಿದ್ದಾರೆ.

ದಲಿತರಿಗೆ ಮತ್ತು ದಲಿತೇತರರಿಗೆ ತಮ್ಮನ್ನು ದೈವೀಕರಿಸುವ ಬಗ್ಗೆ, ತಮ್ಮನ್ನು ಸಂತನೆಂದು ಪರಿಗಣಿಸಿ ಸಂತ ಚರಿತ್ರೆಯನ್ನು ಬರೆಯುವುದರ

ಬಗ್ಗೆ ಅಂಬೇಡ್ಕರ್ ಎಚ್ಚರಿಸಿದ್ದರು. ಅವರೊಡನೆ ಹತ್ತಿರವಾಗಿ ತೀವ್ರವಾಗಿ ತೊಡಗಿಸಿಕೊಳ್ಳಲು ಅವರ ಹಿಂಬಾಲಕರಿಗೆ ಸಾಧ್ಯವಾಗಿಲ್ಲ. ಅವರು ದಲಿತರ ಒಬ್ಬ ಅಧಿಕೃತ ಚಿಂತಕರಾಗುತ್ತಾರೆಯೇ ವಿನಾ ಅವರ ಸಹ ಚಿಂತಕರಾಗುವುದಿಲ್ಲ. ದಲಿತರಿಗೂ ಅವರ ಬಗ್ಗೆ ಬರೆಯಲು ಕೆಲವು ಸಂಶಯಗಳು ಇರಲೂಬಹುದು. ಹೀಗಾಗಿ ಅವರು ಬರೆಯಲಿಲ್ಲ. ಇನ್ನು ದಲಿತೇತರರು ಅವರ ಬಗ್ಗೆ ಬರೆಯಲು ಮಾನಸಿಕವಾಗಿ ಅನರ್ಹರಾಗಿರುತ್ತಾರೆ. ದಶಕಗಳಷ್ಟು ಕಾಲ ಅವರ ಚಿಂತನಾಕ್ರಮವನ್ನು ಅಸ್ತವ್ಯಸ್ತವೆಂದು ಪರಿಗಣಿಸಿ, ಅವರನ್ನು ಮೂಲೆಗುಂಪು ಮಾಡಲಾಯಿತು. ಆದರೆ ಒಮ್ಮೆಗೇ ಅವರ ಚಿಂತನೆಗೆ ಲಭಿಸಿದ ಯಶಸ್ಸನ್ನು ಕಂಡು, ಗೆದ್ದೆತ್ತಿನ ಬಾಲ ಹಿಡಿಯುವಂತೆ, ಅವರನ್ನು ತಮ್ಮ ತೆಕ್ಕೆಗೇ ತೆಗೆದುಕೊಂಡರು. ಹಾಗೆಯೇ ಅವರನ್ನು ಉಪಯೋಗಿಸಿಕೊಳ್ಳತೊಡಗಿದರು. ಅವರ ವಿಚಾರಗಳನ್ನು ಪಳಗಿಸಿ, ತಮಗೆ ಬೇಕಾದ ರೀತಿಯಲ್ಲಿ ಹೊಂದಿಸಿಕೊಳ್ಳಲು ಪ್ರಯತ್ನಿಸಿದರು. ಈಗ ಅಂಬೇಡ್ಕರ್‌ರವರಿಗೆ ಗೌರವ ತೋರಿಸುವುದು ಒಂದು ಸಿದ್ಧ ಮಾದರಿಯ ಸೂಚಕ. ಅದು ಅವರ ವಾದಗಳಿಗೆ ನಿಲುವುಗಳಿಗೆ ಮುಖಾಮುಖಿಯಾಗುವುದನ್ನು ತಪ್ಪಿಸಿಕೊಳ್ಳುವ ಸುಲಭಮಾರ್ಗ. ಇದು ಬಿಜೆಪಿಯವರು ಅಂಬೇಡ್ಕರ್‌ರವರನ್ನು ತಮಗೆ ಹೊಂದಿಸಿಕೊಳ್ಳುವ ರೀತಿಯಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಕಾಂಗ್ರೆಸ್‌ನವರು ಅಂಬೇಡ್ಕರ್‌ರವರನ್ನು ಮೂಲೆಗುಂಪು ಮಾಡಿದರು ಎಂದು ಬಿಜೆಪಿಯವರು ಆಪಾದಿಸುತ್ತಿರುವಾಗಲೇ ಅದು ಒಂದು ರಾಜಕೀಯ ಸೂಚನೆಯನ್ನು ಕೊಡುತ್ತಿದೆ. ಅಂಬೇಡ್ಕರ್‌ರವರಿಗೆ ತಲೆತಗ್ಗಿಸುವುದರ ಮೂಲಕ ಅವರು ನಮ್ಮ ಆತ್ಮಗಳನ್ನು ಚುಚ್ಚುವುದರಿಂದ ತಪ್ಪಿಸಿಕೊಳ್ಳಬಹುದು.

ಪ್ರಧಾನಿ ನರೇಂದ್ರ ಮೋದಿಯವರು ಅಂಬೇಡ್ಕರ್ ಸ್ಮಾರಕ ಭವನದ ಶಂಕುಸ್ಥಾಪನೆ ಮಾಡುತ್ತಾ, ಅಂಬೇಡ್ಕರ್‌ರವರನ್ನು ಕೇವಲ ದಲಿತ ನಾಯಕರೆಂದು ಪರಿಗಣಿಸದೆ, ಅದಕ್ಕಿಂತ ಮಹತ್ವದವರೆಂದು ಪರಿಗಣಿಸಬೇಕೆಂಬ ಕರೆ ನೀಡಿದರು. ಇದು ಒಂದು ಅರ್ಥದಲ್ಲಿ ಸತ್ಯ. ನ್ಯಾಯಪರತೆ ಮತ್ತು ಪ್ರಜಾಪ್ರಭುತ್ವಗಳನ್ನು ಆದರ್ಶ ಮೌಲ್ಯಗಳೆಂದು ತಿಳಿಯುವವರು ಅಂಬೇಡ್ಕರ್‌ರವರ ತೀಕ್ಷ್ಣ ಬುದ್ಧಿಮತ್ತತೆಯಿಂದ ಪ್ರಯೋಜನ ಪಡೆಯಬಲ್ಲರು. ಆದರೆ ಅವರನ್ನು ಎಲ್ಲರ ನಾಯಕರೆಂದು ಪರಿಗಣಿಸಬೇಕೆಂದುಕೊಂಡರೆ, ಸರ್ವರಿಗೂ ಸತ್ಯವಾದುದು ಯಾವುದು ಎಂಬ ಆಳವಾದ ಪ್ರಶ್ನೆಯೊಂದು ಉದ್ಭವಿಸುತ್ತದೆ. ಅವರು ಹಲವಾರು ಸಾರ್ವಕಾಲಿಕ ಸತ್ಯಗಳನ್ನು ಹೇಳಿದರು. ಅವುಗಳನ್ನು ಒಪ್ಪಿಕೊಂಡಾಗ ಅವರನ್ನು ನಾಯಕರೆಂದು ಪರಿಗಣಿಸಿದ ಹಾಗೆ ಆಗುತ್ತದೆ. ದಲಿತರು ಸಂಪೂರ್ಣವಾಗಿ ವಿಮೋಚನೆಗೊಂಡಾಗ ಮಾತ್ರ ಅಂತಹ ಹಕ್ಕನ್ನು ಪಡೆಯಲು ನಮಗೆ ಸಾಧ್ಯ. ಆ ಹಕ್ಕನ್ನು ಪಡೆಯುವ ಜವಾಬ್ದಾರಿ ನಮ್ಮ ಮೇಲಿದೆ.

ಅನ್ಯಾಯವನ್ನು ಎತ್ತಿ ತೋರಿಸುವುದೇ ಅವರ ಜೀವನದ ಹಾಗೂ ವೃತ್ತಿಯ ಪರಮಧ್ಯೇಯವಾಗಿ ಕಾಣುತ್ತದೆ. ಅನ್ಯಾಯಗಳನ್ನು ಮರೆಮಾಚಿಸುವ

**ಮಾತು**

ಮಾತು – ಮುತ್ತು
ಮೌನ – ಬಂಗಾರ
ಹಾಗಾಗಿ – ನಲ್ಲ
ತೊಡಿಸುವನು
ಬಂಗಾರದ ಒಡವೆ!

**ಶೋಭಾ ಪ್ರಮೋದ್**
ಮನ್‌ಗಾಂವ್, ರಾಯಗಢ

ಯಾವುದೇ ಗುರಿಯಾಗಲಿ, ದೇಶಾಧಿಕಾರವಾಗಲಿ, ರಾಷ್ಟ್ರೀಯತೆಯಾಗಲಿ, ಸಂಸ್ಕೃತಿ ಸಂಪತ್ತಾಗಲಿ, ಅವರಿಗೆ ನಗಣ್ಯವಾಗಿತ್ತು. ಅರುಣ್ ಶೌರಿಗಳಂತಹ ವಿಮರ್ಶಕರು ಅವರು ರಾಷ್ಟ್ರೀಯವಾದಿಗಳಾಗಿರಲಿಲ್ಲ ವೆಂದು ಟೀಕಿಸುತ್ತಾರೆ. ಆದರೆ ಅವರ ಪ್ರಕಾರ ಯಾವ ರಾಷ್ಟ್ರದ ಬುನಾದಿ ನ್ಯಾಯಬದ್ಧವಾಗಿಲ್ಲವೋ ಅಂತಹ ರಾಷ್ಟ್ರವು ರಾಷ್ಟ್ರವೇ ಅಲ್ಲ. ಈ ದೇಶದ ಎಲ್ಲ ವಿಚಾರಧಾರೆಗಳೂ ದಲಿತರ ಶೋಷಣೆಯನ್ನು, ಅವರ ಆಂತರಿಕ ವಿಚಾರಗಳನ್ನು ಸಂಕೀರ್ಣವಾಗಿ ಮರೆಮಾಚಲು ಹೂಡಿ ಷಡ್ಯಂತ್ರವೇ ಆಗಿವೆ. ಅವುಗಳು ದಲಿತರ ಮೇಲೆ ನಡೆಸಿದ ಹಸಿ ಹಸಿ ಹಿಂಸೆ, ಮೋಸದ ದಬ್ಬಾಳಿಕೆ, ದಿನನಿತ್ಯದ ಅವಮಾನಗಳಿಂದ ನಮ್ಮ ಗಮನವನ್ನು ಬೇರೆಡೆಗೆ ಸೆಳೆಯುವ ಉಪಾಯಗಳಿವೆ. ದಲಿತರ ಮೇಲೆ ನಡೆದ ಒರಟು ಹಿಂಸೆಯನ್ನು ಇನ್ನೂ ನಮ್ಮ ಸಮಾಜ ನಿಜವೆಂದು ಒಪ್ಪಿಕೊಂಡಿಲ್ಲ. ಕೆಲವೆಡೆ ಒಪ್ಪಿಕೊಂಡರೂ, ಅದರ ಮಹತ್ವವನ್ನು ಅಸತ್ಯಗಳಿಂದ, ರಕ್ಷಣಾತ್ಮಕ ಮಾತುಗಳಿಂದ ಮಸುಕುಗೊಳಿಸಲಾಗಿದೆ.

ಅಂಬೇಡ್ಕರ್‌ರವರು ಗಾಂಧಿಯವರಿಗಿಂತ ನೆಹರೂರವನ್ನು ಹೆಚ್ಚು ಟೀಕಿಸುತ್ತಾರೆ. ನೆಹರೂ ಭಾರತೀಯ ಸಮಾಜದ ಮಧ್ಯದಲ್ಲೇ ವ್ಯಕ್ತವಾಗಿದ್ದ ಹಿಂಸೆಯ ಬಗ್ಗೆ ಚಕಾರವೆತ್ತದೆ, ಜೆಫರ್‌ಸನ್ ಮಾಡಿದ ಘೋಷಣೆಯಿಂದ ಸ್ಫೂರ್ತಿ ಪಡೆಯುತ್ತಾರೆ. ಈ ದೇಶದಲ್ಲಿ ಅರವತ್ತು ಲಕ್ಷ ಜನ ಅಸ್ಪೃಶ್ಯರಾಗಿರುವ ಬಗ್ಗೆ ಯಾವುದೇ ನಾಚಿಕೆಯಾಗಲಿ ಪಶ್ಚಾತ್ತಾಪವಾಗಲಿ ಅವರಲ್ಲಿ ಉಂಟಾಗುವುದಿಲ್ಲ. ಅವರು ಸೃಷ್ಟಿಸಿದ ಸಾಹಿತ್ಯ ಪ್ರವಾಹದಲ್ಲಿ ಇದರ ಎಳ್ಳಷ್ಟೂ ಮಾಹಿತಿಯಿಲ್ಲ.

ಅಂಬೇಡ್ಕರ್‌ರವರ ಕೋಪ ಎಲ್ಲಿಯೂ ಪ್ರತೀಕಾರಕ್ಕೆ ತಿರುಗುವುದಿಲ್ಲ. ಅದು ಮೊನಚಾದ ರಾಜಕೀಯ ಭಾಷ್ಯವಾಗುತ್ತದೆ. ಈ ಪ್ರತೀಕಾರರಹಿತ ಭಾವನೆಯೇ ಅವರನ್ನು ತೀವ್ರಗಾಮಿಗಳಾಗಲು ಬಿಡುವುದಿಲ್ಲ. ಕೆಲವು ದಲಿತರ ನ್ಯಾಯಬದ್ಧವಾದ ಅನಿಸಿಕೆಯೆಂದರೆ ದಲಿತರನ್ನು ಬಂಧಿಸಿರುವ ಈ ಸಮಾಜದ ರಾಚನಿಕಬದ್ಧವಾದ ಶೋಷಣೆಯ ಬಗ್ಗೆ ಅವರಿಗೆ ತೀವ್ರ ಕೋಪವಿಲ್ಲದೆ ಇರುವುದಕ್ಕೆ ನೆಪವೇನೆಂದರೆ ಅವರಲ್ಲಿ ಪ್ರತೀಕಾರ ಭಾವವಿಲ್ಲದೆ ಇರುವುದಷ್ಟೇ. ಆದರೆ ಗಾಂಧಿಯವರ ಜತೆ ಅಂಬೇಡ್ಕರ್ ತೊಡಗಿಕೊಳ್ಳುವಾಗ, ಸಬಲೀಕರಣದಿಂದ ಮಾತ್ರ ದಲಿತರ ವಿಮೋಚನೆ ಸಾಧ್ಯ ಎಂದು ಸ್ಪಷ್ಟವಾಗಿ ಹೇಳುತ್ತಾರೆ. ದಲಿತರ ಸಮಸ್ಯೆಯನ್ನು ಮೇಲುಜಾತಿಯವರ ಸಮಸ್ಯೆಯೆಂದು ಪರಿಗಣಿಸುವ ಗಾಂಧಿಯವರ ವಾದವನ್ನು ಸಾರಾಸಗಟಾಗಿ ತಿರಸ್ಕರಿಸುತ್ತಾ ಆ ವಾದವು ದಲಿತರ ಸಬಲೀಕರಣಗೊಳಿಸುವುದನ್ನು ತಪ್ಪಿಸುವ ಹುನ್ನಾರವೆಂದು ತಿಳಿಸುತ್ತಾರೆ. ದಲಿತರು ತಟಸ್ಥ ಬಲಿಪಶುಗಳಾಗುವ ಬಗ್ಗೆ ವ್ಯಗ್ರರಾಗುವ ಅಂಬೇಡ್ಕರ್‌ರವರ ವಿಚಾರಗಳು ದಲಿತರನ್ನು ಎಷ್ಟು ಬಲಿಪಶುಗಳಾಗಿಸಿವೆ ಎನ್ನುವ ವಿಚಾರವನ್ನು ಸ್ಪಷ್ಟಗೊಳಿಸುತ್ತವೆ. ದಲಿತ ವಿಮೋಚನೆಯೆಂಬುದು ಕೇವಲ ಕೆಲವು ಸಂವಿಧಾನಾತ್ಮಕ ಸೂಚಕಗಳಿಗೆ ಸೀಮಿತವಾಗಿರುವುದಕ್ಕೆ ಅಂಬೇಡ್ಕರ್ ಪ್ರತಿಪಾದಿಸಿದ ಸಂವಿಧಾನಾತ್ಮಕ ರಾಜಕೀಯವೇ ಕಾರಣವಾಗಿದೆ. ಅಂಬೇಡ್ಕರ್‌ರವರ ಬರವಣಿಗೆಗಳು ಕೂಡ ಸಂವೇದನಾ ರಹಿತವಾಗಿ ರಕ್ಷಣಾತ್ಮಕವಲ್ಲದೆ ಇರುವುದನ್ನು ನೋಡಬಹುದು. ಒಂದು ವಿಚಿತ್ರ ಸಮ್ಮಿಶ್ರಗಳಿಂದಾಗಿ, ಅವರು ವ್ಯವಸ್ಥೆಯನ್ನು ಅಸ್ಥಿರಗೊಳಿಸುವ ಸಿಟ್ಟಿನ ವ್ಯಕ್ತಿಯಾಗುವುದರ ಬದಲು ಸಮಾಧಾನಚಿತ್ತದಿಂದಿರುವ ಪ್ರಜಾಪ್ರಭುತ್ವವಾದಿಯಾಗಿ ರೂಪುಗೊಂಡಿದ್ದಾರೆ. ಅವರನ್ನು ಗೌರವದಿಂದ ನೋಡಿದರೆ ಅವರು ಒಮ್ಮತದಲ್ಲಿ ರೂಪುಗೊಂಡ ವ್ಯಕ್ತಿಯಾಗಿ ಕಾಣಿಸುತ್ತಾರೆ. ಆದರೆ, ನಿಜದಲ್ಲಿ ಅವರು ಭಾರತದ ಆತ್ಮದಲ್ಲಿರುವ ಮೂಲಭೂತ ಸಂಘರ್ಷಗಳ ಹೃದಯಭಾಗದಲ್ಲಿದ್ದಾರೆ.

೨

ನಮ್ಮ ಚಿಂತನೆಗಳನ್ನು ಅಂಬೇಡ್ಕರ್‌ರವರು ಬೇರೆ ಬೇರೆ ಮಟ್ಟದಲ್ಲಿ ಅಸ್ವಸ್ಥಗೊಳಿಸುತ್ತಾರೆ. ಅವರ ತಲೆಮಾರಿನ ನಾಯಕರುಗಳ ಪೈಕಿ ಅವರ ಸ್ಪಷ್ಟತೆ ನೇರವಾಗಿದೆ. ವಸ್ತುಸ್ಥಿತಿ ಮತ್ತು ತರ್ಕಬದ್ಧತೆಯನ್ನು ಅವರು ನಿರ್ವಹಿಸುವ ರೀತಿ ಅಪ್ರತಿಮವಾದದ್ದು. ಇದಕ್ಕೆ ಅವರ ಡಾಕ್ಟರಲ್ ಪ್ರಬಂಧವೇ ಸಾಕ್ಷಿ. ಅವರ ಪ್ರಬುದ್ಧತೆಯನ್ನು ಅವರು ಆರ್ಥಿಕ ನೀತಿಗಳ ಬಗ್ಗೆ ವಿಸ್ತೃತವಾಗಿ ಮಾಡಿರುವ ವಿಶ್ಲೇಷಣೆಯಲ್ಲಿ, ಮುಂಬಯಿಯ ವಿಧಾನ ಮಂಡಲ ಮತ್ತು ಪರಿಷತ್ತುಗಳಲ್ಲಿ ಕೆಲಸ ಮಾಡಿದ ರೀತಿಯಲ್ಲೂ ಕಾಣಬಹುದು. ವೈದುಷ್ಯ, ಜ್ಞಾನ ಮತ್ತು ಅವರು ನೀಡುವ ಉಲ್ಲೇಖಗಳ ವ್ಯಾಪ್ತಿ ಯಾರಿಗೂ ಸಾಟಿಯಾಗಬಲ್ಲದು. ಅವರ "ಥಾಟ್ಸ್ ಆನ್ ಪಾಕಿಸ್ತಾನ್" ಪ್ರಬಂಧವು ಇದಕ್ಕೆ ನಿದರ್ಶನವಾಗಿದೆ. ಇನ್ನೊಂದು ಮಟ್ಟದಲ್ಲಿ ನಮ್ಮೆಲ್ಲರ ಬೂಟಾಟಿಕೆಯನ್ನು ಅವರು ನಿರಂತರವಾಗಿ ತೆರೆದಿಡುತ್ತಲೇ ನಮ್ಮ ಚಿಂತನಾ ಕ್ರಮವನ್ನು ಅಸ್ತವ್ಯಸ್ತಗೊಳಿಸುತ್ತಾ ಹೋಗುತ್ತಾರೆ. ನ್ಯಾಯಪರತೆಯ ನೈಜಗುಣವನ್ನು ಅವರು ಅತ್ಯಂತ ಆಳವಾಗಿ ಪ್ರತಿಪಾದಿಸುತ್ತಾರೆ. ಅವರು ಗಾಂಧಿಯವರನ್ನು ಪ್ರಶ್ನಿಸಿದ ರೀತಿಯೂ ಇದಕ್ಕೆ ಪೂರಕವಾಗಿಯೇ ಇದೆ. ಗಾಂಧಿಯವರು ಅಹಿಂಸೆಯ ಪ್ರತಿಪಾದಕರಾಗಿದ್ದರೂ, ಅದರ ಆಳಕ್ಕೆ ಅವರು ಇಳಿಯಲಿಲ್ಲ ಎನ್ನುವುದು ಅಂಬೇಡ್ಕರ್‌ರವರ ದೂರು. ಅಹಿಂಸಾವಾದದ ಹರಿಕಾರರಾದ ಗಾಂಧೀಜಿಯವರು ಅಹಿಂಸೆಯನ್ನು ಮಾನಸಿಕವಾದ

ತೀವ್ರ ಒತ್ತಡ ತರಲು ತಂತ್ರವನ್ನಾಗಿ ಬಳಸಿದರೆಂಬುದು ಅಂಬೇಡ್ಕರ್‌ರವರ ವಾದ. ಗಾಂಧಿಯವರು ಅಹಿಂಸೆಯನ್ನು ತಮ್ಮೊಳಗೆ ತೆಗೆದುಕೊಂಡು ಹೋದದ್ದು ಹೀಗೆಯೇ. ಅಂಬೇಡ್ಕರ್‌ರವರ ಈ ದೂರನ್ನು ಗಾಂಧಿಯವರು ಒಪ್ಪಿಕೊಂಡಿದ್ದರು. ಸಂವಿಧಾನಾತ್ಮಕ ಸಂಸ್ಕೃತಿಯನ್ನು ಮತ್ತು ಭೇದವನ್ನು ಒಪ್ಪದೆ ಸತ್ಯಾಗ್ರಹದಲ್ಲಿ ತೊಡಗುವುದು ಒಂದು ರೀತಿಯಲ್ಲಿ ಸ್ವರತಿ ಮತ್ತು ಒಂದು ರೀತಿಯ ಹಿಂಸೆ ಕೂಡ. ಅನ್ಯಾಯದ ವಿರುದ್ಧ ಸಂವಿಧಾನಾತ್ಮಕ ಕ್ರಮಗಳು ನಿಲ್ಲಬಲ್ಲದೆಂಬ ಅಂಬೇಡ್ಕರ್‌ರವರ ಅಚಲ ನಂಬಿಕೆ ಗಾಂಧಿಯವರು ಕಲ್ಪಿಸಿಕೊಳ್ಳಲಾರದ ರೀತಿಯ ಅಹಿಂಸೆಯ ಪ್ರತಿಪಾದನೆಯಾಗಿದೆ. ಆಳವಾದ ಶೋಷಣೆಯನ್ನು ಹಿಂಸೆಯ ವಿಸರ್ಜನೆಯಾಗಿ ಪರಿವರ್ತಿಸುವುದಕ್ಕೆ ಹೆಚ್ಚಿನ ಧೈರ್ಯ ಬೇಕಾಗುತ್ತದೆ. ಹೀಗೆ ದಲಿತರನ್ನು ಸಂವಿಧಾನಕ್ಕೆ ಬದ್ಧರಾಗುವಂತೆ ಮಾಡಿ, ಅವರ ಸಿಟ್ಟಿಗೆ, ಕೋಪಕ್ಕೆ ಕಡಿವಾಣ ಹಾಕುವುದರ ಮೂಲಕ ಅಂಬೇಡ್ಕರ್‌ರವರು ಗಾಂಧಿಯವರಿಗಿಂತ ಹೆಚ್ಚು ಅಹಿಂಸಾವಾದಿಗಳಾಗಿದ್ದಾರೆ.

ಸಂಪತ್ತೆನ್ನುವುದು ಸಮಾಜದಲ್ಲಿ ತರಬಹುದಾದ ತೀವ್ರ ಬದಲಾವಣೆಗಳನ್ನು ಗ್ರಹಿಸಿದ ಕೆಲವೇ ನಾಯಕರಲ್ಲಿ ಅಂಬೇಡ್ಕರ್‌ರವರೂ ಒಬ್ಬರು. ಏಕೆಂದರೆ ಉಳ್ಳ ಮೇಲುಜಾತಿಯವರು ಸಂಪತ್ತನ್ನು ತೊರೆಯಬೇಕೆನ್ನುವುದು ಉದಾತ್ತವೆನಿಸಬಹುದು. ಕೆಳಜಾತಿಯವರಲ್ಲಿ ತೊರೆಯುವುದಕ್ಕೆ ಏನಿದೆ? ಸಂಪತ್ತನ್ನು ತೊರೆಯಬೇಕಾದ ಆದರ್ಶದ ಬಗ್ಗೆ ಅವರಿಗೆ ಹೇಳುವುದು ಹಾಸ್ಯಾಸ್ಪದವೆನಿಸುತ್ತದೆ. ಭಾರತವನ್ನು ಆಧುನಿಕತೆಯೆಡೆಗೆ ಕರೆದೊಯ್ಯಲು ಪ್ರಯತ್ನಿಸುವವರು ತಮ್ಮ ಅವನತಿಯನ್ನು ನಿರ್ಲಕ್ಷಿಸುತ್ತಾರೆ ಎನ್ನುವ ಮಾತುಗಳು ಸಂಪತ್ತಿನ ಬಗ್ಗೆ ಅನನ್ಯವಾದಂತಹ ಸಾಮಾಜಿಕ ಮೆಚ್ಚಿಗೆಯನ್ನು ಹೊಂದಿರುವವರ ವಿಚಾರದಿಂದ ಪ್ರೇರಿತವಾದದ್ದು. ಅಂಬೇಡ್ಕರ್‌ರವರು ಹಣದ ಪ್ರೀತಿಯ ಬಗ್ಗೆ ಮಾತನಾಡುವಾಗ ಅದೊಂದು ಸಹಜ ವಿಚಾರವೆನ್ನುವಂತೆ ಪರಿಗಣಿಸುತ್ತಾರೆ. ಹಣದ ಪ್ರೀತಿಯೂ ವೈವಿಧ್ಯಮಯವಾದ ನಡತೆಗಳನ್ನು ತರಬಹುದೆಂದು ತಿಳಿಯುತ್ತಾರೆ. ಹಣ ಮತ್ತು ವೈವಿಧ್ಯಗಳ ಪರಸ್ಪರ ಸಂಬಂಧ ಮತ್ತು ಅವಿಲ್ಲದೆ ಉಂಟಾಗಲಾರದ ಏಕತಾನದ ಏಕರೂಪತೆಗಳಿಗಿಂತ ನೀತಿಪಾತಗಳಿಂದಲೇ ಹಣದಾಸೆಯು ಉಲ್ಬಣವಾಗಬಲ್ಲದು. ಹೀಗೆ ಅಂಬೇಡ್ಕರ್‌ರವರು ನೆಮ್ಮದಿಗೆಡಿಸುತ್ತಾರೆ. ಗಾಂಧಿಯವರಿಗೆ ಅವರು ಸಂವಿಧಾನಾತ್ಮಕ ತರ್ಕದಿಂದ ಅಹಿಂಸೆಯ ಸಾಧ್ಯತೆಗಳ ಬಗ್ಗೆ ದೀರ್ಘವಾಗಿ ಹಿಗ್ಗಿಸಿ ಹೇಳುತ್ತಾರೆ. ನೆಹರೂರವರು ಬಡಬಡಿಸುವ ಆಧುನಿಕತೆಯನ್ನು ಅವರು ವೈವಿಧ್ಯತೆಯ ಜತೆ ಮೇಳೈಸಿ ಮಾತನಾಡುತ್ತಾರೆ.

೩

ಹಿಂದೂ ಸಮಾಜದ ಕೇಂದ್ರದಲ್ಲಿ ಉಪಸ್ಥಿತವಾಗಿರುವ ಹಿಂಸೆಯ ಬಗ್ಗೆ ಅಂಬೇಡ್ಕರ್‌ರವರು ಮುಂದಿಡುವ ವಿಚಾರಗಳು ನಮ್ಮನ್ನು ವಿಚಲಿತಗೊಳಿಸುತ್ತವೆ. ಹಿಂಸೆಯು ಒಂದು ದಾರಿಗೆಟ್ಟ ಕ್ರಿಯೆಯಲ್ಲ. ಅದೊಂದು ತ್ಯಾಜ್ಯಮಾಡಬೇಕಾದ ವಸ್ತು. ಅದನ್ನು ವರ್ಜಿಸಿದರೆ, ಈ ಸಮಾಜದ ಆಳದಲ್ಲಿರುವ ಅದರ ಸೌಮ್ಯಗುಣ ಕಾಣಬಹುದು. ಹಿಂಸೆ ಈ ಸಮಾಜದ ಅಸ್ಮಿತೆಯನ್ನು ಉಳಿಸಲು ಮತ್ತು ಸಕ್ರಿಯವಾಗಲು ಮುಖ್ಯವಾದದ್ದು. ದಲಿತರಿಗೆ ನ್ಯಾಯ ಸಿಗಬೇಕಾದರೆ, ಹಿಂದೂ ಧರ್ಮದ ವಿರುದ್ಧ ಅವರು ಹೂಡಲೇಬೇಕಾದ ಯುದ್ಧದ ವಿಚಾರವಾಗಿ ಅಂಬೇಡ್ಕರ್ ಗಾಂಧಿಯವರಿಗೆ ಹೀಗೆ ಹೇಳುತ್ತಾರೆ : ಹಿಂದೂಗಳಿಂದ ಮತ್ತು ಹಿಂದೂ ಧರ್ಮದ ವೈಫಲ್ಯಗಳಿಂದ ನನಗೆ ಅವುಗಳ ಬಗ್ಗೆ ಜಿಗುಪ್ಸೆ ಮತ್ತು ತಿರಸ್ಕಾರ ಭಾವಗಳು ಉಂಟಾಗಿಲ್ಲ. ಅವರುಗಳ ತಪ್ಪು ಆದರ್ಶಗಳಿಂದ ಮತ್ತು ಅವರು ತಪ್ಪಾಗಿ ನಡೆಸುವ ಸಾಮಾಜಿಕ ಜೀವನದಿಂದ ಅವರ ಬಗ್ಗೆ ನನಗೆ ಹೇಯ ಭಾವ ಬರಲು ಕಾರಣವಾಗಿದೆ. ಈ ಮಾತುಗಳು ನಮ್ಮ ಸಮಕಾಲೀನ ಹೋರಾಟಗಳಿಗೆ ಅತಿ ಮುಖ್ಯವೆನಿಸುತ್ತದೆ. ಸುಧಾರಣೆಗೊಂಡ ನಮ್ಮ ಪರಂಪರೆಯಿಂದ ಸರ್ವರಿಗೂ ನ್ಯಾಯ ಲಭಿಸುವುದಿಲ್ಲ. ಅದು ಸಾಧ್ಯವಾಗುವುದು ಈ ಪರಂಪರೆಯ ಸರ್ವನಾಶದಿಂದ ಮಾತ್ರ. ನಮ್ಮ ವಿಶ್ವವಿದ್ಯಾಲಯಗಳ ಕ್ಯಾಂಪಸ್ಸುಗಳಲ್ಲಿ ಮೂಡುತ್ತಿರುವ ಹೊಸ ದಲಿತ ಪ್ರಜ್ಞೆಯು ಸಮಕಾಲೀನವಾಗಿ ಭಾರತೀಯ ಪರಂಪರೆಯು ಇಡುತ್ತಿರುವ ತಪ್ಪು ಹೆಜ್ಜೆಗಳನ್ನು ಗುರುತಿಸುತ್ತಿರುವುದನ್ನು ಕಾಣಬಹುದು. ಅಂಬೇಡ್ಕರ್–ಪೆರಿಯಾರ್ ಕಾರ್ಯಕರ್ತರು ಮತ್ತು ಎಬಿವಿಪಿಯ ನಡುವಣ ಸಂಘರ್ಷದಲ್ಲಿ ವಿದ್ಯಾರ್ಥಿ ರಾಜಕೀಯವು ಅಸ್ಮಿತೆಯ ವಿಷಯವಾಗಿರುವುದನ್ನು ಗಮನಿಸಬೇಕಾಗಿದೆ. ಆಶ್ಚರ್ಯವಾಗುವ ಹಾಗೆ ಸಮಾಜದ ಎಲ್ಲ ಜಾತಿಗಳನ್ನೂ ಬಂಧಿಸಿಟ್ಟ ಬ್ರಾಹ್ಮಣತ್ವದ ವಿಚಾರಗಳು ಅಂಬೇಡ್ಕರ್‌ರವರ ವಾದಗಳಲ್ಲಿ ಪ್ರಮುಖವಾಗಿವೆ. ಬ್ರಾಹ್ಮಣತ್ವವು ಎಲ್ಲ ಬ್ರಾಹ್ಮಣೇತರರ ಚಿಂತನೆಗಳನ್ನು ಕಲುಷಿತಗೊಳಿಸಿ, ಅವುಗಳನ್ನು ತನ್ನ ಕಬಂಧ ಬಾಹುಗಳಿಂದ ಹಿಡಿದು, ನ್ಯಾಯವು ಸಿಗುವ ಮೊದಲೇ ಅದನ್ನು ಕೆಡವಿಹಾಕುವ ಅನನ್ಯ ಸಿದ್ಧಾಂತವಾಗಿದೆ.



ಬರ-ಬರ ಅಂತೀರಲ್ಲ- ನಾಳೈದು ಬಾರ್ ಹಾಕ್ಸೋಣ..

ಕುಟಿಲವಾದದ್ದೂ ದುರ್ಭರವಾದದ್ದೂ ಆದ ಜಾತಿ ಪದ್ಧತಿಯೆಂಬ ರಚನೆಯ ವಿರುದ್ಧ ಅಂಬೇಡ್ಕರ್‌ರವರ ಅವಿರತ ಪ್ರಯತ್ನಗಳು ವಿಶ್ಲೇಷಣಾತ್ಮಕವಾಗಿರುವುದನ್ನು ಗಮನಿಸಬಹುದು. ಅವರ ಎಲ್ಲ ಪ್ರಬಂಧಗಳಲ್ಲೂ ಅವರ ಆಳವಾದ ಸಾಮಾಜಿಕ ಅರಿವೂ ಚಾರಿತ್ರಿಕ ಒಳನೋಟಗಳೂ ಎದ್ದು ಕಾಣುತ್ತವೆ. ಬೇರೆಯವರನ್ನು ಅಧೀನಪಡಿಸಿಕೊಳ್ಳುವ ಬಗ್ಗೆ ಆರ್ಯನರ ಆಕ್ರಮಣ ಸಿದ್ಧಾಂತ, ಜನಾಂಗ ಭೇದದ ಪರಿಕಲ್ಪನೆಗಳು– ಎಲ್ಲವನ್ನೂ ಅಂಬೇಡ್ಕರ್ ತಿರಸ್ಕರಿಸುತ್ತಾರೆ. ಎಲ್ಲಕ್ಕಿಂತ ಜಾತಿಗಳ ಕ್ರಿಯಾಶೀಲತೆಯನ್ನು ಕುರಿತಾದ ಸಿದ್ಧಾಂತವು ಅವರ ತೀವ್ರ ತಿರಸ್ಕಾರಕ್ಕೆ ಒಳಗಾಗುತ್ತದೆ. ಕ್ರಿಯಾಶೀಲತೆಗಿಂತ ಕ್ರಿಯಾಶೀಲ ವ್ಯಕ್ತಿಗಳ ನಡುವೆ ಇರುವ ತಾರತಮ್ಯವೇ ಇಲ್ಲಿ ಮುಖ್ಯವಾಗುತ್ತದೆ. ಜಾತಿಪದ್ಧತಿಯ ವಿಲಕ್ಷಣ ಸ್ವಭಾವವನ್ನು ಭೌತಿಕವಾಗಿಯಾಗಲೀ ಕ್ರಿಯಾಶೀಲ ಗುಣಗಳಿಂದಾಗಲೀ ವಿವರಿಸಲು ಸಾಧ್ಯವಿಲ್ಲ. ಕುಟಿಲತೆಯ ಭದ್ರ ಬುನಾದಿಯಿಂದ ಹೊರಹೊಮ್ಮಿದ ಜಾತಿಗಳ ಮೂಲ ಜನಕರು ಈ ದೇಶದ ವೈದಿಕ ಮಹಾಶಯರು. ಅವರು ಸರ್ವರೂ ಮುನ್ನಡೆಯಲು ಬೇಕಾದ ಶಿಕ್ಷಣ, ಅಧಿಕಾರ ಮತ್ತು ಸಂಪತ್ತುಗಳನ್ನು ಅಸ್ಪೃಶ್ಯರಿಗೆ ಮಾತ್ರ ದಕ್ಕದಂತೆ ನೋಡಿಕೊಂಡವರು. ಇನ್ನೊಂದು ಮಗ್ಗುಲಲ್ಲಿ ಸಮಾಜದ ಶ್ರೇಣೀಕರಣಗೊಂಡು, ಸಮಾನ ಜಾತಿಗಳ ನಡುವೆ ನಿರಂತರ ದುರ್ಭರ ಜಗಳಗಳನ್ನು ತಂದಿಟ್ಟವರು. ಯಾವ ಕ್ರಿಯಾಶೀಲ ಸಮರ್ಥನೆಯನ್ನೂ ಮಾಡಿಕೊಳ್ಳಲಾಗದ ಬ್ರಾಹ್ಮಣತ್ವ. ಅದು ಸೃಷ್ಟಿಸಿದ ಅಧಿಕಾರವನ್ನು ಹೇರುವ ತಂತ್ರಗಾರಿಕೆಯಿಂದ ಕೂಡಿದ ಈ ವ್ಯವಸ್ಥೆಯ ವಿರುದ್ಧ ಅಂಬೇಡ್ಕರ್‌ರವರ ಕೋಪ ಸಹಜವಾಗಿದೆ.

ಹಿಂದುತ್ವದ ಜತೆ ತೊಡಗಿಕೊಳ್ಳುವಾಗ, ಜಾತಿಪದ್ಧತಿಯನ್ನು ಮುಖಾಮುಖಿಯಾಗಿ ಎದುರಿಸುವ ಬದಲು, ಅದರ ಸಮರ್ಥನೆಯನ್ನು ವಿಚಿತ್ರ ರೀತಿಯಲ್ಲಿ ಮಾಡಲು ಕೆಲವು ಹಿಂದುತ್ವವಾದಿಗಳು ತೊಡಗುತ್ತಾರೆ – "ಒಂದು ಘಟ್ಟದಲ್ಲಿ ಜಾತಿಗಳು ಕ್ರಿಯಾಶೀಲವಾಗಿತ್ತು : ಜಾತಿಗಳು ಹಿಂದುಗಳೆಲ್ಲರಲ್ಲೂ ಹೊಂದಿಕೊಳ್ಳುವ ಗುಣವನ್ನು ಹೊಂದಿತ್ತು. ಚಲನಶೀಲವೂ ಆಗಿತ್ತು. ಜಾತಿಯೆನ್ನುವುದು ಮಾಡುವ ಕೆಲಸಗಳಿಂದ ನಿರ್ಧಾರವಾಗುತ್ತಿತ್ತೇ ವಿನಾ ಹುಟ್ಟಿನಿಂದಲ್ಲ." ಇಂತಹ ರಕ್ಷಣಾತ್ಮಕವಾದ ವಿಚಾರಗಳು ಈ ಸಾಮಾಜಿಕ ಅನಿಷ್ಟ ಪದ್ಧತಿಯ ವಿರುದ್ಧದ ದನಿಯನ್ನು ಮೊಂಡಾಗಿಸುವ ತಂತ್ರವಾಗಿಯೇ ಕಾಣುತ್ತದೆ.

ಇದಕ್ಕಿಂತ ನೀಚ ವಿಚಾರವೆಂದರೆ, ಹಿಂದುತ್ವವು ಸಮಾನತೆಯನ್ನು ದೃಢೀಕರಿಸಿತ್ತು ಎಂದು ಪ್ರತಿಪಾದಿಸುವುದು. ಈ ಸಮಾನತೆಯು ದುರ್ಭರವಾದ ಸಾಮಾಜಿಕ ಶ್ರೇಣಿಗಳಿಗೆ ಸರಿಹೊಂದುವ ರೀತಿಯಲ್ಲಿ ಅಳವಡಿಸಿದ ಅಭೌತಿಕ ಸಮಾನತೆಯಾಗಿತ್ತು. ಅಂಬೇಡ್ಕರ್‌ರವರು ಪುರುಷಸೂಕ್ತವನ್ನು ವೇದಗಳ ಮಧ್ಯೆ ಬಹಳ ಇತ್ತೀಚೆಗೆ ಪ್ರಕ್ಷೇಪ ಮಾಡಲಾಯಿತೆಂದು ಅಭಿಪ್ರಾಯಪಡುತ್ತಾರೆ. ಸಾಮಾಜಿಕ ಮತ್ತು ಆಧ್ಯಾತ್ಮಿಕ ಶ್ರೇಣಿಗಳ ನಡುವೆ ನಿಕಟವಾದ ಸಂಬಂಧವಿರುವುದು ಹೊಸ ವಿಷಯವಲ್ಲ.

ವೇದವನ್ನಾಗಲೀ, ಗೀತೆಯನ್ನಾಗಲೀ ಎಷ್ಟೇ ಸಾಂಕೇತಿಕವಾಗಿ ಓದಿದರೂ, ಸಾಮಾಜಿಕ ಶ್ರೇಣೀಕರಣವನ್ನು ಆಧ್ಯಾತ್ಮಿಕತೆಗೆ ಪೂರಕವಾಗಿ ಉಪಯೋಗಿಸಿಕೊಳ್ಳಲಾಯಿತು ಎಂಬುದಂತೂ ಖಚಿತ. ಇವೆರಡನ್ನೂ ಬೇರೆ ಬೇರೆಯಾಗಿ ನೋಡುವುದು ಅಪ್ರಮಾಣಿಕತೆಯ ಪ್ರತೀಕವಾಗಿದೆ. ಆದ್ದರಿಂದ ಅಂಬೇಡ್ಕರ್‌ರವರು ಹಿಂದುತ್ವದ ಜತೆ ತೊಡಗಿಸಿಕೊಳ್ಳುವುದು ಕೇವಲ ಸಾಮಾಜಿಕ ವಿಮರ್ಶೆಗಾಗಿ ಅಲ್ಲ. ಈ ವಿಮರ್ಶೆಯ ಮೂಲಕ ಹಿಂದುತ್ವದ ಬೌದ್ಧಿಕ ಕಟ್ಟಡವನ್ನು ನಿರ್ನಾಮ ಮಾಡುವ ಹಕ್ಕನ್ನು ಪ್ರತಿಪಾದಿಸುತ್ತಾರೆ. ನೀವು ಭಾರತೀಯ ಬೌದ್ಧಿಕ ಪರಂಪರೆಯ ಬಿಕ್ಕಟ್ಟಿನಲ್ಲಿ ಕಿಂಚಿತ್ತೂ ಅಪ್ರಾಮಾಣಿಕತೆ ಇಲ್ಲದವರಾದರೆ ನೀವು ಅದರ ಬೇರುಗಳಲ್ಲಿರುವ ಪಾಶ್ಚಾತ್ಯ ಪ್ರಭಾವಗಳನ್ನು ನೋಡದೆ, ಕೆಲವು ಸರಳ ಸಾಮಾಜಿಕ ಪ್ರಶ್ನೆಗಳನ್ನು ಕೇಳುವುದರ ಮೂಲಕ ಪರಂಪರೆಯನ್ನು ಸರಿಯಾಗಿ ತಿಳಿಯಬಹುದಾಗಿದೆ. ದುರ್ಭರತೆ, ಅಮಾನೀಯವಾದ ಶ್ರೇಣೀಕರಣ ಮತ್ತು ವಿಘಟನೆಗಳಿಂದ ಕೂಡಿದ ಈ ಬೌದ್ಧಿಕ ಪರಂಪರೆಯನ್ನು ಯಾವ ಮುಖದಲ್ಲಿ, ಯಾವ ನಂಬಿಕೆಯಲ್ಲಿ ರಕ್ಷಿಸುತ್ತೀರಾ ? ಬೌದ್ಧಿಕ, ತೀವ್ರಗಾಮಿತ್ವವನ್ನು ಒಂದಲ್ಲ ಒಂದು ರೀತಿಯಲ್ಲಿ ಸಾಮಾಜಿಕ ಸ್ಥಗಿತತೆಯಲ್ಲೇ ಕೊನೆಯಾಗಿಸುವ ಪರಂಪರೆಯನ್ನು ಹೇಗೆ ಅರ್ಥೈಸಬೇಕು ?

ಪರಂಪರೆಯನ್ನು ತುಚ್ಛೀಕರಿಸದಂತೆ, ಪರಂಪರೆಯನ್ನು ಮೀರಿ ನಡೆಯಬೇಕೆಂಬ ಯೋಜನೆಯ ಕೊನೆಯ ಫಲಶ್ರುತಿಯೇ ರಾಷ್ಟ್ರೀಯ ಚಳುವಳಿ. ಹಿಂದುತ್ವವನ್ನು ಉಳಿಸಿಕೊಳ್ಳಲು ಸುಧಾರಣೆ ಅಗತ್ಯವಾಯಿತು. ಆದರೆ ಅಂಬೇಡ್ಕರ್ ಈ ಯೋಜನೆಗೆ ಅಡ್ಡ ಬರುತ್ತಾರೆ. ಅವರ ಪ್ರಕಾರ ಗುಲಾಮತನವನ್ನು ನಿರ್ಮೂಲನ ಮಾಡಬೇಕಾದರೆ ಹಿಂದು ಧರ್ಮದ ನಿರ್ಮೂಲನೆ ಅತ್ಯಗತ್ಯ. ಒಂದು ಮುಖ್ಯ ವಿಚಾರವನ್ನು ಇಲ್ಲಿ ಗಮನಿಸಬೇಕಾಗಿದೆ. ಪಾರಂಪರಿಕ ಹಿಂದೂ ಬೌದ್ಧಿಕ ರಚನೆಯಲ್ಲಿ ಹುದುಗಿರುವ 'ಅಧಿಕಾರ' ಮತ್ತು 'ಶ್ರೇಣೀಕರಣ'ಗಳ ಬಗ್ಗೆ ಯಾರಾದರೂ ಬೆಳಕು ಚೆಲ್ಲಲು ಪ್ರಯತ್ನಿಸಿದರೆ, ಅವರನ್ನು ಹಿಂದುತ್ವ ಪ್ರತಿಪಾದಿಸುವ ವರ್ಗವೊಂದು ಅನುಮಾನದಿಂದ ನೋಡುತ್ತದೆ. ಇತ್ತೀಚೆಗೆ ಶೆಲ್ಡನ್ ಪೊಲಾಕ್ ವಿರುದ್ಧ ಹಿಂದುತ್ವದ ಪ್ರತಿಪಾದಕರ ಆಪಾದನೆಯು ಅವರು ಪಾಶ್ಚಾತ್ಯರು ಎಂಬ ಕಾರಣಕ್ಕಾಗಿ ಬಂದದ್ದಲ್ಲ, ಅದು ಈ ಪರಂಪರೆಯಲ್ಲೇ ಇರುವ ಅಧಿಕಾರ ರಚನೆಯ ಸಂಬಂಧಗಳನ್ನು ಕುರಿತಾದ್ದು ಎನ್ನುವುದಕ್ಕಾಗಿ. ಅಧಿಕಾರದ ಪ್ರಶ್ನೆಯನ್ನು ಬಹಳ ದೊಡ್ಡ ಮಟ್ಟದಲ್ಲಿ ತೆಗೆದುಕೊಂಡುಹೋದದ್ದು ಅಂಬೇಡ್ಕರ್‌ರವರ ದೊಡ್ಡ ಸಾಧನೆಯೆನ್ನಬಹುದು. ನೈತಿಕತೆಯಿಂದ ಲೇಪನಗೊಂಡ ಅಧಿಕಾರದ ವಿಚಾರದಲ್ಲಿ, ಅಂಬೇಡ್ಕರ್ ಹಿಂದುತ್ವವನ್ನು ರಕ್ಷಿಸುವ ಪ್ರಶ್ನೆಯೇ ಇರಲಿಲ್ಲ. ಈ ಅರ್ಥದಲ್ಲಿ ಭಾರತೀಯ ನಾಗರಿಕತೆಯನ್ನು ವಿಮರ್ಶಿಸಿದ ತೀವ್ರಗಾಮಿಗಳಲ್ಲಿ ಅವರು ಮುಂಚೂಣಿಯಲ್ಲಿರುತ್ತಾರೆ.

ಹಿಂದು ಅಸ್ಮಿತೆಯ ನೈತಿಕ ಮಾನಸಿಕ ಪ್ರಕ್ರಿಯೆಯನ್ನು ಆಳವಾಗಿ ವಿಮರ್ಶಿಸುವ ಮೂಲಕ ಅಂಬೇಡ್ಕರ್ ಹಿಂದುತ್ವದ ಮನಸ್ಸುಗಳನ್ನು ಇನ್ನೂ ಹೆಚ್ಚು ಅಸ್ವಸ್ಥಗೊಳಿಸುತ್ತಾರೆ. ಹಿಂದು ಅಸ್ಮಿತೆಯನ್ನು ಕಟ್ಟುವಾಗ ಘಟಿಸಿದ ಹಿಂಸೆ ಮತ್ತು ಅಸಮಾಧಾನಗಳನ್ನು ಅವರು ಎಳೆ ಎಳೆಯಾಗಿ ಬಿಡಿಸಿಡುತ್ತಾರೆ. ಜಾತಿ ಸಂಬಂಧಿ ವಿಚಾರಗಳಾದ ಲಿಂಗಹಿಂಸೆ ಮತ್ತು ಕೋಮುವಾದಗಳ ಚಿಂತಕರಲ್ಲಿ ಅವರು ಕೂಡ ಪ್ರಥಮರಲ್ಲಿ ಒಬ್ಬರು. ಸ್ವಜಾತಿಗಳಲ್ಲೇ ನಡೆಯುವ ವಿವಾಹಗಳು ಜಾತಿ ಸಮಸ್ಯೆಯ ಮೂಲವೆಂದೂ, ಆದರೂ ಮಹಿಳೆಯರು, ವಿಧವೆಯರು ಮತ್ತು ವಿವಾಹವಾಗದ ಕುಮಾರಿಯರುಗಳನ್ನು ನಿಯಂತ್ರಿಸುವ ಮೂಲಕ ಜಾತಿಯ ಅಸ್ಮಿತೆಯನ್ನು ಉಳಿಸಿಕೊಳ್ಳಲಾಗಿದೆಯೆಂದೂ ಅಂಬೇಡ್ಕರ್ ತಮ್ಮ ಮೊದಲಿನ ಹಲವಾರು ಪ್ರಬಂಧಗಳಲ್ಲಿ ಅಭಿಪ್ರಾಯಪಡುತ್ತಾರೆ. ಅವರು ಹೇಳುವ ಹಾಗೆ "ಹೆಚ್ಚುವರಿ

## ಸಾದರ ಸ್ವೀಕಾರ

**ಭಾರತದಲ್ಲಿ ಅತ್ಯುತ್ತಮ** (ಪ್ರಬಂಧಗಳು)
*ಪ್ರೊ॥ ಅಬ್ದುಲ್ ಮಜೀದ್ ಖಾನ್*
***ಪುಟ : ೭೫ + ೧೦*** ***ಬೆಲೆ: ರೂ. ೧೦೫***
**ಎಜ್ರಾ ಪಬ್ಲಿಕೇಷನ್ಸ್,** ಬೆಂಗಳೂರು – ೫೬೦ ೦೦೧

**ಏನಿದು ಬದುಕು ಇದೆಂತಾ ತಿರುವು ?** (ಕಿಡ್ನಿ ಕಸಿ ಕಥಾನಕ) *ಹೆಚ್. ಶೇಷಗಿರಿರಾವ್*
***ಪುಟ : ೧೬ + ೧೨೮ = ೧೪೪*** ***ಬೆಲೆ: ರೂ. ೧೨೫***
**ಮಲ್ಲಿಗೆ ಪ್ರಕಾಶನ,** ಹೂವಿನ ಹಡಗಲಿ – ೫೮೩ ೨೧೯

**ಜೀವನದಿಯ ಸೆಳವು** (ಕವನ ಸಂಕಲನ)
ಎಂ. ಎಂ. ಪುರದನಗೌಡರ
***ಪುಟ : ೬೪*** ***ಬೆಲೆ: ರೂ. ೮೦***
**ಪ್ರತಿಭಾ ಪ್ರಕಾಶನ,** ತಾ॥ ಕಲಘಟಗಿ – ೫೮೧ ೨೦೪, ಜಿ. ಧಾರವಾಡ

**ಬಾಬಾಸಾಹೇಬ್ ಡಾ॥ ಭೀಮರಾವ್ ರಾಮಜೀ ಅಂಬೇಡ್ಕರ್ ಅವರು ಕಂಡ ಬುದ್ಧ ಮತ್ತು ಕಾರ್ಲ್ ಮಾರ್ಕ್ಸ್**
*ಎಚ್. ಎಸ್. ಬೇನಾಳ*
***ಪುಟ : xvi + ೭೨*** ***ಬೆಲೆ: ರೂ. ೯೦***

**ವಿಶ್ವ ಕಂಡ ಶ್ರೇಷ್ಠ ಆರ್ಥಿಕ ಚಿಂತಕ ಬಾಬಾ ಸಾಹೇಬ್ ಡಾ॥ ಬಿ. ಆರ್. ಅಂಬೇಡ್ಕರ್** *ಎಚ್. ಎಸ್. ಬೇನಾಳ*
***ಪುಟ : xviii + ೧೧೨*** ***ಬೆಲೆ: ರೂ. ೧೧೦***
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಸಹನಾ ಪ್ರಕಾಶನ,** ಪ್ಲಾಟ ನಂ. ೪೦೮,
ಸಿ.ಐ.ಬಿ. ಕಾಲೋನಿ, ಕೇಂದ್ರ ಬಸ್ ನಿಲ್ದಾಣದ
ಹಿಂದುಗಡೆ, ಎಂ.ಎಸ್.ಕೆ. ಮಿಲ್ ರಸ್ತೆ,
ಕಲಬುರಗಿ – ೫೮೫ ೧೦೩

**ನಿಮ್ಮ ಪಯಣ ಸುಗಮವಾಗಲಿ !** *ಡಾ॥ ಕೆ. ಎಸ್. ಪವಿತ್ರ*
***ಪುಟ : ೧೦೮*** ***ಬೆಲೆ: ರೂ. ೬೫***

**ಕಂಪ್ಯೂಟರ್‌ಗೆ ಪಾಠ ಹೇಳಿ...** (ಕಂಪ್ಯೂಟರ್ ವಿಜ್ಞಾನದ ಪ್ರಾಥಮಿಕ ಪರಿಚಯ) *ಟಿ. ಜಿ. ಶ್ರೀನಿಧಿ*
***ಪುಟ : ೯೨*** ***ಬೆಲೆ: ರೂ. ೬೦***

**ಲೇಖನ ಚಿಹ್ನೆಗಳು** (ನವಕರ್ನಾಟಕ ಕನ್ನಡ ಕಲಿಕೆ)
*ಟಿ. ಎಸ್. ಗೋಪಾಲ್*
***ಪುಟ : ೪೮*** ***ಬೆಲೆ: ರೂ. ೨೫***

**ಪ್ರಬಂಧ ಬರೆಯುವುದು ಹೇಗೆ ?** (ನವಕರ್ನಾಟಕ ಕನ್ನಡ ಕಲಿಕೆ) *ಟಿ. ಎಸ್. ಗೋಪಾಲ್*
***ಪುಟ : ೭೨*** ***ಬೆಲೆ: ರೂ. ೩೫***

**ಗೃಹಸಾಲ – ಸಮಗ್ರ ಮಾಹಿತಿ ಕೈಪಿಡಿ**
*ಬಿ. ಆರ್. ರವೀಂದ್ರನಾಥ್*
***ಪುಟ : ೧೦೦*** ***ಬೆಲೆ: ರೂ. ೬೦***

**ನೈಸರ್ಗಿಕ ಸಂಪನ್ಮೂಲಗಳು** (ವಿಜ್ಞಾನ ಸರಳ ಪರಿಚಯ)
*ಡಾ॥ ಎಚ್. ಆರ್. ಕೃಷ್ಣಮೂರ್ತಿ*
***ಪುಟ : ೧೦೪*** ***ಬೆಲೆ: ರೂ. ೬೫***
ಮೇಲಿನ ಆರು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪ್ರಕಾಶನ,** ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

**ಜೀವಪೀಠ – ಇದು ಜೀವನ ಪಾಠ** (ಕವನ ಸಂಕಲನ)
*ಪರಶುರಾಮ ಶಿವಶರಣ*
***ಪುಟ : xii + ೬೦*** ***ಬೆಲೆ: ರೂ. ೧೦೦***
**ನಯನಾ ಪ್ರಕಾಶನ,** ಶಿಕಾರಖಾನೆ ರೇಲ್ವೆ ಸ್ಟೇಶನ್ ಬ್ಯಾಕ್ ರೋಡ್, ವಿಜಯಪುರ

**ಇನ್ನು ಮೇಲೆ ರಾಮೇಶ್ವರ** *ಡಾ॥ ಅಭಿನವಕುಮಾರ ಚನ್ನಬಸವ ಮಹಾಸ್ವಾಮಿಗಳು*
***ಪುಟ : ೮೦*** ***ಬೆಲೆ: ರೂ. ೭೫***

**ವಚನ ರಥ** (ಆಧುನಿಕ ವಚನ ಸಂಕಲನ)
*ಡಾ॥ ಅಭಿನವಕುಮಾರ ಚನ್ನಬಸವ ಮಹಾಸ್ವಾಮಿಗಳು*
***ಪುಟ : ೧೬ + ೬೪ = ೮೦*** ***ಬೆಲೆ: ರೂ. ೮೦***
ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಶ್ರೀ ಕುಮಾರೇಶ್ವರ ಗ್ರಂಥಮಾಲೆ,** ಓಲೆಮಠ ಜಮಖಂಡಿ, ಶ್ರೀ ಕುಮಾರೇಶ್ವರ ಸುಕ್ಷೇತ್ರ, ಗೊರವನಕೊಳ್ಳ, ಸವದತ್ತಿ

**"ಪುಟ್ಟ ದೇಶ ಸಿಂಗಾಪುರ" ಮತ್ತು "ಅಮೇರಿಕದಲ್ಲಿ ಕಳೆದ ದಿನಗಳು"** (ಪ್ರವಾಸ ಕಥನ) *ಎಂ. ವಿ. ಭಟ್ (ಶ್ರೀಮಿತ್ತೂರು)*
***ಪುಟ : xxiv + ೬೦*** ***ಬೆಲೆ: ರೂ. ೧೦೦***
**ಯುಗಪುರುಷ ಮುದ್ರಣಾಲಯ,** ಕಿನ್ನಿಗೋಳಿ – ೫೭೪ ೧೫೦, ದಕ್ಷಿಣ ಕನ್ನಡ

**ಸಂಶೋಧನೆ** (ಸಂಯುಕ್ತ ನೆನಪಿನ ಸಂಪುಟ)
*ಸಂ. : ಡಾ॥ ಜಾಜಿ ದೇವೇಂದ್ರಪ್ಪ*
***ಪುಟ : ೬೦ + ೨೧೦ = ೨೭೦*** ***ಬೆಲೆ: ರೂ. ೧೫೦***
**ಜಾಜಿ ದೇವೇಂದ್ರಪ್ಪ, ಸ್ನಾತಕೋತ್ತರ ಕನ್ನಡ ಅಧ್ಯಯನ ಕೇಂದ್ರ,** ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಗಂಗಾವತಿ, ಜಿ. ಕೊಪ್ಪಳ

**ನನ್ನದಲ್ಲ ನನಗಲ್ಲ** (ಚಿಂತನ, ವಿವೇಚನಾತ್ಮಕ ಬರಹಗಳು)
*ಅರ್ಜುನ ಕೋರಟಗರ*
***ಪುಟ : xiv + ೨೦೨*** ***ಬೆಲೆ: ರೂ. ೧೮೦***
**ಅರ್ಜುನ ತಾ. ಕೋರಟಕರ,** ಶ್ರೀ ರಾಘವೇಂದ್ರ ಬೋರ್ಡಿಂಗ್, ಜಮಖಂಡಿ – ೫೮೭ ೩೦೧

ಗಂಡಸರು ಮತ್ತು ಹೆಚ್ಚುವರಿ ಹೆಂಗಸರು ಇರುವುದೇ ಜಾತಿಪದ್ಧತಿಯ ಮೂಲ ಸಮಸ್ಯೆ." ಈ ಅರ್ಥದಲ್ಲಿ ಜಾತಿಪದ್ಧತಿಯ ಮುಂದುವರಿಕೆಗೆ ಹೆಂಗಸರ ನಿಯಂತ್ರಣ ಅತಿ ಮುಖ್ಯ.

ಹಿಂದೂ ಅಸ್ಮಿತೆಯನ್ನು ಸೃಷ್ಟಿಸಲು ಕೋಮುವಾದವು ಒಂದು ಯಾಂತ್ರಿಕ ವ್ಯವಸ್ಥೆಯನ್ನು ಒದಗಿಸುತ್ತದೆ. ಹಿಂದೂಗಳಿಗೆ ತಮ್ಮಲ್ಲೇ ಇರುವ ಪ್ರಭೇದಗಳನ್ನು ಒಟ್ಟಿಗೆ ಇಡುವ ಒಂದು ಅಸ್ಮಿತೆಗಾಗಿ ಹೊರಗಿನ ಏನಾದರೊಂದು ಬೇಕಾಗಿತ್ತು. ಅದು ಮುಸ್ಲಿಮರ ವಿರುದ್ಧದ ಕಲಹಗಳಲ್ಲಿ ವ್ಯಕ್ತವಾಗುತ್ತದೆ.

ಚಾರಿತ್ರಿಕವಾಗಿ ನೋಡಿದರೆ ಭಾರತೀಯ ಪರಂಪರೆಯು ಹಿಂಸಾ ವಿರೋಧಿಯಾಗೇನೂ ಕಾಣುವುದಿಲ್ಲ; ಬದಲಾಗಿ ಅದರಲ್ಲಿ ಹಿಂಸೆಯು ಸಾಕ್ಷೀಭೂತವಾಗಿದೆ. ಅಹಿಂಸೆಯನ್ನು ಕುರಿತಾದ ಭಾರತೀಯ ಆಖ್ಯಾನಗಳು ಸಮಾಜದ ಮೂಲಸ್ತರದಲ್ಲಿದ್ದು ಹಿಂಸೆಯ ಸೂಚನೆಗಳನ್ನು ಕೊಡುತ್ತದೆ. ಬೌದ್ಧ ಧರ್ಮವನ್ನು ಎದುರಿಸಲು ಬ್ರಾಹ್ಮಣತ್ವಕ್ಕೆ ಬೇಕಾದ ಒಂದು ಮುಖ್ಯ ಸಂಕೇತವಾಗಿ ಅಹಿಂಸಾವಾದವನ್ನು ಉಪಯೋಗಿಸಿಕೊಳ್ಳಲಾಗಿದೆ ಎನ್ನುವುದೂ ಚಾರಿತ್ರಿಕ ಸತ್ಯವೇ.

## ಜಿಜ್ಞಾಸೆ

ಕರೆದು, ನಿನ್ನನು, ತೋರುವ ದೀಪವಿಲ್ಲ;<br>
ಅಲ್ಲಲ್ಲಿ ನಿಂತಿವೆ ದ್ವೀಪಗಳು ತಮ್ಮಷ್ಟಕ್ಕೇ ತಾವು.<br>
ಕಡಲೇರಿದರೆ ತಳವಾಗುವವು; ಕಡಲಿಳಿದರೆ ನೆಲವಾಗುವವು.<br>
ತಳ ನಂಬಿ ಆಳಕ್ಕಿಳಿದರೆ ಮೊಳಕಾಲಿಗೆ ನೀರು;<br>
ನೆಲ ಹಿಡಿದು ತೆವಳಿದೆನೆಂದರೆ,<br>
ಮುಂದೆ ಕೈ ಹಿಡಿದು ನಿಲ್ಲಿಸಿಯಾರೆಂಬ<br>
ಭರವಸೆಯೇ ಇಲ್ಲ. ಹೀಗಿರಲು –<br>
ಸ್ವಂತಕೆ ಸೀದು ಹೋದರೂ ಎಟುಕದು ನಿನ್ನ ಬೇರು!

**ಸೋಮನಾಥ ಗೀತಯೋಗಿ**<br>
ವಿಜಯಪುರ

ಅಂಬೇಡ್ಕರ್‌ರವರು ಗೋಮಾಂಸ ಭೋಜನಕ್ಕೂ ಅಸ್ಪೃಶ್ಯತೆಗೂ ಇರುವ ಸಂಬಂಧವನ್ನು ಸರಿಯಾಗಿ ಗುರಿತಿಸಿದ್ದರು. ಅಸ್ಪೃಶ್ಯರ ವಿರುದ್ಧ ಬೆಳೆದಿದ್ದ ಭಯಾನಕ ಭಾವವನ್ನು ವಿವರಿಸಲು ಅವರನ್ನು ಗೋಮಾಂಸ ಭಕ್ಷಕರೆಂದು ನಿರೂಪಿಸಬೇಕಾಯಿತು. ಅಸ್ಪೃಶ್ಯರ ವಿರುದ್ಧದ ದ್ವೇಷದ ತೀವ್ರತೆಯನ್ನು ವಿವರಿಸುವಾಗ ಆಗುವ ಪಾಡನ್ನು ಅಂಬೇಡ್ಕರ್ ಅರಿತಿದ್ದರು. ಅಸ್ಪೃಶ್ಯತೆ ಕೇವಲ ಅಸಮಾನತೆ ಮತ್ತು ಶೋಷಣೆಯ ಸಂಬಂಧದಲ್ಲಷ್ಟೇ ಇರಲಿಲ್ಲ. ಅದು ವರ್ಣಸಂಕರದ ವಿರುದ್ಧ ಮತ್ತು ಜಾತಿ ಶುಭ್ರತೆಯನ್ನು ಕಾಪಾಡುವ ಕೆಲಸವನ್ನು ನಿರ್ವಹಿಸುತ್ತಿತ್ತು. ಈ ಚರಿತ್ರೆಯನ್ನು ತಿಳಿಯದವರು ನಮ್ಮ ಕಾಲೇಜು ಕ್ಯಾಂಪಸ್ಸುಗಳಲ್ಲಿ ಗೋಮಾಂಸದ ಬಗ್ಗೆ ನಡೆಯುತ್ತಿರುವ ಸಂಘರ್ಷಗಳನ್ನು ಅರ್ಥಮಾಡಿಕೊಳ್ಳಲು ಸಾಧ್ಯವಾಗುವುದಿಲ್ಲ.

ಸಂಕ್ಷಿಪ್ತವಾಗಿ ಹೇಳಬೇಕಾದರೆ, ಅಂಬೇಡ್ಕರ್‌ರವರ ಬೃಹತ್ ಯೋಜನೆಯು ವ್ಯವಸ್ಥಿತವಾಗಿ ಹಿಂದೂ ನಾಗರಿಕತೆಯ ಮುಖವಾಡಗಳನ್ನು ಒಂದೊಂದಾಗಿ ಕಳಚಿಹಾಕುವ ಒಂದು ಸಾಹಸ ಕಾರ್ಯವೇ ಸರಿ. ಅವು ಸದ್ಗುಣಗಳ ಹಿಂದಿರುವ ನಿಜವಾದ ದುರಾಚಾರಗಳ ಬುಗ್ಗೆಯನ್ನು ಕಂಡುಹಿಡಿಯುವ "ಮೌಲ್ಯಗಳ ಪುನರ್ ಮೌಲ್ಯೀಕರಣ" ಎನ್ನಬಹುದು. ಅಹಿಂಸೆಯ ಹಿಂದಿರುವ ಹಿಂಸೆ, ಈ ಲೋಕದ ಹಿತವನ್ನು ಬಯಸುತ್ತಾ ಮಾಡುವ ಧರ್ಮಾಚರಣೆಯ ಹಿಂದಿರುವ ಆಳವಾದ ಭೇದಗಳು, ಗೋಪೂಜೆಯ ಉತ್ಸಾಹದ ಹಿಂದಿರುವ ಗೋಮಾಂಸ ಭಕ್ಷಕರ ಮೇಲಿನ ದ್ವೇಷ, (ಗೋಭಕ್ಷಕರ ಮೇಲಿನ ಹಿಂಸೆಯನ್ನು ಗೋಪೂಜೆ ಮಾಡುವುದರಿಂದ ಶುದ್ಧಿ ಮಾಡುವ ಹುನ್ನಾರ) – ಇವೆಲ್ಲವನ್ನೂ ಗಮನಿಸಿದ ಅಂಬೇಡ್ಕರ್‌ರವರ ವಿಚಾರಗಳನ್ನು ಅಧ್ಯಯನ ಮಾಡುವುದರಿಂದ ಗೋರಕ್ಷಕರು ತಮ್ಮ ಸಹಜೀವಿಗಳ ಬಗ್ಗೆ ಏಕಿಷ್ಟು ಕಲ್ಲೆದೆಯವರಾಗುತ್ತಾರೆ ಎನ್ನುವುದರ ಪ್ರಶ್ನೆಗೆ ಉತ್ತರ ಸಿಗುತ್ತದೆ. ಅವರ ವಿಮರ್ಶೆಯು ನಮ್ಮನ್ನು ಚುಚ್ಚುವುದು ಒಂದು ಆದರ್ಶದಿಂದ ನಾವು ವಿಮುಖರಾದೆವೆಂಬ ದುಃಖದಿಂದಲ್ಲ; ಬದಲಾಗಿ ಪ್ರತಿ ಹೆಜ್ಜೆಯಲ್ಲೂ ಆ ಆದರ್ಶಗಳ ಹಿಂದಿರುವ ಹಿಂಸೆ, ಕ್ರೌರ್ಯಗಳಿಂದ. ನಮ್ಮ ಬ್ರಾಹ್ಮಣತ್ವ ಹೇಗಿತ್ತೆಂದರೆ ಇಲ್ಲೊಬ್ಬ ವಾಲ್ಟೇರ್ ಬರುವುದಕ್ಕಾಗಲಿಲ್ಲ. ಬಹುಶಃ ಇರಾಸ್ಮಸ್‌ನಂತಹವರು ಇದ್ದಾರು – ಇರುವ ಸಾಮಾಜಿಕ ರಚನೆಯ ಮಿತಿಯಲ್ಲಿಯೇ ಭಾಗಶಃ ಪರಿವರ್ತನೆಯನ್ನು ತಂದವರು. ಆದರೆ ಯಾರೂ ಇಡೀ ಕಟ್ಟಡವನ್ನು ಮೂಲಭೂತವಾಗಿ ಕೆಡವಿಹಾಕುವಂತಹ ಪ್ರಶ್ನೆಗಳನ್ನು ಎತ್ತಲೇಯಿಲ್ಲ.

ಅಂಬೇಡ್ಕರ್ ಅವರನ್ನು ಗಂಭೀರವಾಗಿ ತೆಗೆದುಕೊಂಡಲ್ಲಿ, ಈ ಮೇಲಿನ ವಿಮರ್ಶೆಯನ್ನೂ ಹಾಗೆಯೇ ತೆಗೆದುಕೊಳ್ಳಬೇಕು. ಅವರ ಮೊದಲ ಪ್ರತಿಕ್ರಿಯೆ ಎಂದರೆ ಪ್ರತಿರೋಧ. ಸಂವಿಧಾನದ ಕರಡು ಪ್ರತಿ ರಚಿಸುವಾಗ ಅವರ ಸಹಾಯವನ್ನು ಪಡೆಯಲಾಯಿತು ಎನ್ನುವ ಒಂದು ಅಪವಾದವನ್ನು ಬಿಟ್ಟು, ಅವರನ್ನು ವ್ಯವಸ್ಥಿತವಾಗಿ ಮೂಲೆಗುಂಪು ಮಾಡಲಾಯಿತು. ನಂತರ ರಕ್ಷಣಾತ್ಮಕವಾಗಿ ದಲಿತರ ಮೇಲಿನ ದೌರ್ಜನ್ಯಗಳನ್ನು ನಿರಾಕರಿಸುತ್ತಾ ದಲಿತರ ಸಬಲೀಕರಣವನ್ನು ತಡೆಯಲಾಯಿತು. ರಾಜಕೀಯವಾಗಿ ರಕ್ಷಣಾತ್ಮಕವಾಗಿರಲಾಗದ ಸಮಯಗಳಲ್ಲಿ, ದಲಿತರನ್ನು ತಮ್ಮ ವ್ಯವಸ್ಥೆಗೆ ಹೊಂದಿಸಿಕೊಳ್ಳಲು ಪ್ರಯತ್ನಿಸಲಾಯಿತು. ಆರ್.ಎಸ್.ಎಸ್.ನವರು ಅಂಬೇಡ್ಕರ್‌ರವರ ಹೆಸರನ್ನು ಈಗ ಪಠಿಸುತ್ತಿರುವುದನ್ನು ನೋಡಿದರೆ ಅದನ್ನು ನಂಬಲು ಸಾಧ್ಯವಿಲ್ಲ. ಅವರು ತಿಳಿಯಬೇಕಾದ ಮುಖ್ಯ ವಿಚಾರವೆಂದರೆ, ಅಂಬೇಡ್ಕರರನ್ನು ಹೊಂದಿಸಿಕೊಳ್ಳುತ್ತಿರುವಾಗ, ಅವರು ನಮ್ಮಲ್ಲೇ ಹುದುಗಿರುವ ಪಾಶವೀ ಸತ್ಯಗಳನ್ನು ಹೇಳುತ್ತಿದ್ದಾರೆ ಎನ್ನುವುದು. ಅಂಬೇಡ್ಕರರ "ರಿಡ್ಲ್ಸ್ ಇನ್ ಹಿಂದೂಯಿಸಂ" ಸದ್ಯಕ್ಕೆ ನಿಷೇಧಗೊಂಡಿದೆ! ಹಿಂದುತ್ವದ ಸಂರಕ್ಷಕರು ಅಂಬೇಡ್ಕರ್‌ರವರ ವಿಮರ್ಶೆಯಲ್ಲಿರುವ ಸತ್ಯವನ್ನು ಒಪ್ಪಿಕೊಂಡರೆ, ಅವರ ಬಗ್ಗೆ ಸ್ವಲ್ಪವಾದರೂ ನಂಬಿಕೆ ಬಂದೀತು.

೪

ನ್ಯಾಯವನ್ನು ಮರಳಿ ಪಡೆಯುವ ಅಥವಾ ದೊರಕಿಸುವ ಯಾವುದೇ ಯೋಜನೆಯ ಸಾಫಲ್ಯಕ್ಕಾಗಿ ಬ್ರಾಹ್ಮಣತ್ವವನ್ನು ನಿರ್ನಾಮ ಮಾಡಲೇಬೇಕಾದ ವಿಧಿಯ ಬಗ್ಗೆ ಅಂಬೇಡ್ಕರ್‌ರವರಿಗೆ ಯಾವುದೇ ಅನುಮಾನಗಳಿರಲಿಲ್ಲ. ಅವರು ಬೌದ್ಧ ಧರ್ಮಕ್ಕೆ ಮತಾಂತರಗೊಂಡರೂ, ಪರಂಪರೆಯ ಪ್ರಶ್ನೆಗಳು ಅವರಿಗೆ ಜಟಿಲವಾಗಿಯೇ ಉಳಿದವು. ಮನುಷ್ಯತ್ವವನ್ನು ಕೇಂದ್ರದಲ್ಲಿರಿಸಿ ನೋಡುವುದು ಅವರ ಅನ್ವೇಷಣೆಯ ಮೂಲಗುಣವಾಗಿತ್ತು. ಸತ್ಯದ ಮೌಲ್ಯಮಾಪನ ಮಾಡುವುದೂ ನಿರಂತರವಾಗಿತ್ತು. ಅವರು ದೇವರನ್ನು ಕೊಲ್ಲುವುದರ ಮೂಲಕ ಎಲ್ಲ ಪಾರಭೌತಿಕತೆಯನ್ನೂ ಕೊಲ್ಲಬಯಸಿದರು. ಬೌದ್ಧ ಧರ್ಮವು ಅವರ ಗುರಿ ಸಾಧನೆಗೆ ಕೆಲವು ಅನುಕೂಲಗಳನ್ನು ನೀಡಿತು. ನೈತಿಕತೆ ಮತ್ತು ಚಾರಿತ್ರಿಕ ಸಂಘರ್ಷಗಳ ಪರಿಣಾಮವಾಗಿ ಉದ್ಭವಿಸಿದ ಬೌದ್ಧ ಧರ್ಮವು ಬ್ರಾಹ್ಮಣತ್ವದಿಂದ ಶೋಷಣೆಗೆ ಒಳಗಾದರೂ, ಅದರ ಮುಖವಾಡಗಳನ್ನು ಕಳಚುತ್ತಾ ಸೆಟೆದುನಿಂತ ಬದಲಿ ಧರ್ಮವಾಗಿತ್ತು. ಹಾಗೆಯೇ ಅಂಬೇಡ್ಕರ್ ಬೌದ್ಧ ಧರ್ಮಕ್ಕೆ ಮತಾಂತರ ಹೊಂದಿದ್ದೂ ಒಂದು ಸಾಮಾಜಿಕ ಪ್ರತಿಭಟನೆಯ ಸಂಕೇತವೆಂದೂ ತಿಳಿಯಬಹುದು. ಕ್ರಾಂತಿಕಾರಕ ಸಾಮಾಜಿಕ ನೀತಿಯಾಗಿ, ಸ್ವಾತಂತ್ರ್ಯ, ಸಮಾನತೆ ಮತ್ತು ಸಾಮಾಜಿಕ ಸಾಮರಸ್ಯಗಳನ್ನು ಒಡಗೂಡಿಸಿ ಮರುವಿನ್ಯಾಸಗೊಳಿಸಲು ಬೌದ್ಧ ಧರ್ಮಕ್ಕೆ ಸಾಧ್ಯವಾಗಿದೆ. ಸಂಘವೆನ್ನುವುದು ಒಂದು ಆದರ್ಶ ಪ್ರಜಾಪ್ರಭುತ್ವದ ಆದರ್ಶ ಸಂಸ್ಥೆಯಾಗಿ ಸಾಕಾರಗೊಳ್ಳಲು ಸಾಧ್ಯವಿದೆ. ಅಂಬೇಡ್ಕರ್‌ರವರು ಬೌದ್ಧ ಧರ್ಮದಲ್ಲಿರುವ ಹುಸಿ ಪಾರಭೌತಿಕತೆಯನ್ನು ತ್ಯಜಿಸಿ, ಅದು ಪ್ರತಿಪಾದಿಸುವ ಸಾಮಾಜಿಕ ನೀತಿಯಲ್ಲಿ ಮಾತ್ರ ಒಲವು ತೋರುತ್ತಾರೆ. ಅವರ ಪ್ರಕಾರ ಸಾಮಾಜಿಕ ನಿಷ್ಠೆ, ಮತ್ತು ಪಾರಭೌತಿಕ ನಿಷ್ಠೆ ಒಂದಕ್ಕೊಂದು ಹೊಂದಿಕೊಳ್ಳುವುದಿಲ್ಲ. ಅವರಿಗೆ ಮತಾಂತರ ಕ್ರಿಯೆಯು ಮನುಷ್ಯರನ್ನು ಪಾರುಮಾಡುವ ಕ್ರಿಯೆಯೂ ಆಗಿತ್ತು. ಬುದ್ಧನು ಧಾರ್ಮಿಕ ವಿಧಿಗಳನ್ನು ಕೊನೆ ಮಾಡಿದರೆ, ಅಂಬೇಡ್ಕರ್ ಆ ಧರ್ಮದಲ್ಲಿ ಅಳಿದುಳಿದಿದ್ದ ಪಾರಭೌತಿಕತೆಯನ್ನೂ ಕೊಲ್ಲಬಯಸಿದರು. ಯಾವುದೋ ತಿಳಿಯದ ಬೇರೆ ಲೋಕದ ಸಂಕೀರ್ಣ ಪ್ರಭಾವಕ್ಕೆ ಮನುಷ್ಯನು ಒಳಗಾಗಬಲ್ಲನೆಂದು ಪ್ರತಿಪಾದಿಸುವ ಯಾವ ಸಿದ್ಧಾಂತವೂ ಅಂಬೇಡ್ಕರ್‌ರವರಿಗೆ ಸಹ್ಯವಾಗುತ್ತಿರಲಿಲ್ಲ. ಪದೇ ಪದೇ ಒಬ್ಬ ಅವಧೂತನಂತೆ "ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ"ಗಳನ್ನು ಜಪಿಸುತ್ತಿದ್ದ ಅವರು ಭ್ರಾತೃತ್ವದಲ್ಲಿ ಸಲ್ಲುವುದೆಲ್ಲ ಸತ್ಯಕ್ಕೆ ಸಲ್ಲುತ್ತದೆ ಎಂದು ಹೇಳುತ್ತಿದ್ದರು. ಇದೊಂದೇ ಅವರು ನಂಬಿದ ಧರ್ಮವಾಗಿತ್ತು.

೫

ಅಂಬೇಡ್ಕರ್‌ರವರ "ಸ್ವಾತಂತ್ರ್ಯ, ಸಮಾನತೆ ಮತ್ತು ಭ್ರಾತೃತ್ವ"ಗಳೆಂಬ ತ್ರಿವಳಿಗಳ ಗಾಢ ಆಲಿಂಗನವು ಅವರನ್ನು ದೊಡ್ಡ ಪ್ರಮಾಣದಲ್ಲಿ ಪ್ರಜಾಪ್ರಭುತ್ವಕ್ಕಾಗಿ ಅವರೇ ನಡೆಸಿದ ಹೋರಾಟದ ಮುಂಚೂಣಿಗೆ ತೆಗೆದುಕೊಂಡು ಹೋಗುತ್ತದೆ. ಅವರು ಸಂವಿಧಾನದ ಕರಡು ಪ್ರತಿಯನ್ನು ಸಿದ್ಧಗೊಳಿಸಲು ಮಾಡಿದ ಸಹಾಯವನ್ನು ನೋಡಿದಾಗ, ಕೆಲವೊಮ್ಮೆ ಅವರು ಪ್ರತಿಪಾದಿಸುವ ಮಿತಿಗಳ ಬಗ್ಗೆ ನಾವು ಕುರುಡಾಗುತ್ತೇವೆ. ಅಕ್ಷಯ ಕುಮಾರ್ ಅವರು ಅವರ ಇತ್ತೀಚಿನ ಮುಖ್ಯ ಪುಸ್ತಕ "ರ್‍ಯಾಡಿಕಲ್ ಈಕ್ವಾಲಿಟಿ : ಅಂಬೇಡ್ಕರ್, ಗಾಂಧಿ ಅಂಡ್ ದ ರಿಸ್ಕ್ ಆಫ್ ಡೆಮಾಕ್ರಸಿ"ಯಲ್ಲಿ ಹೇಳುವ ಹಾಗೆ, ಅಂಬೇಡ್ಕರ್ ಹಲವು ವಿಷಯಗಳಲ್ಲಿ ತೀವ್ರವಾದಿಗಳಾಗಿದ್ದರು. ಪ್ರಜಾಪ್ರಭುತ್ವದ ವಿಚಾರದಲ್ಲಿಯೂ ಅತಿಭಾವುಕತೆಯಲ್ಲದ, ಯಾರನ್ನೂ ಲೆಕ್ಕಿಸದ ಅವರ ನಿಲುವು ತೀವ್ರವಾಗಿಯೇ, ಕಾಣುತ್ತದೆ. ಅವರು ಗ್ರೋಟನ್ ಹೇಳಿರುವ "ಸಂವಿಧಾನದ ನೈತಿಕತೆ" ಎಂಬ ಮಾತನ್ನು ತನ್ನದನ್ನಾಗಿಸಿಕೊಂಡ ಏಕೈಕ ಭಾರತೀಯ ಚಿಂತಕರಾಗಿದ್ದರು. ಅಂದರೆ ಸರಕಾರವು ನೈತಿಕತೆಯನ್ನು, ಆತ್ಮ ಸಂಯಮ, ನಿಗದಿತ ಪ್ರಭುತ್ವ ಸಂರಚನೆಗಳಿಗೆ ಮನ್ನಣೆ ಮತ್ತು ಮುಕ್ತ ಚರ್ಚೆ ಈ ಎಲ್ಲದರಿಂದ ಸಂಯೋಜಿಸಿಕೊಂಡು ಮುಂದುವರಿಯುವ ಆಶಯವನ್ನು ಹೊಂದಿರುತ್ತದೆ. ಮೂಲಭೂತವಾಗಿ ಪ್ರಜಾಪ್ರಭುತ್ವವಾಗಿಲ್ಲದಿದ್ದ ಭಾರತೀಯ ಮಣ್ಣಿಗೆ ಇದು ಕೇವಲ ತೋರಿಕೆಯ ಪ್ರದರ್ಶನವಾಗಬಹುದು. ಸಂವಿಧಾನದ ಆಕೃತಿಯನ್ನು ಸಂರಕ್ಷಿಸುವುದು ಮತ್ತು ಜನಗಳ ಸ್ವಯಂ-ಪ್ರಭುತ್ವ ಇವೆರಡೂ ಒಂದೇ ಅಲ್ಲ ಎಂಬುದು ಅವರ ಖಚಿತ ನಿಲುವಾಗಿತ್ತು. ಸಂವಿಧಾನದ ನೈತಿಕತೆಯ ಎರಡು ಮಿತಿಗಳಿಂದ ಭವಿಷ್ಯದಲ್ಲಿ ನಡೆಯಬಹುದಾದ ವಿಪತ್ತುಗಳ ಬಗ್ಗೆ ಎಚ್ಚರಿಸಿದ್ದರು. ಕಾರ್ಯಾಂಗದ ಆಕೃತಿಯೂ, ಸಂವಿಧಾನದ ಆಕೃತಿಯೂ ಹೊಂದಿಕೊಂಡಿರಬೇಕೆಂಬುದು ಮೊದಲನೆಯದು. ಮಾಧವ ಕೋಸ್ಲ ವಾದಿಸುವ ಹಾಗೆ, ಕಾರ್ಯಾಂಗದ ಎಲ್ಲ ವಿಧಿ ವಿಧಾನಗಳನ್ನೂ, ರೀತಿ ನೀತಿಗಳನ್ನೂ ಭಾರತೀಯ ನ್ಯಾಯಸಂಹಿತೆಯಲ್ಲಿ ಕ್ರೋಡೀಕರಣಗೊಳ್ಳುವುದಕ್ಕೆ ನೀಡಿರುವ ಒತ್ತು ಕೂಡ ಇದೇ ಕಾರಣಕ್ಕೆ ಇರಬೇಕು. ಸಂವಿಧಾನವನ್ನು ಯಾವುದೇ ರೀತಿಯಲ್ಲಿ ವಿರೂಪಗೊಳಿಸದೆ ಕಾರ್ಯಾಂಗದ ಆಕೃತಿಯನ್ನು ಬದಲಿಸಿ, ಅದು ಸಂವಿಧಾನದ ಆಶಯಗಳನ್ನು ಅಸಂಗತವೂ ವಿರುದ್ಧವೂ ಆಗುವ ಹಾಗೆ ಮಾಡಲು ಸಾಧ್ಯ ಎನ್ನುವುದು ಎಪ್ಪತ್ತು ವರ್ಷಗಳಾದ ಮೇಲೂ ಅಂಬೇಡ್ಕರ್‌ರವರು ನಮಗೆ ಗದರಿಸಿ ಹೇಳುತ್ತಿರುವಂತಿದೆ. ಹಾಗೆಯೇ "ಪ್ರಜಾಪ್ರತಿನಿಧಿ ಸರಕಾರವು ಸ್ಪಂದನಾಶೀಲವಾಗೇನೂ ಇರಬೇಕಾಗಿಲ್ಲ; ಸಾರ್ವತ್ರಿಕ ಮತದಾನದಿಂದ, ಜನಪರವಾದ ಸರಕಾರ ಬರಲಾಗದೆ ಇರಬಹುದು" ಎನ್ನುವುದನ್ನು ಅವರ "ವಾಟ್ ಕಾಂಗ್ರೆಸ್ ಅಂಡ್ ಗಾಂಧಿ ಹಾವ್ ಡನ್ ಟು ದ ಅನ್ ಟಚಬಲ್ಸ್" ಎನ್ನುವ



ಪ್ರಬಂಧದಲ್ಲಿ ವಿವರಿಸುತ್ತಾರೆ. ಸಾಮಾಜಿಕ, ಆರ್ಥಿಕ ಅಸಮಾನತೆಗಳ ನಡುವೆಯೇ ರಾಜಕೀಯ ಸಮಾನತೆಯನ್ನು ಆಡಳಿತಾತ್ಮಕವಾಗಿ ಸಾಧಿಸುವ ಪ್ರಯತ್ನದ ಹಿಂದಿರುವ ಹಾಗೂ ಪ್ರಜಾಪ್ರಭುತ್ವದಲ್ಲೇ ಅಡಗಿರುವ ವೈರುಧ್ಯಗಳನ್ನು ಅವರು ಆಳವಾಗಿ ತಿಳಿದಿದ್ದರು. ಯಾವುದೇ ಪ್ರಜಾಪ್ರಭುತ್ವವೂ ಇಂತಹ ಒತ್ತಡಗಳನ್ನು ಹೆಚ್ಚು ದಿವಸ ತಡೆದುಕೊಳ್ಳಲಾರದು.

ಪ್ರಜಾಪ್ರಭುತ್ವವನ್ನು ಕುರಿತಾದ ಇಂತಹ ಮೂಲಭೂತ ವಿಮರ್ಶೆಯು ಅವರನ್ನು ಒಬ್ಬ ಸಾಂಪ್ರದಾಯಿಕ ಉದಾರವಾದಿಗಿಂತ ಮೇಲಿನ ಮಟ್ಟಕ್ಕೆ ಒಯ್ಯುತ್ತದೆ. ಅವರನ್ನು ಹಲವು ಅರ್ಥಗಳಲ್ಲಿ ತೀವ್ರ ಗಣತಂತ್ರವಾದಿ ಎಂದು ಕರೆದುಬಿಡಬಹುದಾದ ಪ್ರಲೋಭನೆ ಬರುತ್ತದೆ. ಭ್ರಾತೃತ್ವದಲ್ಲಿ ನಂಬಿಕೆಯಿರುವ ಗಣತಂತ್ರವಾದಿಯಾಗಿಯೂ, ಆರ್ಥಿಕ ಅಸಮಾನತೆ ಮತ್ತು ನಿಜವಾದ ಪ್ರಜಾಪ್ರಭುತ್ವಗಳು ಪರಸ್ಪರ ಹೊಂದಿಕೊಂಡು ಹೋಗಬಹುದೆಂಬುದರ ಬಗ್ಗೆ ತೀವ್ರ ಸಂಶಯಗಳಿರುವ ಗಣತಂತ್ರವಾದಿಯಾಗಿಯೂ, ಸ್ವಯಂವಿಹಿತ ಅಧಿಕಾರವನ್ನು ಬಿಟ್ಟು ಬೇರಾವುದೇ ಅಧಿಕಾರದಲ್ಲೂ ನಂಬಿಕೆ ಇರದ ಗಣತಂತ್ರವಾದಿಯಾಗಿಯೂ ಅವರು ಕಾಣುತ್ತಾರೆ. ಅಂಬೇಡ್ಕರ್‌ರವರನ್ನು ಗಣತಂತ್ರವಾದಿಯೆಂದು ಕರೆದುಬಿಡುವುದು ಮೂರು ರೀತಿಯಲ್ಲಿ ದಾರಿ ತಪ್ಪಿಸುತ್ತದೆ. ಒಂದು, ತಡೆ ಮತ್ತು ಸಮತೋಲನಗಳೆಂಬ ಉದಾರವಾದಿ ಕೌಶಲಗಳಲ್ಲಿ ಅವರು ಒಪ್ಪಿಗೆ ಸೂಚಿಸಿದ್ದೇಕೆಂದರೆ ಪ್ರಜಾಪ್ರಭುತ್ವವೆನ್ನುವುದು ಏಕರೂಪದಲ್ಲಿರುವುದು ಅಸಾಧ್ಯ, ಎಂಬ ಕಾರಣಕ್ಕೆ. ಅದನ್ನು ಪ್ರತಿನಿಧಿಸುವುದು ಕೂಡ ಅಸಾಧ್ಯ. ಎರಡು, ಭ್ರಷ್ಟಗೊಂಡ ಸಾಮಾಜಿಕ ವ್ಯವಸ್ಥೆಯು ಇರುವ ಸಂದರ್ಭದಲ್ಲಿ ವ್ಯಕ್ತಿಗಳ ಸದ್ಗುಣಗಳಿಂದ ಮೂಡಿಬರಬಹುದಾದ ಸಾಮಾಜಿಕ ಸಾಮರಸ್ಯಕ್ಕಿಂತ ರಾಜ್ಯಾಧಿಕಾರವೇ ಉತ್ತಮವೆಂದು ಅವರು ಭಾವಿಸುತ್ತಾರೆ. ವಿಕೇಂದ್ರೀಕರಣ ಮತ್ತು ಸ್ಥಳೀಯತೆಯ ವಿರುದ್ಧದ ಅವರ ಕಟು ವಿಮರ್ಶೆಗೆ ಅವು ಸ್ಥಳೀಯ ದಬ್ಬಾಳಿಕೆಯನ್ನು ಬಲಪಡಿಸುತ್ತದೆ ಎನ್ನುವ ಅಂಶ ಮತ್ತು ಸಮಾಜದ ಮರುನಿರ್ಮಾಣ ಮಾಡಲು ಪ್ರಭುತ್ವಕ್ಕೆ ಹೆಚ್ಚು ಸುಲಭ ಎನ್ನುವುದರ ಅರಿವೂ ಕಾರಣವಾಗಿರಬೇಕು. ಕೊನೆಯದಾಗಿ, ಅವರು ಪ್ರಜೆಗಳ ಪರಸ್ಪರ ಸುಸಂಬದ್ಧತೆಯಿಂದ ಉಂಟಾಗಬಹುದಾದ ಭ್ರಾತೃತ್ವಕ್ಕಾಗಿ ಹಾರೈಸಿದ್ದರೂ, ಗಣತಂತ್ರವಾದದಲ್ಲಿ ಪ್ರತಿಪಾದಿಸಿರುವ ಕೂಡಿಬಾಳುವ ಸಮೃದ್ಧತೆಯ ವಿಚಾರವಾಗಿ ಅವರಿಗೆ ಅನುಮಾನಗಳಿದ್ದವು. ಆಳವಾದ ಅರ್ಥದಲ್ಲಿ ಗಣತಂತ್ರ ತರಬಹುದಾದ ಅಭೌತಿಕ ಸಂಘಟನೆಗಳ ಅಪಾಯದ ಅರಿವಿದ್ದರೂ, ಅವರು ಅತ್ಯಂತ ವ್ಯಕ್ತಿವಾದಿಗಳಾಗಿದ್ದರು. ಅವರ ಪ್ರಕಟಿಸಲಾಗದ ಮೂಲಭೂತ ಒಂಟಿತನದ ಸಂವೇದನೆಗಳ ಕಾರಣದಿಂದಾಗಿ ಅವರು ಗಣತಂತ್ರವಾದಿಗಳಿಂದ ದೂರವೇ ಉಳಿದಿದ್ದರು.

ಸಾಮಾಜಿಕ ನ್ಯಾಯಕ್ಕಾಗಿ ದಲಿತರ ಸಬಲೀಕರಣದ ಅವಶ್ಯಕತೆಯ ಬಗ್ಗೆ ಅಂಬೇಡ್ಕರ್‌ರವರಿಗೆ ಯಾವುದೇ ಅನುಮಾನಗಳಿರಲಿಲ್ಲ. ಮನುಷ್ಯನ ಪ್ರಗತಿಗೆ ಬೇಕಾದ ಮೂರು ಅವಶ್ಯಕತೆಗಳಾದ ಸಂಪತ್ತು, ಶಿಕ್ಷಣ ಮತ್ತು ಅಧಿಕಾರಗಳ ಬಗ್ಗೆ ಅಂಬೇಡ್ಕರ್‌ರವರ ವಾದ ಸರಳವಾಗಿದೆ. ಈ ಮೂರರಲ್ಲಿ ಒಂದೆರಡನ್ನು ಬೇರೆಯ ವ್ಯವಸ್ಥೆಗಳಲ್ಲಿ, ಕೆಲವು ಸಮಯಗಳಲ್ಲಿ, ಕೆಲವರು ಪಡೆಯಲಾಗಿರಲಿಲ್ಲ. ಆದರೆ ದಲಿತರು ಮಾತ್ರ ಈ ಮೂರರಿಂದ ಎಲ್ಲ ಕಾಲದಲ್ಲಿಯೂ ವಂಚಿತರಾಗಿದ್ದರು. ಈ ದುರ್ಭರ ಲಕ್ಷಣದ ಬಗ್ಗೆ ಅಂಬೇಡ್ಕರ್ ಸ್ಪಷ್ಟ ಮಾತುಗಳಲ್ಲಿ ಹೇಳುತ್ತಾರೆ : ಶಿಕ್ಷಣ ಮಾತ್ರದಿಂದಲೇ ದಲಿತರು ಸಬಲರಾಗುವುದಿಲ್ಲ; ಸಂಪತ್ತನ್ನು ಗಳಿಸುವುದಕ್ಕಾಗಿ ಅವರು ಒಂದು ಸ್ಥಿರ ಸ್ಥಾನವನ್ನು ಹೊಂದುವುದರಿಂದ ಅವರು ಅಧಿಕಾರದ ಸಾಧನಗಳನ್ನು ಪಡೆಯುತ್ತಾರೆ. ಅವರಿಗೆ ರಾಜ್ಯಾಧಿಕಾರದ ಅವಕಾಶಗಳಿಲ್ಲದೆ ಅವುಗಳನ್ನು ಪಡೆಯಲು ಸಾಧ್ಯವಿಲ್ಲ. ಈ ಆಳವಾದ ಅರಿವಿನಿಂದಲೇ ದಲಿತರ ಸಮಾನ ಪ್ರಾತಿನಿಧ್ಯಕ್ಕಾಗಿ ಅವರು ಜೀವನವಿಡೀ ಶ್ರಮಿಸಿದರು. ಹೀಗೆಯೇ 'ಪ್ರತಿಭೆ' ಎನ್ನುವ ವಿಚಾರವಾಗಿ ಸ್ಪಷ್ಟೀಕರಿಸುವ ಕೆಲಸವನ್ನು ಕೈಗೆತ್ತಿಕೊಂಡವರಲ್ಲಿ ಅವರು ಮೊದಲಿಗರು. ಪ್ರತಿಭೆ ಎನ್ನುವುದು ಆನುವಂಶಿಕವಾಗಿ ಒಂದು ಜಾತಿಗೆ ಒದಗಿದಂತಹ ವಿಶೇಷ ಸವಲತ್ತು. ಈ ವಿಚಾರವಾಗಿ ಹೇಳಿದ್ದನ್ನೇ ಹೇಳಬೇಕಾಗಿ ಬಂದಿರುವ ವಿಪರ್ಯಾಸ ನಾವು ಅಂಬೇಡ್ಕರ್‌ರವರ ಚಿಂತನೆಗಳಿಂದ, ಆದರ್ಶಗಳಿಂದ ಇನ್ನೂ ಎಷ್ಟು ದೂರವಿದ್ದೀವೆಂಬುದನ್ನು ಸೂಚಿಸುತ್ತದೆ. ದಲಿತರಿಗೆ ಇನ್ನೂ ಹೆಚ್ಚಿನ ರೀತಿಯಲ್ಲಿ ಸಕಾರಾತ್ಮಕ ಕ್ರಿಯೆಗಳು ದಕ್ಕಬೇಕಾಗಿರುವ ವಿಚಾರವು ಪ್ರಶ್ನಾತೀತವಾಗಿದೆ. ಅವರಿಗೆ ನ್ಯಾಯ ಒದಗಿಸುವುದಕ್ಕಾಗಿ ಅದನ್ನು

ಮಾಡಲೇಬೇಕಾದ್ದು ಒಂದು ಮೂಲಭೂತ ಅವಶ್ಯಕತೆಯಾಗಿದೆ. ಮೀಸಲಾತಿಯ ಸೂತ್ರಗಳಲ್ಲಿ ಒಂದು ಸಣ್ಣ ವ್ಯಂಗ್ಯವೂ ಇದೆ. ದಲಿತಾನುಭವದ ನಿರ್ದಿಷ್ಟ ಗುಣಲಕ್ಷಣಗಳನ್ನು ಕುರಿತು ಭಾವನಾತ್ಮಕವಾಗಿ ಜೀವನವಿಡೀ ಅಂಬೇಡ್ಕರ್ ವಾದಿಸಿದ್ದರು. ದಲಿತ ನಿರ್ದಿಷ್ಟತೆಯನ್ನೇ ತಮ್ಮ ವಿಚಾರಗಳಲ್ಲಿ ಪ್ರಮುಖವಾಗಿ ತಂದ ಕಾರಣದಿಂದ, ಅವರು ಇನ್ನಿತರೆ ಹಿಂದುಳಿದ ವರ್ಗಗಳ ಜತೆ ಹೊಂದಾಣಿಕೆ ಮಾಡಿಕೊಳ್ಳಲಿಲ್ಲವೆಂಬ ವ್ಯಾಪಕ ಟೀಕೆಗೆ ಒಳಗಾಗಿದ್ದಾರೆ. ಇಲ್ಲಿ ಅರ್ಥಮಾಡಿಕೊಳ್ಳಬೇಕಾಗಿರುವ ಅಂಶವೆಂದರೆ, ತೀವ್ರ ತಾರತಮ್ಯಕ್ಕೆ ಒಳಗಾದ ದಲಿತಾನುಭವವು ದಲಿತ ನಿರ್ದಿಷ್ಟತೆಯಲ್ಲಿದೆ ಎನ್ನುವುದು. ಇದೇ ಕಾರಣದಿಂದ ಅಂಬೇಡ್ಕರ್ ದಲಿತರನ್ನು ಅಲ್ಪಸಂಖ್ಯಾತರೆಂದು ಪರಿಗಣಿಸಿದ್ದರು. ಈ ಎರಡೂ ವಿಚಾರಗಳನ್ನು ನಗಣ್ಯಗೊಳಿಸಿ, ಮೀಸಲಾತಿಯನ್ನು ವಿಕೃತಗೊಳಿಸಿರುವುದರಲ್ಲಿರುವ ವ್ಯಂಗ್ಯವನ್ನು ಗಮನಿಸಬಹುದು. ದಲಿತರಿಗೆ ಸೀಮಿತವಾಗಿಯೂ ಉಚಿತವಾಗಿಯೂ ಆಚರಣೆಗೆ ತಂದಿದ್ದ ಮೀಸಲಾತಿಯು ಇತರ ಹಿಂದುಳಿದ ವರ್ಗಗಳಿಗೂ ವಿಸ್ತೃತಗೊಂಡದ್ದು ಎರಡು ರೀತಿಯ ಬದಲಾವಣೆಗಳನ್ನು ತಂದಿತು. ವರ್ಣ ಸಂಘರ್ಷಗಳು ದಲಿತ ಚರಿತ್ರೆಯ ನಿರ್ದಿಷ್ಟತೆಯನ್ನು ಮಸುಕುಗೊಳಿಸಿ, ದಲಿತರ ಶೋಷಣೆಗೆ ಕಾರಣವಾಗಿದ್ದ ಹಲವಾರು ಹಿಂದುಳಿದ ಜಾತಿಗಳೂ ಅವರ ಚರಿತ್ರೆಯನ್ನು ತಮಗೆ ಅನುಕೂಲವಾಗುವ ರೀತಿಯಲ್ಲಿ ಉಚಿತಗೊಳಿಸುವ ಕೆಲಸದಲ್ಲಿ ತೊಡಗಿವೆ. ಅಧಿಕಾರ ಹಂಚಿಕೆಯ ವಿಕೃತ ರೂಪದಲ್ಲಿ ತಾರತಮ್ಯ ಮಾಡಿದ ಮತ್ತು ಮಾಡುವ ವರ್ಗ ಕಾಣದ ಹಾಗೆ ಆಗಿದೆ. ಪ್ರತಿಗಾಮಿ ಮತ್ತು ಪ್ರತಿರೋಧಗಳ ನಡುವೆ ಅಧಿಕಾರಕ್ಕಾಗಿ ನಡೆಯುವ ತೆರೆದ ಸಂಘರ್ಷದಿಂದ ಬೆಳೆಯಬಹುದಾಗಿದ್ದ ನೈತಿಕ ಸಂಬಂಧಗಳನ್ನು ಕುರಿತು ಅಂಬೇಡ್ಕರ್‌ರವರು ಇಟ್ಟಿದ್ದ ಭರವಸೆಯನ್ನು ಇಲ್ಲವಾಗಿಸಿವೆ. ಅದರ ಜತೆ ಒಂದು ವಿಶಿಷ್ಟ ರೀತಿಯಲ್ಲಿ ರಾಜಕೀಯ ತಳಹದಿಯೊಂದನ್ನು ಮೀಸಲಾತಿ ಸೃಷ್ಟಿಸಿದೆ. ಈಗಿನ ಆಚರಣೆಯಲ್ಲಿರುವಂತೆ, ಮೀಸಲಾತಿಯು ದಲಿತರ ಜತೆ ಎಲ್ಲ ಹಿಂದುಳಿದ ವರ್ಗಗಳೂ ಸೇರಿಕೊಂಡು ಬಹುಜನ ಸಹಯೋಗದ ಕ್ರಿಯೆಯಾಗಿ, ರಾಜಕೀಯವಾಗಿ ಘನೀಕೃತಗೊಂಡಿದೆ. ಆದರೆ ದಲಿತರ ನೈತಿಕ ನಿರ್ದಿಷ್ಟತೆಯು ಈಗ ಕಳೆದುಹೋಗಿದೆ.

ಅಂಬೇಡ್ಕರ್ ಎಲ್ಲ ಭ್ರಮಾತ್ಮಕ ವಿಷಯಗಳನ್ನೂ ಪ್ರಶ್ನಿಸುತ್ತಾರೆ. ಪರಂಪರೆಯ ಬಗ್ಗೆ, ಪಾರಭೌತಿಕತೆಯ ಬಗ್ಗೆ, ಇರಬಹುದಾದ ಎಲ್ಲ ಭ್ರಮೆಗಳನ್ನೂ ಅವರು ವಿರೋಧಿಸುತ್ತಾರೆ. ಇಂತಹ ಸನ್ನಿವೇಶದಲ್ಲಿ ರಾಷ್ಟ್ರೀಯತೆಯನ್ನು ನ್ಯಾಯಕ್ಕಿಂತ ಮಹತ್ವದ್ದಾಗಿ ಪರಿಗಣಿಸುವುದನ್ನು ಕುರಿತಾದ ಅವರ ಅನುಮಾನಗಳನ್ನು ಈಗ ಪುನರುಚ್ಚರಿಸಬಹುದು. ಅವರು ಹೇಳುತ್ತಾರೆ : "ರಾಷ್ಟ್ರೀಯತೆಯು ಎಲ್ಲವನ್ನೂ ಮೀರಿದಂತಹ, ಎಲ್ಲ ವರ್ಗಗಳ ಒಂದು ಕಡ್ಡಾಯ ನಡತೆಯಾಗಿ ಎಲ್ಲರೂ ಅಪೇಕ್ಷಿಸುವಂತಹ ಪರಮ ಪೂಜ್ಯ ಮತ್ತು ಪರಿಪೂರ್ಣವಾದ ತತ್ವವೇನಲ್ಲ." ಅವರ ಚಿಂತನೆಯ ಆಳದಲ್ಲಿ ತೀವ್ರ ದುಃಖವಿದೆ. ಮಾನವನ ಬೇರುಗಳಲ್ಲಿರುವ ಕೆಡುಕು ಮತ್ತು ದುರ್ಬಲತೆಯನ್ನು ಎಲ್ಲರಿಗಿಂತ ಹತ್ತಿರದಲ್ಲಿ ನೋಡಿದ್ದ ಅವರು ಯಾವ ಭರವಸೆಯನ್ನು ಇಟ್ಟುಕೊಳ್ಳಬಲ್ಲರು ? ಶತಶತಮಾನಗಳಿಂದ ಅನುಭವಿಸಿದ್ದ ನೋವಿನ ವಿರುದ್ಧ ಅವರು ಭರವಸೆಯನ್ನು ಉಳಿಸಿಕೊಳ್ಳಲು ಚರಿತ್ರೆಯ ವಾದ–ವಿವಾದವಾಗಲೀ, ಧರ್ಮಗಳು ನೀಡಬಹುದಾದ ಸಮಾಧಾನಗಳನ್ನಾಗಲೀ, ಪಾರಲೌಕಿಕತೆಯ ಸುಖವನ್ನಾಗಲೀ, ಹುಸಿ ವಿಜ್ಞಾನತೆಯು ನೀಡಬಹುದಾದ ಖಚಿತತೆಯಿಂದಾಗಲೀ ಅಥವಾ ಬೇರೆ ಯಾವುದೇ ಬಾಹ್ಯ ಊರುಗೋಲುಗಳನ್ನು ಬಳಸಲಿಲ್ಲವೆಂಬುದರಿಂದಲೇ ಅವರು ಸಾರ್ವಕಾಲಿಕ ಗೌರವಕ್ಕೆ ಪಾತ್ರರಾಗುತ್ತಾರೆ. ಒಂದು ರೀತಿಯಲ್ಲಿ ಅವರು ಗಾಂಧಿಯವರನ್ನು ಹೋಲುತ್ತಾರೆ. ನಮ್ಮ ಆತ್ಮಸಾಕ್ಷಿಯ ವಿವೇಕದಿಂದ ಮೂಡಿದ ಸಾಮಾಜಿಕ ಕ್ರಿಯೆಗಿಂತ ಮಹತ್ವದ್ದು ಬೇರಾವುದೂ ಇಲ್ಲ.

"ರಾನಡೆ, ಗಾಂಧಿ ಅಂಡ್ ಜಿನ್ನ" ಎನ್ನುವ ಅವರ ಹೃದಯಸ್ಪರ್ಶಿ ಪ್ರಬಂಧದಲ್ಲಿ ಹೀಗೆ ಒತ್ತಾಯಪೂರ್ವಕವಾಗಿ ಹೇಳುತ್ತಾರೆ : "ಹಕ್ಕುಗಳ ರಕ್ಷಣೆಗೆ ಬೇಕಾದುದು




ಕಾನೂನುಗಳಲ್ಲ. ಬೇಕಾಗಿರುವುದು ಸಾಮಾಜಿಕ ಮತ್ತು ನೈತಿಕ ಪ್ರಜ್ಞೆ. ಸಾಮಾಜಿಕ ಪ್ರಜ್ಞೆಯು ಕಾನೂನು ಹೇಳುವ ಹಕ್ಕುಗಳನ್ನು ಪ್ರತಿಪಾದಿಸಿದರೆ, ಹಕ್ಕುಗಳು ಕ್ಷೇಮಕರವಾಗಿಯೂ ಭದ್ರತೆಯಿಂದಲೂ ಕೆಲಸ ಮಾಡುತ್ತವೆ. ಆದರೆ ಮೂಲಭೂತ ಹಕ್ಕುಗಳ ವಿರುದ್ಧವೇ ಸಮುದಾಯವು ಸೆಟೆದು ನಿಂತರೆ, ಯಾವುದೇ ಕಾನೂನಾಗಲೀ, ಸಂಸತ್ತಾಗಲೀ, ನ್ಯಾಯಾಂಗವಾಗಲೀ, ಹಕ್ಕುಗಳ ನಿಜವಾದ ಅರ್ಥದಲ್ಲಿ ಚಲಾವಣೆಯಾಗಲಾರವು. ಅಮೆರಿಕದ ನೀಗ್ರೋಗಳಿಗೆ, ಜರ್ಮನಿಯ ಯಹೂದಿಗಳಿಗೆ, ಭಾರತದ ದಲಿತರಿಗೆ ಮೂಲಭೂತ ಹಕ್ಕುಗಳ ಪ್ರಯೋಜನವೇನು ? ಬರ್ಕ್ ಹೇಳುವ ಹಾಗೆ, ದೇಶದ ಬಹುಸಂಖ್ಯಾತರನ್ನು ಶಿಕ್ಷಿಸಲು ಯಾವುದೇ ವಿಧಾನದಿಂದಲೂ ಸಾಧ್ಯವಿಲ್ಲ. ಒಂಟಿಯಾಗಿರುವ ಅವಿಧೇಯ ಅಪರಾಧಿಯನ್ನು ಕಾನೂನು ಶಿಕ್ಷಿಸಬಹುದು. ಆದರೆ ಕಾನೂನನ್ನು ಉಲ್ಲಂಘಿಸಲು ತೊಡಗಿರುವ ಬಹುಸಂಖ್ಯಾತ ಸಮೂಹವನ್ನು ಏನೂ ಮಾಡುವುದಕ್ಕೆ ಸಾಧ್ಯವಿಲ್ಲ. ಇಂಗ್ಲಿಷ್ ಕವಿ ಸಾಮ್ಯುಯಲ್ ಕೋಲರಿಡ್ಜ್ ಹೇಳುವ ಹಾಗೆ, ಮೂಲಭೂತ ಅಥವಾ ಮೂಲಭೂತವಲ್ಲದ ಎಲ್ಲ ರೀತಿಯ ಹಕ್ಕುಗಳನ್ನು ರಕ್ಷಿಸಲು ನಮ್ಮಲ್ಲೇ ಇರುವ ಶಾಂತಚಿತ್ತದ, ಭ್ರಷ್ಟನಾಗದ, ಶಾಸಕನಾದ ನಮ್ಮ ಆತ್ಮ ಅಥವಾ ನಮ್ಮ ಸಾಮಾಜಿಕ ಪ್ರಜ್ಞೆಯಿಂದ ಮಾತ್ರ ಸಾಧ್ಯ. ಈ ಸಾಧ್ಯತೆ ಒಂದು ರೀತಿಯಲ್ಲಿ ಧೈರ್ಯ ನೀಡುವಂತಹದೂ ಇನ್ನೊಂದು ರೀತಿಯಲ್ಲಿ ಗೊಂದಲಗೊಳಿಸುವುದೂ ಆಗಿದೆ. ಅಂತಿಮ ವಿಶ್ಲೇಷಣೆಯಲ್ಲಿ ಆತ್ಮಪ್ರಜ್ಞೆಯೊಂದನ್ನು ಬಿಟ್ಟರೆ ನಮ್ಮಲ್ಲಿ ಯಾವುದೇ ಸಂಪನ್ಮೂಲಗಳಿಲ್ಲವೆಂಬ ವಿಚಾರವು ನಮ್ಮನ್ನು ರಕ್ಷಣಾರಹಿತರನ್ನಾಗಿ ಮಾಡುತ್ತದೆ, ಅದರಲ್ಲೂ ನಮ್ಮ ಪ್ರಜ್ಞೆಗಳನ್ನು ಹುಸಿ ನಂಬಿಕೆಗಳು ಸುಲಭವಾಗಿ ದುರ್ಬಲಗೊಳಿಸುವ ಸಾಧ್ಯತೆಯಿರುವಾಗ, ಅದರಿಂದ ಅಪಾಯಗಳೇ ಹೆಚ್ಚಾಗಬಹುದು.

ರಾಜಕೀಯ ಯಶಸ್ಸನ್ನು ಕುರಿತಾದ ಯಾವುದೇ ಅಳತೆಗೋಲಿನಿಂದ ಅಂಬೇಡ್ಕರ್‌ರವರನ್ನು ಅಳೆದರೂ, ಅವರ ಚಿಂತನೆಯ ಸ್ವರೂಪವು ಯಾವುದೇ ಅಂಗೀಕೃತ ಸಿದ್ಧಾಂತವಾದಿ ಮಾದರಿಯಲ್ಲಿ ನಮೂದಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಅವರು ರಾಜಕೀಯವಾಗಿ ಅಷ್ಟೊಂದು ಪರಿಣಾಮಕಾರಿಯಾಗಲಿಲ್ಲ ಎನ್ನುವುದನ್ನು ಗಮನಿಸಬಹುದು. ಆದರೆ, ಅವರಲ್ಲಿ ನಮ್ಮ ನಾಗರಿಕತೆಯಲ್ಲಿದ್ದ ನಿಕೃಷ್ಟತೆಯನ್ನು ವಿರೋಧಿಸಲು ಬೇಕಾದ ಅಗಾಧ ಆತ್ಮಶಕ್ತಿ ಇತ್ತು. ಅವರೊಮ್ಮೆ ಹೀಗೆ ಹೇಳುತ್ತಾರೆ : "ನಾನೊಂದು ಕಲ್ಲುಬಂಡೆಯ ಹಾಗೆ, ನಾನೆಂದೂ ಕರಗುವುದಿಲ್ಲ; ಆದರೆ ನದಿಯು ಹರಿಯುವ ದಿಕ್ಕನ್ನು ಬದಲಾಯಿಸಬಲ್ಲೆ." ಖಂಡಿತವಾಗಿಯೂ ಒಂದು ನಾಗರಿಕತೆಯ ದಿಕ್ಕನ್ನು ನ್ಯಾಯದೆಡೆಗೆ ಅವರು ಬದಲಾಯಿಸಿದರು. ಅದರಿಂದ ಉಂಟಾದ ಘರ್ಷಣೆ ಮತ್ತು ಪ್ರತಿಧ್ವನಿಗಳನ್ನು ಸಂಪೂರ್ಣವಾಗಿ ಗ್ರಹಿಸಲು ನಮಗೆ ಇನ್ನೂ ಸಾಧ್ಯವಾಗಿಲ್ಲ. ವಿಮೋಚನೆಗಾಗಿ ಹಕ್ಕೊತ್ತಾಯಗಳು ಮತ್ತು ಹಿಂಸಾತ್ಮಕ ಪ್ರತಿರೋಧಗಳ ಮೂಲಕ ಕ್ರಮೇಣ ಭಾರತೀಯ ಸಮಾಜದಲ್ಲಿ ಅವು ಬಿಚ್ಚಿಕೊಳ್ಳುತ್ತಿವೆ. ಅಂಬೇಡ್ಕರ್‌ರವರು ಪ್ರತಿಯೊಬ್ಬನ ಮನದಲ್ಲೂ ನೆಲೆಸಿರುವ ಚಿಂತಕರಲ್ಲ, ಏಕೆಂದರೆ ನಾವು ಅವರಿಗೆ ಇನ್ನೂ ಸರಿಯಾಗಿ ಸಲ್ಲುವ ರೀತಿಯಲ್ಲಿ ಕಾರ್ಯಪ್ರವೃತ್ತರಾಗಿಲ್ಲ. ಒಂದೇ ಒಂದು ಅರ್ಥದಲ್ಲಿ ಅವರು ಎಲ್ಲರ ಚಿಂತಕರು. ನಮ್ಮೆಲ್ಲರನ್ನೂ ಎಚ್ಚರಿಸಲು ಅವರು ಸದಾ ನಿಂತಿರುತ್ತಾರೆ.

*(ದೆಹಲಿಯ ಸೆಂಟರ್ ಫಾರ್ ಪಾಲಿಸಿ ರೀಸರ್ಚ್‌ನ ಅಧ್ಯಕ್ಷರಾಗಿರುವ ಪ್ರತಾಪ್ ಭಾನು ಮೆಹತಾರವರು ಅತ್ಯಂತ ಜನಪ್ರಿಯ ಅಂಕಣಕಾರರು ಮತ್ತು ಸಾರ್ವಜನಿಕ ಬುದ್ಧಿಜೀವಿಗಳು)*

ಮೂಲ : **ಪ್ರತಾಪ್ ಭಾನು ಮೆಹತಾ**
ಕನ್ನಡಕ್ಕೆ : **ಡಾ|| ಕೆ. ಸುಂದರ ರಾಜ್**
ನಂ. ೩೨೭, 'ಕೃಷ್ಣ' ೪ನೇ ಮುಖ್ಯರಸ್ತೆ, ೯ನೇ ಅಡ್ಡರಸ್ತೆ
ಆವಲಹಳ್ಳಿ ಬಿಡಿಎ ಬಡಾವಣೆ, ಗಿರಿನಗರ, ಬನಶಂಕರಿ ೩ನೇ ಹಂತ
ಬೆಂಗಳೂರು – ೫೬೦ ೦೮೫

# ಮೋದಿ ಸರಕಾರದ ವಿದೇಶೀ ನೀತಿ
# ನೆರೆರಾಷ್ಟ್ರಗಳ ಜೊತೆ ಸುಧಾರಿಸದ ಸಂಬಂಧ



**ಮೋ**ದಿ ಪ್ರಧಾನ ಮಂತ್ರಿಯಾಗಿ ಅಧಿಕಾರ ವಹಿಸಿಕೊಂಡು ಎರಡು ವರ್ಷ ಮುಗಿದಿದೆ. ಈ ಎರಡು ವರ್ಷದಲ್ಲಿ ಪ್ರಪಂಚ ಪರ್ಯಟನೆಯನ್ನು ಮಾಡಿದ್ದು ಬಿಟ್ಟರೆ ವಿದೇಶಾಂಗ ವ್ಯವಹಾರಗಳ ಕ್ಷೇತ್ರದಲ್ಲಿ ಬೇರೇನೂ ಸಾಧನೆ ಇಲ್ಲ. ಅತಿ ಹೆಚ್ಚು ಸಂಖ್ಯೆಯ ದೇಶಗಳಿಗೆ ಭೇಟಿ ನೀಡಿರುವ ಪ್ರಧಾನಿ ಈತ. ವಿದೇಶಾಂಗ ಸಚಿವರನ್ನು, ಮಂತ್ರಾಲಯವನ್ನು ದೂರ ಇರಿಸಿ ವ್ಯವಹಾರ ನಡೆಸಿರುವ ಪ್ರಧಾನಿ ಮೋದಿ ಅಮೆರಿಕ ಮತ್ತು ಪಶ್ಚಿಮ ರಾಷ್ಟ್ರಗಳಿಗೆ ಹೆಚ್ಚು ನಿಕಟವಾಗಿ ಕೈ ಜೋಡಿಸಿರುವುದು ಅನಿರೀಕ್ಷಿತವೇನಲ್ಲ. ಹಾಗೆಯೇ ಇಸ್ರೇಲಿನಿನೊಂದಿಗೆ ಸಂಬಂಧವನ್ನೂ ಕೂಡ ಬೆಸೆದಿರುವುದು ಅಚ್ಚರಿಯೇನಲ್ಲ. ಉಳಿದಂತೆ ಯುಪಿಎ ಸರಕಾರದ ವಿದೇಶೀ ನೀತಿಯನ್ನೇ ಮೋದಿ ಮುಂದುವರಿಸಿದ್ದಾರೆ.

ನೆರೆರಾಷ್ಟ್ರಗಳ ಜೊತೆಗೆ ಸಂಬಂಧಗಳನ್ನು ಬೆಸೆಯುವ ನಿರೀಕ್ಷೆಯಿಂದ ಮೋದಿ ಭಾರತದ ಪ್ರಧಾನಿ ಪಟ್ಟ ಅಲಂಕರಿಸಿದಾಗ 'ಸಾರ್ಕ್' ದೇಶಗಳ ಅಧಿಪತಿಗಳನ್ನು ಆಮಂತ್ರಿಸಿದ್ದು, ಅವರುಗಳು ಆಗಮಿಸಿ ಸಮಾರಂಭದಲ್ಲಿ ಭಾಗವಹಿಸಿದ್ದು ಇತಿಹಾಸದ ಪುಟಗಳನ್ನು ಸೇರಿ ಎರಡು ವರ್ಷಗಳಾದವು. ಆದರೆ ಸಂಬಂಧಗಳಲ್ಲಿ ಮಾತ್ರ ಹೆಚ್ಚು ವ್ಯತ್ಯಾಸವೇನಾಗಿಲ್ಲ. ಮುಖ್ಯವಾಗಿ ಪಾಕಿಸ್ತಾನದೊಂದಿಗೆ ಬಾಂಧವ್ಯ ಮತ್ತಷ್ಟು ಹಳಸಿಕೊಂಡಿದೆ. ಅದೇ ರೀತಿಯಲ್ಲಿ ಹಿಮಾಲಯದ ತಪ್ಪಲಲ್ಲಿರುವ ದೇಶ ನೇಪಾಳದೊಂದಿಗೂ ಸಂಬಂಧ ಬಿಗಡಾಯಿಸಿದೆ.



ನೇಪಾಳದಲ್ಲಿ ಭೂಕಂಪದ ದುರಂತ ಸಂಭವಿಸಿದಾಗ ಭಾರತದ ಸೇನೆ ಹಾಗೂ ಸೇವಾ ಸಂಸ್ಥೆಗಳು ಸ್ತುತ್ಯಾರ್ಹವಾದ ಸೇವೆ ಸಲ್ಲಿಸಿದ್ದು ನಿಜ. ಹಾಗಿದ್ದರೂ ಪ್ರಚಾರಪ್ರಿಯತೆಯಿಂದಾಗಿ ದೊಡ್ಡಣ್ಣನ ರೀತಿ ವರ್ತನೆಯಿಂದಾಗಿ ನೇಪಾಳಿಗಳಿಂದ ಮೆಚ್ಚುಗೆ ಪಡೆಯಲಿಲ್ಲ. ಇದು ಒಂದು ಬಗೆಯಾದರೆ, ನೇಪಾಳ ಹಲವು ವರ್ಷಗಳ ಜಟಾಪಟಿಯ ನಂತರ ಅಂಗೀಕರಿಸಿದ ಹೊಸ ಸಂವಿಧಾನ ಮೋದಿ ಸರಕಾರಕ್ಕೆ ಮುಜುಗರ ಉಂಟುಮಾಡಿತು. ಏನೇ ಪ್ರಭಾವ ಬೀರಲು ಪ್ರಯತ್ನಿಸಿದರೂ ಮೋದಿ ಸರಕಾರಕ್ಕೆ ನಿರೀಕ್ಷಿತ ಫಲ ದೊರಕಲಿಲ್ಲ. ಭಾಜಪ ಸರಕಾರಕ್ಕೆ ಪ್ರಪಂಚದಲ್ಲಿ ಏಕೈಕ ಹಿಂದೂ ರಾಷ್ಟ್ರ ಎಂದು ಅಧಿಕೃತವಾಗಿ ಸಾರಿದ್ದ ದೇಶ ನೇಪಾಳ ಜಾತ್ಯತೀತ ಗಣರಾಜ್ಯವಾಗಿ ಮಾರ್ಪಾಟಾದದ್ದು ಹಿಡಿಸಲಿಲ್ಲ. ಭಾರತದ ಗಡಿಗೆ ಅಂಟಿಕೊಂಡಿರುವ ಪ್ರದೇಶದಲ್ಲಿ ಮಾದೇಶಿ ಜನಾಂಗದವರು ಹೊಸ ಸಂವಿಧಾನದಲ್ಲಿ ತಮಗೆ ಸೂಕ್ತವಾದ ಪ್ರಾತಿನಿಧ್ಯ ಹಾಗೂ ಪ್ರಾಮುಖ್ಯತೆ ದೊರೆತಿಲ್ಲ ಎಂದು ಪ್ರಾರಂಭಿಸಿದ ಆಂದೋಳನಕ್ಕೆ ಭಾರತ ಪರೋಕ್ಷವಾಗಿ ಬೆಂಬಲ ನೀಡಿದ್ದು, ಅದನ್ನೇ ನೆಪವಾಗಿರಿಸಿಕೊಂಡು ನೇಪಾಳಕ್ಕೆ ಸರಕು–ಸಾಗಣೆ ಸ್ಥಗಿತಗೊಳಿಸಿದ್ದು ನೇಪಾಳಿ ಆಡಳಿತ ವಲಯದಿಂದ ತೀವ್ರವಾದ ಪ್ರತಿಕ್ರಿಯೆ ತಂದಿತು. ಗಡಿಯಲ್ಲಿ ಮೈಲಿಗಟ್ಟಳೆ ಸಾಲಾಗಿ ನಿಂತ ಸರಕು–ಸಾಗಣೆ ವಾಹನಗಳು ಒಂದು ರೀತಿಯಲ್ಲಿ ಆರ್ಥಿಕ ದಿಗ್ಬಂಧನವಾಗಿ ತೋರಿತು ನೇಪಾಳದ ಸರಕಾರಕ್ಕೆ. ಆ ದಿನಗಳಲ್ಲಿ ನೇಪಾಳ ಚೀಣಾದ ಮೇಲೆ ಅವಲಂಬಿತವಾದ್ದನ್ನು ನಾವು ನೋಡಿದ್ದೇವೆ. ಇದು ಬಗೆಹರಿದ ನಂತರ ನೇಪಾಳದಲ್ಲಿ ಹೊಸ ಸಂವಿಧಾನದಡಿಯಲ್ಲಿ ಚುನಾವಣೆಗಳು ನಡೆದದ್ದು, ಕಮ್ಯುನಿಸ್ಟ್ ಪಕ್ಷಗಳು ಒಂದುಗೂಡಿ ಸರಕಾರ ಸ್ಥಾಪಿಸಿದ್ದು ಭಾರತ ಸರಕಾರಕ್ಕೆ ಕಸಿವಿಸಿ ಉಂಟುಮಾಡಿತು. ಮಾದೇಶಿಗಳು ನಡೆಸಿದ ಚಳವಳಿ ನೇಪಾಳದ ಆಂತರಿಕ ವಿಷಯ. ಹಾಗೆಯೇ ಈಗ ನೇಪಾಳ ಸರಕಾರ ಈಗ ಎದುರಿಸುತ್ತಿರುವ ಬಿಕ್ಕಟ್ಟು ಕೂಡ. ಎರಡರಲ್ಲೂ ಭಾರತದ ಕೈವಾಡವಿದೆ ಎನ್ನುವುದು ನೇಪಾಳಿ ಆಡಳಿತದ ಸಂಶಯ, ಆರೋಪ. ಇದು ತಕ್ಕಮಟ್ಟಿಗೆ ಹೌದೂ ಕೂಡ. ಭಾರತಕ್ಕೆ ಭೇಟಿ ನೀಡಲಿದ್ದ ನೇಪಾಳದ ರಾಷ್ಟ್ರಪತಿ ಬಿದ್ಯಾದೇವಿ ಭಂಡಾರಿಯವರ ಭೇಟಿಯನ್ನು ನೇಪಾಳಿ ಸರಕಾರ ರದ್ದುಗೊಳಿಸಿದೆ. ಭಾರತದಲ್ಲಿರುವ ತನ್ನ ರಾಯಭಾರಿಯನ್ನೂ ಹಿಂದಕ್ಕೆ ಕರೆಸಿಕೊಂಡಿದೆ. ಒಟ್ಟಿನಲ್ಲಿ ನೇಪಾಳದೊಂದಿಗೆ ಮೋದಿ ಸರಕಾರದ ಸಂಬಂಧಗಳು ಅಸಮರ್ಪಕವಾಗಿವೆ.

ದಿಢೀರ್ ಡಿಪ್ಲೊಮಸಿಯಿಂದ ಸಂಬಂಧಗಳು ಕುದುರದು ಎನ್ನುವುದನ್ನು ಪಾಕಿಸ್ತಾನ ಸ್ಪಷ್ಟವಾಗಿ ತೋರಿಸಿಕೊಟ್ಟಿದೆ ಪ್ರಧಾನಿ ಮೋದಿಗೆ. ಮಾರ್ಗ ಮಧ್ಯದಲ್ಲಿ ಏಕಾಏಕಿ ಲಾಹೋರಿನಲ್ಲಿಳಿದು ಪಾಕ್ ಪ್ರಧಾನಿ ನವಾಜ್ ಷರೀಫರನ್ನು ಭೇಟಿ ಮಾಡಿ ಎರಡೂ ದೇಶಗಳ ಅಧಿಕಾರಿಗಳ ಮಟ್ಟದ ಸಭೆ ನಡೆಸಲು ನಿರ್ಧರಿಸಿ ಪ್ರಕಟಣೆ ನೀಡಿದ್ದು ರಾಜತಾಂತ್ರಿಕ ವಲಯದಲ್ಲಿ ಸಂಭವಿಸಿದ ಕೂಪ್ ಆಗಿತ್ತು. ಭಾಜಪದವರು ಅದಕ್ಕೆ ಅಬ್ಬರದ ಪ್ರಚಾರವನ್ನೂ ನೀಡಿದರು. ಮೋದಿಯವರ ತೀಕ್ಷ್ಣಮತಿಯನ್ನು, ಮುನ್ನಡೆಯನ್ನು ಕೊಂಡಾಡಿದರು. ಆದರೆ ಅಧಿಕಾರಿಗಳ ಮಟ್ಟದ ಸಭೆ ಮಾತ್ರ ನಡೆಯಲಿಲ್ಲ. ಅಷ್ಟರಲ್ಲಿ ನಡುವೆ ಸಂಭವಿಸಿದ್ದು ಪಂಜಾಬಿನ ಪಠಾನ್ ಕೋಟ್ ಮಿಲಿಟರಿ ವಿಮಾನ ನೆಲೆಯ ಮೇಲೆ ಭಯೋತ್ಪಾದಕರು ನಡೆಸಿದ ದಾಳಿ. ಪಾಕಿಸ್ತಾನದ ಸೇನೆಯ ಭಾಗವಾಗಿರುವ ಪ್ರಬಲವಾದ ಗೂಢಚರ್ಯೆ ಸಂಸ್ಥೆ ಐಎಸ್ಐನ ಕೈವಾಡ ಈ ದಾಳಿಯ ಹಿಂದಿದ್ದುದು ರಹಸ್ಯವೇನಲ್ಲ. ತನಿಖೆಯಿಂದ ಹೊರಬಿದ್ದ ಒಂದು ಅಂಶವೆಂದರೆ ನಮ್ಮ ದೇಶದ ಗೂಢಚರ್ಯೆ ಸಂಸ್ಥೆಯ ಅಜಾಗರೂಕತೆ. ಇನ್ನೊಂದು ದುರ್ಘಟನೆಯ ಸೂಚನೆ ಇದ್ದಾಗ್ಯೂ ಅದನ್ನು ಕಡೆಗಣಿಸುವ ಮನೋಭಾವ. ಪಾಕಿಸ್ತಾನಿ ಗುಪ್ತಚರ ಪಡೆ ಬೇಕೆನಿಸಿದಾಗ ಎಲ್ಲೆಂದರಲ್ಲಿ ಭಯೋತ್ಪಾದನಾ ಕೃತ್ಯ ಎಸಗಲು ಸಮರ್ಥ ಎನ್ನುವುದನ್ನು ಪಠಾನ್ ಕೋಟ್ ಘಟನೆ ತೋರಿಸಿದೆ. ಸಾಕ್ಷ್ಯಾಧಾರಗಳಿಗಾಗಿ ಪಾಕಿಸ್ತಾನಗಳ ಮಿಲಿಟರಿ ತಂಡ ಬಂದುಹೋದದ್ದೂ ಆಯಿತು. ಭಾರತ ಮತ್ತು ಪಾಕಿಸ್ತಾನದ ಭದ್ರತಾ ಅಧಿಕಾರಿಗಳ ಸಭೆಯೂ ಈಚೆಗೆ ನಡೆಯಿತು, ಆದರೆ ಅದರಿಂದೇನೂ ಪ್ರಗತಿಯಾಗಲಿಲ್ಲ.

ಇಷ್ಟೆಲ್ಲಾ ಆದರೂ ಮೋದಿ ಸರಕಾರ ಇನ್ನೂ ಪಾಠ ಕಲಿತಿಲ್ಲ. ಪಾಕಿಸ್ತಾನದ ನಾಗರಿಕ ಸರಕಾರ ಅಲ್ಲಿನ ಸೇನಾಧಿಕಾರಿಗಳ ಸಮ್ಮತಿಯಿಲ್ಲದೆ ಏನೇ ಕ್ರಮ ತೆಗೆದುಕೊಂಡರೂ ಅದಕ್ಕೆ ಬೆಲೆ ಇಲ್ಲ. ಇದು ಹಿಂದಿನಿಂದ ಬಂದದ್ದು. ಭಾಜಪ ಸರಕಾರ, ಅದೂ ಸ್ವತಃ ಪ್ರಧಾನಿ ಮೋದಿ ಇದನ್ನು ಅರಿಯುವುದು ಮುಖ್ಯ. ಅದರಲ್ಲೂ ಪಾಕಿಸ್ತಾನದೊಂದಿಗಿನ ಸಂಬಂಧಗಳ ವಿಚಾರದಲ್ಲಿ ಇದನ್ನು ಸ್ಪಷ್ಟವಾಗಿ ಗಮನಿಸಬೇಕು. ಎರಡೂ ದೇಶಗಳ ಹಲವು ಸಮಸ್ಯೆಗಳಿಗೆ, ಮುಖ್ಯವಾಗಿ ಕಾಶ್ಮೀರದ ವಿಚಾರ ಕುರಿತು ಪರಿಹಾರಕ್ಕೆ ಇರುವ ಏಕೈಕ ಮಾರ್ಗ ಎಂದರೆ ಮಾತುಕತೆ. ಅದಕ್ಕೆ ಯಾವತ್ತೂ ಬಾಗಿಲು ತೆರೆದಿರಬೇಕು. ಎರಡೂ ಕಡೆ ಮುತ್ಸದ್ದಿತನ ಮುಂದಾಗಬೇಕು. ಅದಕ್ಕೆ ಅಗತ್ಯವಾದ ಸಿದ್ಧತೆಯನ್ನು ಎರಡೂ ಕಡೆ ನಡೆಸಬೇಕು.


**ಸೀಯಾರ್ಕೆ**

'ಚೌಬೀನ', ನಂ. ೮೪೯, ೬ನೇ ಕ್ರಾಸ್
ಬನಶಂಕರಿ ೩ನೇ ಹಂತ, ೩ನೇ ಬ್ಲಾಕ್, ಕತ್ರಿಗುಪ್ಪೆ
ಬೆಂಗಳೂರು – ೫೬೦ ೦೮೫

# ಒಳ್ಳೆತನ ಸಹಜವೇನಲ್ಲ

ಎನ್. ಬೋರಲಿಂಗಯ್ಯ

**ಈ** ಕವನದಲ್ಲಿ ಕೂಡ ಅಡಿಗರು ಒಳ್ಳೆತನ ಸಹಜವೇನಲ್ಲ ಎಂಬ ತಿಳಿವಳಿಕೆಯನ್ನು ಎರಡು ಸುಂದರ ವಸ್ತು ಪ್ರತಿರೂಪ ಪ್ರತಿಮೆಗಳ ಮೂಲಕ ಮುಂದಿಟ್ಟು ಮನದಟ್ಟು ಮಾಡಿಕೊಡಲು ಪ್ರಯತ್ನಿಸುತ್ತಾರೆ. ಆ ಪ್ರತಿಮೆಗಳು ಹೀಗಿವೆ:

*೧. ಒಳ್ಳೆತನ ಸಹಜವೇನಲ್ಲ; ಸಹಜದೊಳಗಿನ ಕಿಡಿಗೆ*
*ಆಟವಾಡುವ ತಲಬು ಮುಖ್ಯ; ರೂಪಾಂತರದ ಅಥವಾ*
*ಸಾಯದೆ ಸತ್ತು ಹುಟ್ಟದೆ ಹುಟ್ಟಿ ಮತ್ತೆ ಮತ್ತೆ ಪುಟ್ಟಿಡಿಯಿಟ್ಟು*
*ಹಂತಹಂತಕ್ಕೆ ಜಿಗಿಯುವ ಗುಪ್ತ ತಾಖತ್ತಿನ ವಿಕಾಸದ ವಿಚಾರ.*

*೨. ಹೊತ್ತಿ ಉರಿದು ತಕತಕ ಕುಣಿವ*
*ಜ್ವಾಲೆಮಂತಿನ ಕಂತಕಡೆತಕ್ಕೆ ಸಿಕ್ಕಿ ಸುಸ್ತಾದ ಕತ್ತಲ ಬೇನೆ ಕೊನೆಕೊನೆಗೆ*
*ಹಿಡಿವ ದಿವ್ಯದ ಫಲ.*

ಇಲ್ಲಿಯ ಮೊದಲನೆಯ ಪ್ರತಿಮೆಯಲ್ಲಿ ಒಳ್ಳೆತನ ಸಹಜ ಯಾಕಲ್ಲ ಎಂಬುದರ ಕಾರಣವನ್ನು ಕೊಡುತ್ತಾರೆ, ಕವಿ. ಹುಟ್ಟುವಾಗ ಎಲ್ಲವೂ ಸಹಜವೆ. ಆದರೆ ಬೆಳೆಯುತ್ತಾ, ಆಟವಾಡುವ ತಲಬುಗೊಳಗಾಗುತ್ತಾ ಏನಾಗುತ್ತಾರೋ ಹೇಳಲು ಬರುವುದಿಲ್ಲ. ನೂರಾರು ಕ್ಷಣಿಕ ಸುಖದ ಸೆಳೆತಗಳ ನಡುವೆ ಒಳ್ಳೆತನ ಉಳಿಸಿಕೊಳ್ಳುವುದು ಸುಲಭವಲ್ಲ. ಅದೊಂದು ರೂಪಾಂತರದ ಅಥವಾ ಜನ್ಮಾಂತರದ ತಾಖತ್ತಿನ ವಿಕಾಸದ ವಿಚಾರವಾಗಿರುತ್ತದೆ. ಕವಿ ಅಡಿಗರು ಇಲ್ಲಿ ತಾಖತ್ತು ಎಂಬ ಪದ ಬಳಸುತ್ತಿದ್ದಾರೆ. ಒಳ್ಳೆತನ ಜನ್ಮಾಂತರದ ಈ ಕವನ 'ಸಮಗ್ರಕಾವ್ಯ' ಪೂರ್ಣ ಸಂಪುಟದ ೩೩೩ನೆಯ ಪುಟದಲ್ಲಿದೆ. ಫಲ ಎಂಬುದು ಹೌದೋ ಅಲ್ಲವೋ – ಅದು ಎರಡನೆಯ ವಿಚಾರ. ಯಾಕೆಂದರೆ, ಕವಿ ಅದನ್ನು ನಂಬಿದರೆ ನಾವೂ ನಂಬಬೇಕಿಲ್ಲ. ಆದರೆ ಆಧುನಿಕ ಬದುಕಿನಲ್ಲಿ ಮಾತ್ರವಲ್ಲ, ಯಾವ ಕಾಲದ ಬದುಕಿನಲ್ಲಿಯೇ ಆಗಲಿ ಒಳ್ಳೆಯವರಾಗಿ ಉಳಿಯುವುದು ಅಷ್ಟು ಸರಳವಾದ ಮಾತಲ್ಲ ಎಂಬುದು ಮಾತ್ರ ಸತ್ಯ.

ಇಲ್ಲಿಯ ಎರಡನೆಯ ಪ್ರತಿಮೆ ಮತ್ತಷ್ಟು ಉಜ್ವಲವಾಗಿದೆ. ವ್ಯಕ್ತಿ ಪರಿಸರದ ಪರಿಣಾಮ ಎಂಬುದನ್ನೂ ಯಾರೂ ಅಲ್ಲಗಳೆಯುವಂತಿಲ್ಲ. ಜನ್ಮಾಂತರದಲ್ಲಿ (ಆನುವಂಶೀಯವಾಗಿ) ಪಡೆದು ಬಂದದ್ದು ಪರಿಸರದ ಪ್ರಭಾವಕ್ಕೆ ಸಿಕ್ಕಿ ನುಚ್ಚುನೂರಾಗಬಹುದು. ಅಥವಾ ಅಚ್ಚಿನಲ್ಲಿಯೆ ಪಡಿಯಚ್ಚಾಗಬಹುದು. ವ್ಯಕ್ತಿಯ ಜೀವನದಲ್ಲಿ ಪರಿಸರ ನಿರ್ಮಿಸುವ ಇಕ್ಕಟ್ಟು ಬಿಕ್ಕಟ್ಟುಗಳನ್ನು ಕವಿ ಇಲ್ಲಿ 'ಕತ್ತಲ ಬೇನೆ' ಎಂಬ ಪ್ರತೀಕದ ಮೂಲಕ ನಮ್ಮ ಅನುಭವದ ಭಾಗವಾಗಿಸಿದ್ದಾರೆ.

ಈ ಕತ್ತಲ ಬೇನೆ ಅಥವಾ ಮೂಕ ಸಂಕಟ ನಮ್ಮ ಸುತ್ತಮುತ್ತಣ ತವಕ ತಲ್ಲಣಗಳು "ಹೊತ್ತಿ ಉರಿದು ತಕತಕ ಕುಣಿವ ಜ್ವಾಲೆ"ಯ ಕಡೆಗೋಲಿನ ಕಡೆತಕ್ಕೆ ಸಿಕ್ಕಿ ಸುಸ್ತಾಗಿ ಅಕಸ್ಮಾತ್ ಹೊರಳಿ ಹಿಡಿದುಕೊಂಡ ದಿವ್ಯದ ಫಲ. ಹಾಗಿಲ್ಲದಿದ್ದರೆ ಒಳ್ಳೆತನದೆದುರು ಕೆಡುಕು ವಿಜೃಂಭಿಸಬೇಕಿರಲಿಲ್ಲ.

ತಮ್ಮ ಕವನದ ಮೂರನೆಯ ಪ್ರತಿಮೆಯಲ್ಲಿ ಅಡಿಗರು ಎರಡನೆಯದನ್ನು ಮತ್ತಷ್ಟು ಧಾಳಾಗಿಸುವುದಕ್ಕಾಗಿಯೆಂಬಂತೆ ಒಂದು ಪೌರಾಣಿಕ ಪ್ರಸಂಗವನ್ನು ಮುಂದಿಡುತ್ತಾರೆ. ಈ ಕವಿ ಆಧುನಿಕ ಬದುಕಿನ ಅವಿವೇಕಗಳನ್ನು ತಿದ್ದುವುದಕ್ಕೆ ನಮ್ಮ ಪುರಾಣಗಳಿಂದ ಯಥೇಚ್ಛ ಲಾಭ ಮಾಡಿಕೊಂಡಿದ್ದಾರೆ. ಅದು ಅವರ ಆಡುಂಬೊಲ ಕೂಡ. ಈ ಪೌರಾಣಿಕ ಸಂದರ್ಭ ಹೀಗಿದೆ:

*ಕೆಡುಕಿನಷ್ಟಮ ಗರ್ಭ*
*ಹೆತ್ತ ಪ್ರಜ್ಞೆಯ ಕೂಸು;*
*ಎತ್ತಿ ಕೈದೊಟ್ಟಿಲಲ್ಲಿಟ್ಟು ತೂಗಿದ್ದು, ಮೊಲೆಯುಣಿಸಿ ಬೆಳೆಸಿದ್ದು,*
*ಕಾಲದಾರ್ಭಟದಟಾಟೋಪದಲ್ಲಿ ಹುಟ್ಟುಹಾಕಿ, ಹಾಯಿ ಬಿಚ್ಚಿ,*
*ದಿಕ್ಚಕ್ರ ನೋಡಿ, ಸುಂಕಾಣಿ ತಿರುಗಿಸಿ,*
*ಹುಬ್ಬುಗೈ ತಬ್ಬಿಬ್ಬಿನಲ್ಲಿ ದಿಗಂತವ ಸೋಸಿ ಅರಸುತ್ತ,*
*ಬೆವರೊರಸುತ್ತ ದೀವಿಗೆ ತಂದು ಬಿಟ್ಟದ್ದು*
*ಕಲ್ಪವೃಕ್ಷದ ಕೆಳಗೆ, ಪಾರಿಜಾತದ ಸಮೀಪ.*

ರಾಕ್ಷಸ ಕಂಸನ ದೃಷ್ಟಿಯಲ್ಲಿ ತಂಗಿ ದೇವಕಿಯ ಎಂಟನೆಯ ಗರ್ಭ ಆತನಿಗೆಯೇ ಕೆಡುಕಿನದ್ದಾದರೆ ಕವಿಯ ಕಣ್ಣಿಗೆ ಜಗತ್ತನ್ನು ಹೊರೆಯಲಿರುವ ಒಳ್ಳೆತನದ ಪ್ರಜ್ಞೆಯ ಕೂಸಾಗಿ ಕಂಡು ನವೀಕರಣಗೊಳ್ಳುತ್ತದೆ. ಕೆಡುಕಿನ ವಿರುದ್ಧ ಹಗಲಿರುಳೂ ಹೋರಾಡಿ ಗೆಲ್ಲುವ ಈ ಪ್ರಜ್ಞಾವಂತಿಕೆಯನ್ನು ಮನುಷ್ಯಲೋಕ ಬಹಳ ಹಿಂದಿನಿಂದ ಜತನ ಮಾಡಿಕೊಂಡು ಬಂದಿದೆ. ಆಗತಾನೆ ಹುಟ್ಟಿದ ಹಸುಗೂಸಿನ ಮೇಲೆರಗಿ ಬಂದ ಕಾಲದಾರ್ಭಟದ ಸೆಳೆತದಿಂದ ಅದನ್ನು ಬಿಡಿಸಿ ತಂದು ಕ್ಷೇಮಂಕರ ಸ್ಥಳಕ್ಕೆ ಸೇರಿಸುವ ರೀತಿಯನ್ನು ಕವಿ ಗೋಪಾಲಕೃಷ್ಣ ಅಡಿಗರು ತಮಗೆ ಪ್ರಿಯವಾದ ಹಾಯಿದೋಣಿಯ ಪ್ರತೀಕಗಳ ಮೂಲಕ ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಅಂದರೆ ಒಳ್ಳೆತನದ ಪ್ರತೀಕ ಬಾಲಕೃಷ್ಣನನ್ನು ವಸುದೇವ ಧಾರಾಕಾರ ಸುರಿಯುತ್ತಿದ್ದ ಸಿಡಿಲು ಮಿಂಚಿನ ಮಳೆಯಲ್ಲಿ, ಭೋರ್ಗರೆವ ಪ್ರವಾಹದಲ್ಲಿ ದಿಕ್ಕುಗಳನ್ನು ಸೋಸುತ್ತಾ ತಡವರಿಸುತ್ತಾ ದಿಗ್ಭ್ರಾಂತಿಯ ಭಯದ ಸೆಳೆವಿನಲ್ಲಿ ಮಗುವನ್ನು ಎದೆಗವಚಿ ಕಂಸಭೀತಿಯ ಮಹಾಸಂಕಷ್ಟದಲ್ಲಿ ನಡುಗುತ್ತಾ ಬಂದು ನಂದಗೋಕುಲದ ಗುರಿಮುಟ್ಟುತ್ತಾನೆ. "ಕಲ್ಪವೃಕ್ಷದ ಕೆಳಗೆ ಪಾರಿಜಾತದ ಸಮೀಪ" ಮಗುವನ್ನಿರಿಸಿನಿಟ್ಟುಸಿರುಗರೆಯುತ್ತಾನೆ. ಒಳ್ಳೆಯತನ ಪ್ರಾಕೃತಿಕವೇ ಆದರೂ ಅದನ್ನು ಕೆಡುಕಿಗೆ ಬಲಿಯಾಗದಂತೆ ಸಂರಕ್ಷಿಸುವುದರಲ್ಲಿ ಮಾನುಷ ಪ್ರಯತ್ನ ನಿರಂತರವಾಗಿದೆ, ಇರಬೇಕು.

ಕೆಡುಕಿನ ವಿರುದ್ಧ ಹಗಲಿರುಳೂ ಹೋರಾಡಿ ಗೆಲ್ಲುವ ಈ ಪ್ರಜ್ಞಾವಂತಿಕೆಯನ್ನು ಮನುಷ್ಯಲೋಕ ಬಹಳ ಹಿಂದಿನಿಂದ ಜತನ ಮಾಡಿಕೊಂಡು ಬಂದಿದೆ. ಆಗತಾನೆ ಹುಟ್ಟಿದ ಹಸುಗೂಸಿನ ಮೇಲೆರಗಿ ಬಂದ ಕಾಲದಾರ್ಭಟದ ಸೆಳೆತದಿಂದ ಅದನ್ನು ಬಿಡಿಸಿ ತಂದು ಕ್ಷೇಮಂಕರ ಸ್ಥಳಕ್ಕೆ ಸೇರಿಸುವ ರೀತಿಯನ್ನು ಕವಿ ಗೋಪಾಲಕೃಷ್ಣ ಅಡಿಗರು ತಮಗೆ ಪ್ರಿಯವಾದ ಹಾಯಿದೋಣಿಯ ಪ್ರತೀಕಗಳ ಮೂಲಕ ಬಹಳ ಮನೋಜ್ಞವಾಗಿ ಚಿತ್ರಿಸಿದ್ದಾರೆ. ಅಂದರೆ ಒಳ್ಳೆತನದ ಪ್ರತೀಕ ಬಾಲಕೃಷ್ಣನನ್ನು ವಸುದೇವ ಧಾರಾಕಾರ ಸುರಿಯುತ್ತಿದ್ದ ಸಿಡಿಲು ಮಿಂಚಿನ ಮಳೆಯಲ್ಲಿ, ಭೋರ್ಗರೆವ ಪ್ರವಾಹದಲ್ಲಿ ದಿಕ್ಕುಗಳನ್ನು ಸೋಸುತ್ತಾ ತಡವರಿಸುತ್ತಾ ದಿಗ್ಭ್ರಾಂತಿಯ ಭಯದ ಸೆಳೆವಿನಲ್ಲಿ ಮಗುವನ್ನು ಎದೆಗವಚಿ ಕಂಸಭೀತಿಯ ಮಹಾಸಂಕಷ್ಟದಲ್ಲಿ ನಡುಗುತ್ತಾ ಬಂದು ನಂದಗೋಕುಲದ ಗುರಿಮುಟ್ಟುತ್ತಾನೆ.

ಹಾಗಾದರೆ ಒಳ್ಳೆತನ ಅಸಹಜವೆ? ಎಂದು ಕೇಳಿದರೆ ಅಲ್ಲ ಎನ್ನುತ್ತಾರೆ ಅಡಿಗರು. ಕೇಳಿ :

*ಒಳ್ಳೆತನ ಅಸಹಜವೂ ಅಲ್ಲ; ಅದು ಬೆಳವಣಿಗೆಯ*
*ಸವಾಲು. ಬೀಜ, ಮೊಳಕೆ, ಎಲೆ, ಕೊಂಬೆ, ಮಿಡಿಗೊಂಚಲು – ಈ ಯಾವ*
*ಹಂತದಲ್ಲಿ ಕೊಡಲಿಯ ಕಾವು ಆಡೀತೋ, ಹುಳು ಹತ್ತಿ,*
*ಬಿರುಗಾಳಿ ಬಡಿದು, ನೀರಿಲ್ಲದೇ ಅಡಗಿತೋ ದೀಪ – ತಿಳಿಯದು.*

ಒಳ್ಳೆತನದ ಜತನದ ಹಾದಿಯಲ್ಲಿ ಎದುರಾಗುವ ಇದು ಇನ್ನೊಂದು ದೃಶ್ಯ. ಪೋಷಕರ, ಹಿತೈಷಿಗಳ, ಸಾಮಾಜಿಕ ಹಿರಿಯರ ಹೊಣೆಗಾರಿಕೆಗೆ ಸಂಬಂಧಿಸಿದ್ದು, ಎಲ್ಲಿ, ಯಾವ ಹಂತದಲ್ಲಿ ಬೇಕಾದರೂ ಯಾವ ರೂಪದಲ್ಲಿಯಾದರೂ ಏನೂ ಆಗಬಹುದಾದ ಅಪಾಯ ಇದ್ದದ್ದೆ. ಇಲ್ಲಿ ಒಳ್ಳೆತನವನ್ನು 'ದೀಪ' ಎಂದು ಕರೆದಿರುವುದು ಸೂಕ್ತವಾಗಿದೆ.

ಇನ್ನು ಮುಂದಿನದ್ದನ್ನು ಗಮನಿಸಿ:

*"ಎಲೆ, ಚಿಗುರು ತಿಂದು ಕೊಬ್ಬಿದ ಕೊಳಚೆ ಹುಳು ಸುತ್ತ*
*ಕಟ್ಟಿಕೊಂಡರೆ ಕೋಶ, ಕಾದರೆ ಒಳಗೆ, ಯಥಾವಕಾಶ*
*ಮೂಡುವುದು ಬಣ್ಣಬಣ್ಣದ ಚಿಟ್ಟೆ ;*

ಪ್ರಕೃತಿಯಲ್ಲಿ ಕಂಬಳಿ ಹುಳು ಚಿಟ್ಟೆಯಾಗಿ ರೂಪಾಂತರಗೊಳ್ಳುವ ವಿಸ್ಮಯವನ್ನು ಕವಿ ಒಳ್ಳೆತನದ ವಿಕಾಸದ ರೂಪಾಂತರಕ್ಕೆ ಪ್ರತಿಮೆಯಾಗಿ ಒಡ್ಡುತ್ತಿರುವುದು ಅದ್ಭುತವಾಗಿದೆ. ನಮ್ಮ ನಿಮ್ಮ ಕಣ್ಣೆದುರಿನಲ್ಲಿಯೇ ನಡೆಯುತ್ತಿರುವ ಈ ಪ್ರಾಕೃತಿಕ ಕ್ರಿಯೆ ಸೃಷ್ಟಿ ನಿರ್ಮಾಣದ ನಿರಂತರ ತಡೆಯಲ್ಲಿ ನಿರ್ವಹಿಸುತ್ತಿರುವ ಕಾರ್ಯ ಎಷ್ಟು ಕುತೂಹಲಕಾರಿಯಾಗಿವೆ ಎಂಬಂಥ ವಿಸ್ಮಯವನ್ನು ಇದು ಎತ್ತಿಹಿಡಿಯುತ್ತದೆ. ಬುದ್ಧ, ಕ್ರಿಸ್ತ, ಗಾಂಧಿಯರ ಒಳ್ಳೆತನ ನಡೆದುಬಂದ ದಾರಿ ವಿಸ್ಮಯವಲ್ಲದೆ ಮತ್ತೇನು ? ಈ ಮೇಲಿನ ಸಾಲುಗಳಲ್ಲಿಯ 'ಕಾದರೆ ಒಳಗೆ' ಎಂಬಲ್ಲಿಯ 'ಕಾದರೆ' ಮಾತಿಗೆ ತಾಳ್ಮೆ ವಹಿಸಿದರೆ ಎಂಬಂತೆ ಕಾವು ಕೂತರೆ ಎನ್ನುವುದೂ ವ್ಯಂಜಿತವಾಗುತ್ತದೆ.

*ಗಡ್ಡೆ ಕಟ್ಟಿದ ನೀರಿಗೆ ಬೆಂಕಿ ತಟ್ಟಿದರೆ ಕುದಿ ಎಸರು,*
*ಗಾಳಿ ತುಳಿಯುವ ಆವಿ ಆವಿಗೆ ಹೊಟ್ಟು*
*ಹುಲ್ಲೊಟ್ಟಿದರೆ ನೀರೆ ನೊರೆಹಾಲು; ಹಾಲೊಳಗವಿತ*
*ತುಪ್ಪ , ಕಿಚ್ಚಿನ ಗೆಳೆಯ.*

ಕಾವ್ಯಲೋಕ



# ಅರ್ಥವಾಗದ ಕವಿತೆ



ಉಸಿರಾಟಕ್ಕೆ ಇಷ್ಟು ಶುದ್ಧ ಗಾಳಿ ಸಿಗದೆ
ಟ್ರಾಫಿಕಜಾಮಿನಲ್ಲಿ ಹೈರಾಣಾದ ಮನಸ್ಸುಗಳಿಗೆ
ಸಂಜೆ ವೇಳೆಗೆ ಕವಿದುಕೊಂಡಿರುತ್ತದೆ
ಟೆನ್‌ಶನ್ನು ತುಮುಲ.
ಅಂಥದ್ದರಲ್ಲಿ ಒಂದೀಟು ಕೊಬ್ಬರಿ ಬೆಲ್ಲವಿಲ್ಲದ
ಇವರ ಕವಿತೆಗಳ ಹೆರಿಗೆ ಮಾಡಿಸಲು
ಒದ್ದಾಡಬೇಕಾಗುತ್ತದೆ ಜನ ವಿಲವಿಲ.

ಕವಿತೆಯ ಮುಂಡಿ–ಪಾಂವ
ಒಂದೂ ಅರ್ಥವಾಗುವುದಿಲ್ಲ
ಯಾವುದೋ ಪ್ರತಿಮೆ ಇನ್ನಾವುದೋ ಸಂಕೇತವಂತೆ
ಇವರ ಮನೆ ಹಾಳಾಗ
ಎಷ್ಟು ತಲೆ ಕೆರೆದುಕೊಂಡರೂ ವ್ಯರ್ಥವೆಲ್ಲ.

ಏನನ್ನೋ ಹೊಸೆಯುತ್ತ
ಮತ್ತಿನ್ನೇನೋ ಬೆಸೆಯುತ್ತಾರೆ
ಕತ್ತೆ ಬರೆಯುತ್ತ ಕುದುರೆ ಬರೆಯುತ್ತಾರೆ
ಕೆಲವರು ಅದನ್ನು 'ಹೇಸರಗತ್ತೆ' ಎನ್ನುತ್ತಾರೆ ಎಂದು –
ಕುದಿಯುತ್ತಿದ್ದಾರೆ ಜನ.

ಕವಿಗಳೆಂದರೆ ಪಕ್ಕಾ ಮೆಂಟಲ ಗಿರಾಕಿಗಳು
ಎನ್ನುತ್ತಿದ್ದಾರೆ ಜನ
ಹೀಗಾಗಿ ಇಂದು ಕವಿಗೋಷ್ಠಿಗಳೆಲ್ಲ ರಣ ರಣ ಭಣಭಣ.
ಕವಿಗಳಿಗೆ ಕವಿಗಳೆ ಕಿವಿಯಾಗಬೇಕಾದ ಸಂದಿಗ್ಧ ಕಾಲ
ಸ್ವಲ್ಪ ಇರುತ್ತದೆ ಪತ್ರಕರ್ತರ ಬಾಲ.

ಈಗಿನ ನಮ್ಮ ಜಮಾನಾದಲ್ಲಿಯೂ
ಕವಿಗಳಿದ್ದಾರೆಂದು ಹೇಳಿಕೊಳ್ಳುವದಕ್ಕೆ ಮಾತ್ರ

ಈಗ ಜನರಿಗೆ ಕವಿ ಬೇಕು
ಆದರೆ ಅವರ ಕವಿತೆ ಬೇಡ.

ಜನ ಬಯಸುತ್ತಾರೆ –
ಕವಿತೆ ಬರೆಯುವುದಾದರೆ ಬರೆಯಿರಿ
ಚಹಾದ ಜೋಡಿ ಚೂಡಾದಂತೆ.
ಮಿರ್ಚಿ–ಭಜಿಯಂತೆ; ವಡಾಪಾವನಂತೆ

ಹೆಬರೆಡ ಖೂಳಿನೊಡನೆ ನಾವಿಷ್ಟು ನೆಂಜಿಕೊಳ್ಳುತ್ತೇವೆ
ಪ್ರೀತಿಯಿಂದ ನೆಲ್ಲಿಕಾಯಿ (ಉಕಾ) ಪಿಕಲದಂತೆ.
ಇಲ್ಲ, ನೀವು ಪತ್ರಿಕೆ–ಪ್ರಶಸ್ತಿ–ಪಂಡಿತರಿಗಾಗಿ
ಬರೆಯುತ್ತೀರೆಂದರೆ... ಬೋರ್ಡು ಹಾಕಿಕೊಳ್ಳಿ
ಸಿಗರೇಟು ಪ್ಯಾಕಿನ ಮೇಲಿನ ಬರಹದಂತೆ.

ಮನಸ್ಸು ಸ್ವಾಸ್ಥ್ಯವಿದ್ದಾಗ ಕವಿತೆ ಬರೆಯುವುದಿಲ್ಲ
ಹೀಗಾಗಿ ಕವಿಗೆ ತಾನು ಬರೆದದ್ದೆ ತನಗೆ ತಿಳಿಯುವುದಿಲ್ಲ.
ವಿಮರ್ಶಕರಿಗಾದರೂ ಏನು ತಿಳಿಯುತ್ತದೆ ಬದನೆಕಾಯಿ
ಅರ್ಥ ಹುಡುಕುತ್ತಾರೆ ಹೆಣದಲ್ಲಿ ಪ್ರಾಣ ಹುಡುಕಿದಂತೆ
ಹೊಳೆದದ್ದೆ ಅರ್ಥ;
ಹಂಚಿದ್ದೆ ಪ್ರಸಾದ.

ಸವೆದ ಅಟ್ಟೆಗಳಾಗಿರುವ
ಹಳಸಲು, ಹೆಂಜಲು ಶಬ್ದಗಳಲ್ಲಿ ವಿಮರ್ಶೆ ಬರೆಯುತ್ತಾರೆ;
ಕಟ್ಟಿ ಕೊಟ್ಟಿದ್ದಾರೆ; ಕಟ್ಟಿ ಕೊಟ್ಟಿದೆ; ಕಟ್ಟಿಕೊಡುವಲ್ಲಿ...
ಕಟ್ಟಿ ಕಟ್ಟಿ ... ಇದೆಂತದ್ದು ಮಾರಾಯ್ರೆ
ಕೇಳಿ ಕೇಳಿ ನಮ್ಮ ತಲೆಚಿಟ್ಟು ಹಿಡಿದಿದೆ –
ಎನ್ನುತ್ತಿದ್ದಾರೆ ತೋಂಡಿ ಜನಮನ.

ಆದರೆ ಈ ತೋಂಡಿ ಜನರ ಅಳಲು ಏನೆ ಇರಲಿ
ಪಂಡಿತರ ಆ ವಲಯದಲ್ಲಿ
ಅರ್ಥವಾಗದ ಕವಿತೆಗೆ
ಅರ್ಥ ಬಹಳ
ಮತ್ತು ಕೀರ್ತಿ ಬಹಳ.

**ಹಜರತ್ ಅಲಿ ದೇಗಿನಾಳ**
ಕೆಂಗಲಗುತ್ತಿ, ಅಂಚೆ : ಗುಣದಾಳ,
ಬಿಜಾಪುರ ತಾಲೂಕು ಮತ್ತು ಜಿಲ್ಲೆ

## ನಮನ...

ಕನ್ನಡ ಸಾಹಿತ್ಯ ಪರಿಷತ್ತಿನ ೨೪ನೇ ಅಧ್ಯಕ್ಷರಾಗಿ ದಕ್ಷತೆಯಿಂದ ಕರ್ತವ್ಯ ನಿಭಾಯಿಸಿದ್ದ ಶ್ರೀ ಪುಂಡಲೀಕ ಹಾಲಂಬಿ ಯವರು ಇದೇ ಏಪ್ರಿಲ್ ೨೪, ೨೦೧೬ರಂದು ನಿಧನರಾಗಿದ್ದಾರೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ನಮನಗಳು.

---

ಒಳ್ಳೆತನವನ್ನು ಪೊರೆಯುವ ಪ್ರಾಕೃತಿಕ ವಿಸ್ಮಯ ಮತ್ತಷ್ಟು ಮನಂಬುಗುವಂತೆ ಮುಂದುವರಿಯುತ್ತದೆ. ಇಲ್ಲಿ ಒಂದನ್ನೊಂದು ಪುಸಲಾಯಿಸಿ ಕೇಳಿದ ಅರ್ಥವನ್ನು ಹೊಳೆಯಿಸುವ ಜೋಡಿ ಪ್ರತಿಮೆಗಳಿವೆ. ೧. ಹಿಮಗಡ್ಡೆಗೆ ಉರಿ ತಾಗಿದರೆ ಕುದಿಯುವ ನೀರಾಗುತ್ತದೆ ಎನ್ನುವುದರ ಬದಲು ಎಸರಾಗುತ್ತದೆ ಎಂದಿದ್ದಾರೆ, ಕವಿ. ಇಲ್ಲಿ ರನ್ನನ "ಅಕ್ಕಿಗರ್ಚುವ ಎಸರನಿಡುವ" ಮಾತು ನೆನಪಿಗೆ ಬರುತ್ತದೆ. ಅನ್ನವಾಗಿಸುವ ಕುದಿನೀರಿಗೆ ಎಸರು ಎನ್ನಲಾಗಿ ಅದು ಮತ್ತಷ್ಟು ಆಪ್ತವಾಗುತ್ತದೆ. ಈ ಗಾಳಿಯಲ್ಲಿ ಸುಳಿದಾಡುವ ಆವಿ ಆವಿಗೆ (ಹಸುವಿಗೆ) ಹೊಟ್ಟು ಹುಲ್ಲಿನ ಜತೆಗೂಡಿ ನೀರಾಗುತ್ತದೆ. ಈ ನೀರೆ ರೂಪಾಂತರಗೊಂಡು ಒಳ್ಳೆತನದ ಹಾಲಾಗುತ್ತದೆ. ಈ ಹಾಲಿನಲ್ಲಿ ಅವಿತುಕೊಂಡಿರುವ ತುಪ್ಪ ಕಿಚ್ಚಿನ ಗೆಳೆಯನಾಗಿ ಪ್ರಕೃತಿಯಲ್ಲಿ ಒಳ್ಳೆತನ ಒಂದು ವೃತ್ತಾಕಾರವನ್ನು ಪಡೆಯುತ್ತದೆ.

ಈ ಮುಂದಿನ ಇನ್ನೊಂದು ದೃಶ್ಯ ಮತ್ತಷ್ಟು ರೋಮಾಂಚಕಾರಿಯಾಗಿದೆ. ಅದು ನೀರು ಮತ್ತು ಬೆಂಕಿಗಳ ಅವಳಿ ಕುಣಿತದ ದಾಂಪತ್ಯ ಗೀತವಾಗಿದೆ. ನೀರು ಬೆಂಕಿಗಳ ದಾಂಪತ್ಯವನ್ನು ಕಲ್ಪಿಸಿಕೊಳ್ಳುವುದೇ ಒಂದು ರೋಮಾಂಚಕಾರಿ ಅನುಭವ. ನೀರು ಮತ್ತು ಶಾಖಗಳ ಸಂಬಂಧ ಸೃಷ್ಟಿಯ ಮೂಲ ಮಂತ್ರಗಳಲ್ಲಿ ಒಂದು. ಕಾವೇರದೆ ತತ್ತಿ ಮರಿಯಾಗುವುದಿಲ್ಲ. ನೀರಿನಲ್ಲಿ ನೆನೆಯದೆ ಚಿತ್ತ ಕಣ್ಣೊಡೆಯುವುದಿಲ್ಲ. ಈ ಎಲ್ಲವೂ ಶಾಖದ ಸಹವಾಸದಲ್ಲಿ ನಡೆಯುವ ಕ್ರಿಯೆ. ಕವಿ ಇವೆಲ್ಲವನ್ನೂ ಹಿಮ್ಮೇಳ ವಾಗಿಟ್ಟುಕೊಂಡು ಬೆಂಕಿ–ನೀರುಗಳ ದಾಂಪತ್ಯ ಗೀತೆಯನ್ನು ತಾಳಮೇಳಗಳ ಮುಮ್ಮೇಳದೊಂದಿಗೆ ಮಂಡಿಸಲು ಮುಂದಾಗುತ್ತಾರೆ. ಏನು ಮಾಡಿದರೂ ಪದ್ಯದ ಮೂಲವನ್ನು ಮರೆಸುವಂತೆ ಬರೆಯುವುದಕ್ಕಾಗುವುದಿಲ್ಲ. ಹಾಗಾಗಿ:

*ನೀರು ಬೆಂಕಿಗಳವಳಿ ಕುಣಿತ; ತಂಗಾಳಿಯಲೆಯಲ್ಲಿ*
*ತಾಳ ತಂಬೂರಿ ಕೊಳಲುಲಿಲುಲಿಯ ಮಂದ ಮಂದ್ರೋಷ್ಣಕ್ಕೆ*
*ಸಡಲಿಕೊಳ್ಳುವ ಜಡದ ಬಿಗಿತ, ಡೋಲು ಮದ್ದಲೆ ಚಂಡೆಗಳ ಹಂತ*
*ಹಂತದುದ್ವೇಗಕ್ಕೆ ಭಾಗವತನ ತಾರಕ ಸ್ಫೋಟ, ಮಧ್ಯಮಕ್ಕಿಳಿದು*
*ಎರಡಿದ್ದುದೊಂದಾಗಿ, ಒಂದು ಹಲವೊಂದಾಗಿ*
*ಇಡಿಯಾಗಿ, ಬಿಡಿಯಾಗಿ, ಕಿಡಿಯಾಗಿ, ಹಬೆಯಾಗಿ,*
*ಹಬೆ ತಣಿದು ನೀರಾಗಿ, ನೀರು ಎಳನೀರಾಗಿ*
*ತೆಂಗಿನುದ್ದದ ತುದಿಗೆ ನೂರು ಮಿಳ್ಳೆ;*
*ರಕ್ತ ಮಾಂಸವನುತ್ತು ಬೆಳೆದು ಕೆತ್ತಿ ಕಂಡರಿಸಿದಂಗದ ಕೊನೆಗೆ*
*ಸಹಸ್ರದಳ ಬಿಚ್ಚಿರುವ ಬೆಳ್ದಾವರೆ.*

ಮುತ್ತಿಟ್ಟರೂ ಮುಕ್ಕಾಗುವಂತಿರುವ ಈ ಸಾಲುಗಳನ್ನು ತಾಳ ಲಯ ಶ್ರುತಿ ಸಹಿತವಾಗಿ ಓದಿ ನೋಡಿ; ನಿಮ್ಮ ನಿಮ್ಮ ಹರೆಯದ ವಿಶ್ಲೇಷಣೆಗೆ ಬಗೆಹರಿಯದ ಜೋಡಿಗುಣಿತವನ್ನು ನೆನಪು ಮಾಡಿಕೊಂಡು ಮತ್ತೊಮ್ಮೆ ಮಗುದೊಮ್ಮೆ ಓದಿ ನೋಡಿ, ಒಳ್ಳೆತನ ಈ ನೀರು ಬೆಂಕಿಗಳ ತೆಕ್ಕೆಮುರಿಯಲ್ಲಿ ಸೃಷ್ಟಿಯಾಗುವ ಪರಿಯನ್ನು.

ಅದು ಮೊದಲು ಆರಂಭವಾಗುವುದು ತಂಗಾಳಿಯ ಅಲೆಯಲ್ಲಿ. ಅನಂತರ ನಿಧನಿಧಾನವಾಗಿ ತಾಳತಂಬೂರಿಕೊಳಲುಲಿಯ ಮಂದ ಮಂದ್ರೋಷ್ಣಕ್ಕೆ ಸಡಲಿಕೊಳ್ಳುವ ಜಡದ ಬಿಗಿತಕ್ಕೆ ಮುಂದುವರಿಯುತ್ತದೆ. ಅದಾದನಂತರ ಮೈಮರೆಯಿಸುವ ಡೋಲು – ಮದ್ದಳೆ – ಚಂಡೆಯಂಥ ಗಂಡು ವಾದ್ಯಗಳ ನಿನದನಾದ ಹಂತಹಂತವಾಗಿ ಉದ್ವೇಗ ಕ್ರಿಯೆಗೆ ಧುಮುಕಿಸುತ್ತದೆ. ನಂತರ ರತ್ಯಾಸ್ವಾದದ ತುತ್ತತುದಿಗೆ ಸಿಡಿಲಿನಂತೆರಗುವುದೇ ಭಾಗವತನ ತಾರಕ ಸ್ಫೋಟ. ಲೈಂಗಿಕ ಕ್ರಿಯೆಯ ಆರಂಭ – ಮಧ್ಯ – ಅಂತ್ಯಗಳನ್ನು ಇದಕ್ಕಿಂತ ಲಯಬದ್ಧವಾಗಿ ಅಭಿನಯಿಸಿ ತೋರಿಸುವುದು ಕಷ್ಟಾತಿಕಷ್ಟ. ತಂಪು ಉಷ್ಣಗಳ (ನೀರು ಬೆಂಕಿಗಳ) ಅವಳಿ ಕುಣಿತಕ್ಕೆ ಕವಿ ಬಳಸಿಕೊಂಡಿರುವ ಸುಸಂಬದ್ಧ ವಾದ್ಯ ಮೇಳ ಸಮೃದ್ಧ ರತಿ – ಮನ್ಮಥ ಕ್ರಿಯಾಸ್ವಾದಕ್ಕೆ ಅದ್ಭುತ ಸಾಂಗತ್ಯವೊದಗಿಸಿವೆ. ಪ್ರಕೃತಿಯ ಈ ನಿಷ್ಕಲ್ಮಷ ಸೃಷ್ಟಿ ಸನ್ನಿವೇಶದಲ್ಲಿ ಪಡಿಮೂಡುವುದೇ ಒಳ್ಳೆತನ. ಇದು ಶರೀರಾಂತರ್ಗತವಾಗಿ ಹೇಗೆ ಬೆಳೆಯುತ್ತದೆ ಎಂಬುದನ್ನು ಕವನದ ಮುಂದಿನ ಬೆಳವಣಿಗೆ ಬೇರೊಂದು ವಿನೂತನ ಭಂಗಿಯಲ್ಲಿ ಮುಂದುವರಿದು ನಿರ್ವಹಿಸುತ್ತದೆ. ಎರಡಿದ್ದು ದೊಂದಾಗಿ, ಒಂದು ಹಲವೊಂದಾಗಿ... ಹಬೆಯಾಗಿ ಹಬೆ ತಣಿದು ನೀರಾಗಿ ನೀರು ಎಳನೀರಾಗಿ ಉದ್ದ ತೆಂಗಿನೆತ್ತರದಲ್ಲಿ ತಂಗುವಂತೆ ಒಳ್ಳೆತನ ರಕ್ತಮಾಂಸಗಳಿಂದ ಕೂಡಿರುವ ಮಾನವತೆಯ ಮತ್ತಿಷ್ಕದಲ್ಲಿ ಬೆಳ್ದಾವರೆಯ ಸಹಸ್ರದಳವಾಗಿ ಅರಳಿ ಮಾನವೀಯತೆಯ ಗಮಲನ್ನು ಸರ್ವವ್ಯಾಪಿಯಾಗಿ ಹರಡುತ್ತದೆ. ಅದಿಲ್ಲದೆ ಬದುಕಿಲ್ಲ. ಮುಪ್ಪಿನ ಹೃದಯ ಸಂಬಂಧದಲ್ಲಿ ಅದು ಹೇಗೆ ಕಂಗೊಳಿಸುತ್ತದೆ ಮುಂದೆ ನೋಡಿ:

*ಗಡ್ಡ ಮೀಸೆ ಹಣ್ಣಾಗಿ, ತೊಗಲು ಸುಕ್ಕಾಗಿ, ಕೈಕೋಲು*
*ಹಿಡಿದರೂ ಒಳಗೆ ಮಂದಾಸನದ ಮೆತ್ತೆಯ ಮೇಲೆ*
*ಒರಗಿಯೇ ಇದೆ ಮುದ್ದು ಮಗು ಬೆರಳ ಚೀಪುತ್ತ,*
*ಕೇಕೆ ಹಾಕುತ್ತ ಒಂದೇ ಸಮನೆ, ಅಪರಂಜಿಮಿದು;*
*ಮುಟ್ಟಿದರೆ ಮಾಸಿ ಹಿಸಿಯುವಂಥದು, ಮೋಡದ ತುಣುಕು*
*ಮಸೆದು ಗೂಡಾದ ತಂಬೆಳಕು. ಕಾಯಬೇಕು*
*ಹಗಲೂ ಇರುಳು ಎದೆಗವಚಿ, ಮೀಯಬೇಕಾದರೆ*
*ತೊದಲುಲಿ ಗುಲಾಬಿಯ ಅಭಯ ಸರಿಯಲ್ಲಿ.*

ಇದಕ್ಕೆ ವ್ಯಾಖ್ಯಾನ ಅನಾವಶ್ಯಕ. ಅಜ್ಜಿ ತಾತ ಮೊಮ್ಮಕ್ಕಳ ಸಂಬಂಧ ಎಂಥದು ಎಂಬುದು ಅನುಭವಿಸಿದವರಿಗಷ್ಟೇ ಗೊತ್ತು. ಅದನ್ನು ವಿವರಿಸಿ ತೋರಿಸುವುದು ಕಷ್ಟ. ಒಳ್ಳೆತನ ಪ್ರತಿ ವ್ಯಕ್ತಿಯ ಹೃದಯದಲ್ಲಿ ಮಲಗಿರುವ ಮುದ್ದು ಮಗು. ಆ ಒಳ್ಳೆತನದ ಮಗುವಿನ ಗುಲಾಬಿ ಗಮಲಿನ ತೊದಲು ಮಾತುಗಳ ಅಭಯ ರಕ್ಷೆಯಲ್ಲಿ ಮೀಯಬೇಕಾದರೆ ಈ ಮುದಿಜೀವ ಅದನ್ನು ಎದೆಗವಚಿ ಕಾಯಬೇಕು, ಕವಿಯ ಕಳಕಳಿಯ ವಿನಂತಿಯೇ ಎಂಬಂತೆ ಈ ಮಾತುಗಳಿವೆ.

ಈ ಇಂಥ ಒಳ್ಳೆತನದ ಮೇಲೆ ಕೈ ಎತ್ತುವವರಿಗೆ ಕವಿ ಕೊಡುವ ಎಚ್ಚರಿಕೆ ಈ ಮುಂದಿನದು.

*ಹೊಟ್ಟೆಯೊಳಗಡೆ ಗೋರಿ ಕಟ್ಟಿಕೊಂಡಿರುವವರೆ,*
*ಹೊಡೆಯಲೆತ್ತಿರುವ ಕೈ*
*ಹೊತ್ತೆ ಹೊಗೆಯುವೆದೆ, ವಿಷವುಗುಳಿ ನಗುವ ನಾಲಗೆ,*
*ಎಲೆಲೇ,*
*ತಡೆಯಿರಿ, ತಡೆ ಹಿಡಿಯಿರಿ;*
*ಮಗು ನಗುತಿದೆ, ಮಗು ಆಡುತ್ತಿದೆ.*

ಒಂದು ಆರೋಗ್ಯಕರ ಸಾಮರಸ್ಯದ ಸಮಾಜ ನಿರ್ಮಾಣಕ್ಕೆ ಇದಕ್ಕಿಂತ ಇನ್ನೇನು ಸಲಹೆ ನೀಡಲಾದೀತು !

'ಒಳ್ಳೆತನ ಸಹಜವೇನಲ್ಲ' ಎಂಬ ಕವನವನ್ನು ಶ್ರೀ ಗೋಪಾಲಕೃಷ್ಣ ಅಡಿಗರ ಕವಿ ಹೃದಯ ಪ್ರತಿಮಾತ್ಮಕವಾಗಿಯೇ ಆದರೂ ಸಹಜ ಸುಂದರವಾಗಿ ಮಾತ್ರವಲ್ಲ ತಕ್ಕ ಮಾತುಗಳೊಡನೆ ವಾತ್ಸಲ್ಯ ಹೊಳೆಯುವ ದೃಶ್ಯಗಳೊಡನೆ ನಾಟಕೀಯವಾಗಿ ಕಂಡರಿಸಿದ್ದಾರೆ.

ನೂರು ವರ್ಷಕ್ಕೆ ಸಮೀಪಿಸುತ್ತಿರುವ ಹೊತ್ತಿನಲ್ಲಿ ಈ ಕವಿಯ ಆತ್ಮಕ್ಕೆ ತಂಪು ನೆಳಲನೀವ ಈ ಇಂಥ ಕವನಗಳನ್ನು ನೆನಪು ಮಾಡಿಕೊಳ್ಳಬೇಕೇ ಹೊರತು 'ನೆಲ ಸಪಾಟಿಲ್ಲ'ದಂಥ ಸಂಕುಚಿತ ಕವನವನ್ನು ಅನಾಗರಿಕವಾಗಿ ಅರ್ಥೈಸಿ ನಮ್ಮ ಮತಿಭ್ರಮಣೆಯನ್ನು ಪ್ರದರ್ಶಿಸುವ ಆವಶ್ಯಕತೆ ಖಂಡಿತ ಇಲ್ಲ.

**ಎನ್. ಬೋರಲಿಂಗಯ್ಯ**
ನಂ. ೪೪, 'ಅಭಯ ಪೃಥ್ವಿ', ೮ನೇ ಮುಖ್ಯರಸ್ತೆ
೧೨ನೇ ಅಡ್ಡರಸ್ತೆ ಕಾಮಾಕ್ಷಿ ಆಸ್ಪತ್ರೆ ರಸ್ತೆ
ಸರಸ್ವತಿಪುರಂ, ಮೈಸೂರು – ೫೭೦ ೦೦೯




ನಾನು ಓದಿದ ಪುಸ್ತಕ

ಡಾ॥ ಪುರುಷೋತ್ತಮ ಬಿಳಿಮಲೆ

# ಭಾರತದ ರಾಷ್ಟ್ರೀಯತೆಯ ಕುರಿತು ಗಂಭೀರ ಚರ್ಚೆ

ಲೇಖಕರು :
ಮೂಲ : **ಪ್ರೊ॥ ಕೆ. ಎನ್. ಪಣಿಕ್ಕರ್**
ಕನ್ನಡಕ್ಕೆ : **ಕೆ. ಎಸ್. ಪಾರ್ಥಸಾರಥಿ**
ಪುಟಗಳು : ೧೨೮ ಬೆಲೆ : ರೂ. ೯೦/-

ಪ್ರಕಾಶಕರು : **ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – ೫೬೦ ೦೦೧

ಪ್ರಮುಖ ವಿಷಯಗಳ ಬಗೆಗೆ ಯಾವುದೇ ಗಂಭೀರವಾದ ಚರ್ಚೆಗಳೂ ಸಾಧ್ಯವಾಗದ ದಿನಗಳಿವು. ಎಲ್ಲವನ್ನೂ ಇಂದು ಅತ್ಯಂತ ಸರಳೀಕರಿಸಿ ನೋಡಲಾಗುತ್ತಿದೆ ಮತ್ತು ಎಷ್ಟೋ ವಿಷಯಗಳನ್ನು ಕೇವಲ ಭಾವುಕಗೊಳಿಸಿ ಅದರ ರಾಜಕೀಯ ಲಾಭಕ್ಕಾಗಿ ಹೊಸ ಹೊಸ ತಂತ್ರಗಳನ್ನು ಹೆಣೆಯಲಾಗುತ್ತಿದೆ. ಈಗ ನಡೆಯುತ್ತಿರುವ ರಾಷ್ಟ್ರೀಯತೆಯ ಬಗೆಗಣ ಚರ್ಚೆಗಳು ಇದಕ್ಕೆ ಒಳ್ಳೆಯ ಉದಾಹರಣೆ. 'ಭಾರತ ಮಾತೆಗೆ ಜಯವಾಗಲಿ' ಎಂದವರು 'ರಾಷ್ಟ್ರಪ್ರೇಮಿಗಳು', ಹೇಳದವರು 'ರಾಷ್ಟ್ರದ್ರೋಹಿಗಳು'. ಇದೇ ರೀತಿ ದೇಶಪ್ರೇಮ ಮತ್ತು ದೇಶದ್ರೋಹದ ಕಲ್ಪನೆಗಳನ್ನೂ ಬೇಕಾಬಿಟ್ಟಿಯಾಗಿ ಹರಿಯಬಿಡಲಾಗಿದೆ. ರಾಷ್ಟ್ರೀಯತೆ ಮತ್ತು ದೇಶಪ್ರೇಮವನ್ನು ಒಂದೇ ತಕ್ಕಡಿಯಲ್ಲಿಟ್ಟು ತೂಗುವವರೂ ಹಲವರು. ಈ ನಡುವೆ, ಮುಕ್ತಚಿಂತನೆಗೆ ಮತ್ತು ವಿಮರ್ಶೆಗೆ ಪೂರ್ಣ ಅವಕಾಶ ಕೊಡುವುದು ಪ್ರಜಾಪ್ರಭುತ್ವವಾದೀ ಸರಕಾರಗಳ ಅತಿ ದೊಡ್ಡ ಜವಾಬ್ದಾರಿ ಎಂಬುದನ್ನು ಸರಕಾರವೇ ಮರೆತಂತಿದೆ.

ಜನರ ನೈತಿಕತೆಯನ್ನು ಹೆಚ್ಚಿಸಲು, ಸಮಾಜದ ಸ್ವಾಸ್ಥ್ಯವನ್ನು ಕಾಪಾಡಲು, ಪ್ರಜಾಪ್ರಭುತ್ವದ ಬೇರುಗಳನ್ನು ಬಲಗೊಳಿಸಲು ಮತ್ತು ಜೊತೆಗಿರುವ ಜನರ ಯೋಚನಾ ಶಕ್ತಿಯನ್ನು ತೀಕ್ಷ್ಣಗೊಳಿಸಲು ಅದು ಬೌದ್ಧಿಕ ಸಂವಾದಗಳನ್ನು ಪ್ರೋತ್ಸಾಹಿಸುತ್ತಿರ ಬೇಕು. ಆದರೆ ದೆಹಲಿಯ ಜವಾಹರಲಾಲ ನೆಹರೂ ವಿಶ್ವವಿದ್ಯಾಲಯದಲ್ಲಿ ನಡೆದ ಘಟನೆಗಳನ್ನು ಗಮನಿಸಿದರೆ ಸರಕಾರವು ಇದಕ್ಕೆ ವಿರುದ್ಧವಾಗಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನು ಮೊಟಕುಗೊಳಿಸಲು ಯತ್ನಿಸುತ್ತಿರುವ ಹಾಗೆ ಕಾಣುತ್ತದೆ.

ಇಂಥ ನಿರಾಶಾದಾಯಕ ಸಂದರ್ಭದಲ್ಲಿ ದೇಶದ ಬಗೆಗೆ ನಮ್ಮ ಅರಿವನ್ನು ಗಂಭೀರವಾಗಿ ಹೆಚ್ಚಿಸುವ, ಬಗೆ ಬಗೆಯ ಸಂವಾದವನ್ನು ಹುಟ್ಟುಹಾಕಬಹುದಾದ ಕೃತಿಯೊಂದನ್ನು ನವಕರ್ನಾಟಕ ಪ್ರಕಾಶನ ಪ್ರಕಟಿಸಿದೆ. (ಭಾರತದ ರಾಷ್ಟ್ರೀಯತೆಯ ಪರಿಕಲ್ಪನೆ, ಮೂಲ: ಪ್ರೊ॥ ಕೆ. ಎನ್. ಪಣಿಕ್ಕರ್, ಕನ್ನಡಕ್ಕೆ: ಕೆ. ಎಸ್. ಪಾರ್ಥಸಾರಥಿ, ೨೦೧೬). ಈ ಪುಸ್ತಕದ ಮೂಲ ಲೇಖಕರಾದ ಪ್ರೊ॥ ಪಣಿಕ್ಕರ್ ಅವರು ಜೆ.ಎನ್.ಯು.ವಿನಲ್ಲಿ ಇತಿಹಾಸ ಪ್ರಾಧ್ಯಾಪಕರಾಗಿ ಕೆಲಸ ಮಾಡಿ ಆ ವಿಭಾಗವನ್ನು ಅಂತಾರಾಷ್ಟ್ರೀಯ ಮಟ್ಟಕ್ಕೆ ಬೆಳೆಸಿದ ಮಹಾ ಮೇಧಾವಿ. ಭಾರತದಲ್ಲಿ ಬೆಳೆಯುತ್ತಿರುವ ಕೋಮುವಾದದ ಬಗ್ಗೆ ಸದಾ ಬೆಳಕು ಚೆಲ್ಲುತ್ತಲೇ ಬಂದ ಅವರು ಆ ಕಾರಣಕ್ಕೇನೇ ಬಲಪಂಥೀಯ ರಾಜಕಾರಣದ ಕೆಂಗಣ್ಣಿಗೂ ಗುರಿಯಾಗಿದ್ದರು.

ಈ ಪುಸ್ತಕವನ್ನು ಕನ್ನಡಕ್ಕೆ ಸೊಗಸಾಗಿ ತಂದವರು ಹಿರಿಯ ಚಿಂತಕರಾದ ಶ್ರೀ ಕೆ. ಎಸ್. ಪಾರ್ಥಸಾರಥಿಯವರು. ಅವರು ಬರೆದ 'ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ' ಕೃತಿಯು ೧೮೫೭ರ ಹೋರಾಟದ ಅನೇಕ ಅನುಮಾನಗಳನ್ನು ನಿವಾರಿಸಿದ ಒಳ್ಳೆಯ ಕೃತಿ. ಇದೀಗ ಅವರು ಅನುವಾದಿಸಿದ ಪಣಿಕ್ಕರ್ ಅವರ ಲೇಖನಗಳನ್ನು ಕನ್ನಡದ್ದೇ ಲೇಖನಗಳೆಂಬಂತೆ ಸರಾಗವಾಗಿ ಓದಿಕೊಳ್ಳಬಹುದು.

ಈ ಅನುವಾದಿತ ಕೃತಿಯಲ್ಲಿ ಒಟ್ಟು ಒಂಬತ್ತು ಲೇಖನಗಳಿವೆ. ಅನುವಾದಕರಾದ ಪಾರ್ಥಸಾರಥಿಯವರು ತಮ್ಮ ಮಾತಿನಲ್ಲಿ ಹೇಳಿಕೊಂಡಂತೆ – 'ಇವು ವಿವಿಧ ಸಂದರ್ಭಗಳಲ್ಲಿ ನೀಡಿದ ಉಪನ್ಯಾಸ ಅಥವಾ ಬರೆದ ಪ್ರಬಂಧಗಳಾಗಿದ್ದು, ಇವುಗಳನ್ನು ಬಿಡಿ ಬಿಡಿಯಾಗಿಯೂ ಓದಿಕೊಳ್ಳಬಹುದು, ಆದರೂ ಅವುಗಳಲ್ಲಿ ನಮ್ಮ ರಾಷ್ಟ್ರೀಯತೆಯ ಪರಿಕಲ್ಪನೆಯೇ ಸಾಮಾನ್ಯ ವಿಷಯವಾಗಿ ಪರಸ್ಪರ ಸಂಬಂಧಿತವಾದ ಮುಂದುವರಿದ ಚರ್ಚೆಯಾಗಿ ಕಾಣಿಸಿಕೊಳ್ಳುತ್ತದೆ' (ಪುಟ : ೬).

ಹೀಗೆ ರಾಷ್ಟ್ರೀಯತೆಯೇ ಪ್ರಮುಖ ಪರಿಕಲ್ಪನೆಯಾಗುಳ್ಳ ಈ ಪುಸ್ತಕದಲ್ಲಿನ ಮೊದಲ ಲೇಖನವು ಭಾರತದಲ್ಲಿ ರಾಷ್ಟ್ರೀಯತೆಯು ಬೆಳೆದು ಬಂದ ಬಗೆಯನ್ನು ಸಂಕ್ಷಿಪ್ತವಾಗಿ, ಆದರೆ ಪರಿಣಾಮಕಾರಿಯಾಗಿ ವಿವರಿಸುತ್ತದೆ. ಜೊತೆ ಜೊತೆಗೆ ಅದರ ಬಗೆಗಣ ಕೆಲವು ಅಪಕಲ್ಪನೆಗಳನ್ನೂ ನಿರಾಕರಿಸುತ್ತದೆ. ಉದಾಹರಣೆಗೆ 'ಭಾರತದ ರಾಷ್ಟ್ರೀಯತೆಯು ಸಾವಿರಾರು ವರ್ಷಗಳಿಂದಲೇ ಅಸ್ತಿತ್ವದಲ್ಲಿತ್ತು' ಎಂಬ ಜನಪ್ರಿಯ ನಂಬಿಕೆಯನ್ನು ಈ ಲೇಖನವು ಆರಂಭದಲ್ಲಿಯೇ ನಿರಾಕರಿಸುತ್ತದೆ. ಈ ಕುರಿತು ಪಣಿಕ್ಕರ್ ಅವರು ಹೇಳುವ ಮಾತುಗಳು ಇಂತಿವೆ – 'ಆದರೆ ಈ ಭೌಗೋಳಿಕ ಪ್ರಜ್ಞೆಗೆ ಅಂದಂದಿನ ರಾಜಕೀಯ ರಚನೆಗಳೊಂದಿಗೆ ತಾಳೆ ಇರಲಿಲ್ಲ. ಹೆಚ್ಚು ಕಡಿಮೆ ವಸಾಹತು ಕಾಲದವರೆಗೂ ಈ ಎರಡೂ ಪ್ರಜ್ಞೆಗಳ ನಡುವಣ ಅಂತರ ಹಾಗೆಯೇ ಉಳಿದುಕೊಂಡು ಬಂದಿತ್ತು. ರಾಜಕೀಯ ಅಸ್ಮಿತೆಗಳು ಮತ್ತು ದೇಶಭಕ್ತಿ ಎನ್ನುವುದು ಪ್ರಾದೇಶಿಕತೆಯ ಮಿತಿಯೊಳಗೇ ಇದ್ದುವು. ಹಾಗೂ ಸಾಂಸ್ಕೃತಿಕ

**ಇಲ್ಲಿಯ ಎಲ್ಲ ಲೇಖನಗಳು ಆಧುನಿಕ ಭಾರತವು ರಾಜಕೀಯ, ಶೈಕ್ಷಣಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಇದಿರಿಸುತ್ತಿರುವ ಬಿಕ್ಕಟ್ಟುಗಳನ್ನು ಮತ್ತು ಅದರ ಕಾರಣಗಳನ್ನು ಐತಿಹಾಸಿಕ ಚೌಕಟ್ಟಿನಲ್ಲಿ ವಿಶ್ಲೇಷಿಸುತ್ತವೆ. ಪ್ರೊ॥ ಪಣಿಕ್ಕರ್ ಅವರಿಗೆ ಚರಿತ್ರೆ ಎಂಬುದು ಕಳೆದುಹೋದ ಘಟನೆಗಳ ಕಥನವಲ್ಲ, ಬದಲು ವರ್ತಮಾನದ ಅಗತ್ಯವೂ ಹೌದು. ಅವರ ಲೇಖನಗಳಲ್ಲಿ ಒಳ್ಳೆಯ ಅಧ್ಯಾಪಕನೊಬ್ಬನ ಗುಣವಿದೆ. ಅದೆಂದರೆ ಚಾರಿತ್ರಿಕ ಬೆಳವಣಿಗೆ ಅಥವಾ ಘಟನೆಯೊಂದರ ಕುರಿತ ಎಲ್ಲಾ ವಿವರಗಳನ್ನು ಓದುಗರ ಗಮನಕ್ಕೆ ತರುವುದು. ಹಾಗೆ ತರುವಾಗ ತನ್ನ ಒಲವು ಯಾವುದರ ಕಡೆಗಿದೆ ಎಂಬುದನ್ನು ಅವರು ಪ್ರಕಟಿಸಿಯೂ ಕೂಡ ಇತರ ವಿವರಗಳನ್ನೂ ಗೌಣಗೊಳಿಸದೆ ನೀಡುತ್ತಾರೆ. ಅವರ ಬರೆಹದ ಈ ಗುಣದಿಂದಾಗಿ ಓದುಗರಿಗೆ ತುಂಬ ಪ್ರಯೋಜನವಾಗಿದೆ.**

ಎಲ್ಲೆಗಳು ರಾಜಕೀಯ ಎಲ್ಲೆಗಳಿಗೆ ಮೀರಿದಂತಹವುಗಳಾಗಿದ್ದುವು. ಇವೆರಡೂ ಬಹುವಾಗಿ ಮೇಳೈಸಲೇ ಇಲ್ಲ' (ಪುಟ : ೧೪). ಅಂದರೆ ಭಾರತೀಯರ ಭೌಗೋಳಿಕ ಕಲ್ಪನೆಯೇ ರಾಷ್ಟ್ರೀಯತೆಯಲ್ಲ ಎಂಬುದು ಪಣಿಕ್ಕರ್ ಅವರ ವಾದ. ಈ ವಾದವನ್ನು ಮುಂದುವರಿಸಿರುವ ಖ್ಯಾತ ಚಿಂತಕ ಅಶೀಶ್ ನಂದಿ ಅವರು ಸಣ್ಣ ಸಮುದಾಯಗಳೇ ಹೇಗೆ ಭಾರತವನ್ನು ರೂಪಿಸಿದುವು ಎಂದು ತಮ್ಮ ಒಂದು ಲೇಖನದಲ್ಲಿ ಈಚೆಗೆ ವಿವರಿಸಿದ್ದಾರೆ.

ಹಾಗಾದರೆ, ಭಾರತದ ರಾಷ್ಟ್ರೀಯತೆ ರೂಪುಗೊಂಡದ್ದು ಯಾವಾಗ ಮತ್ತು ಹೇಗೆ ಎಂಬ ಪ್ರಶ್ನೆ ಸಹಜವಾಗಿಯೇ ಉದಿಸುತ್ತದೆ. ಪಣಿಕ್ಕರ್ ಅವರು ಇದಕ್ಕೆ ಭಾರತದ ವಸಾಹತುಶಾಹೀ ಆಡಳಿತದಲ್ಲಿ ಉತ್ತರ ಕಂಡುಕೊಳ್ಳುತ್ತಾರೆ. ಅವರ ಮಾತುಗಳು – 'ರಾಷ್ಟ್ರೀಯ ವಿಮೋಚನಾ ಹೋರಾಟದ ಕಾಲದಲ್ಲಿ ಸಮುದಾಯವು ಒಂದು ರಾಷ್ಟ್ರವಾಗಿ ಬೆಳೆಯುವ ಪ್ರೋತ್ಸಾಹಿಸುವ ಚಿಂತನೆಗಳು ಬೆಳೆದುವು. ಇದು ಎಲ್ಲ ಕಡೆಯೂ ಏಕಪ್ರಕಾರವಾಗಿರಲಿಲ್ಲ. ಈ ಪ್ರಕ್ರಿಯೆಯ ಒಳಗೂ ಹಲವಾರು ದ್ವಂದ್ವಗಳು ವ್ಯಕ್ತವಾಗುತ್ತಿದ್ದವು. ಹೀಗಾಗಿ ಇಡೀ ಪ್ರಕ್ರಿಯೆಯನ್ನು ರಾಷ್ಟ್ರೀಯ ಎಂದು ಹೇಳುವುದನ್ನು ಪ್ರಶ್ನಿಸುವ ಪರಿಸ್ಥಿತಿ ಉಂಟಾಗುತ್ತಿತ್ತು (ಪುಟ : ೧೪–೧೫), ಇಷ್ಟು ಸೂಕ್ಷ್ಮವಾಗಿ ದೇಶದ ಪರಿಸ್ಥಿತಿಯನ್ನು ವಿಶ್ಲೇಷಿಸುವ ಪ್ರೊ॥ ಪಣಿಕ್ಕರ್ ಅವರು ಮುಂದೆ ಸ್ಥೂಲವಾಗಿ – ರಾಷ್ಟ್ರೀಯತೆಯ ಕುರಿತ ಸಿದ್ಧಾಂತಗಳು ಹೆಚ್ಚು ಕಡಿಮೆ ಆಧುನಿಕ ಕಲ್ಪನೆಯನ್ನು ಅವಲಂಬಿಸಿವೆ' ಎಂದು ಹೇಳುತ್ತಾರೆ. ಈ ಅರಿವಿನಲ್ಲಿ ಅವರು ಮುಂದೆ ಪ್ರಭುತ್ವ ಮತ್ತು ರಾಷ್ಟ್ರೀಯತೆಗಳ ಸಮ್ಮಿಳನ ಹೇಗೆ ರಾಷ್ಟ್ರದ ಕಲ್ಪನೆಯನ್ನು ಬೆಳೆಸುತ್ತದೆ ಎಂದು ಮನೋಜ್ಞವಾಗಿ ವಿವರಿಸುತ್ತಾರೆ.

ಈ ಹಂತದಲ್ಲಿ ಪಣಿಕ್ಕರ್ ಅವರು ಆಧುನಿಕ ಭಾರತದ ರಾಷ್ಟ್ರೀಯತೆಯ ಪರಿಕಲ್ಪನೆಯ ಮೇಲೆ ಪ್ರಭಾವ ಬೀರಿದ ನಾಲ್ಕು ಪ್ರಭಾವೀ ವ್ಯಕ್ತಿಗಳ ಚಿಂತನೆಗಳನ್ನು ಸ್ಥೂಲವಾಗಿ ಓದುಗರ ಮುಂದಿಡುತ್ತಾರೆ. ಅವರೆಂದರೆ, ಭಾರತೀಯ ಕಲಾಕ್ಷೇತ್ರದ ಅತಿ ಹಿರಿಯ ವಿದ್ವಾಂಸರಾದ ಆನಂದ ಕುಮಾರಸ್ವಾಮಿ, ವಸಾಹತು ವಿರೋಧೀ ಆಂದೋಲನದ ಸೃಜನಶೀಲ ನಾಯಕ ಮಹಾತ್ಮಾ ಗಾಂಧಿ, ಹಿಂದೂ ಧರ್ಮಪ್ರತಿಪಾದಕ ವಿ. ಡಿ. ಸಾವರ್ಕರ್ ಮತ್ತು ರಾಷ್ಟ್ರೀಯತೆಯ ಬಗ್ಗೆ ಅನುಮಾನ ಹೊಂದಿದ್ದ ವಿಶ್ವ ಕವಿ ರವೀಂದ್ರನಾಥ ಠಾಗೋರ್. ಅವರಲ್ಲಿ ಆನಂದ ಕುಮಾರ ಸ್ವಾಮಿಯವರು ಭಾರತದ ರಾಷ್ಟ್ರೀಯತೆಯನ್ನು ಜನರ ಸಾಂಸ್ಕೃತಿಕ ಅನುಭವದಲ್ಲಿ ಗುರುತಿಸಬೇಕೆಂದು ಹೇಳಿದರು. ಈ ನಿಟ್ಟನಲ್ಲಿ ಅವರ ಮನೋಭಾವ ಸಂಕುಚಿತವಾಗಿರದೆ ವಿಶಾಲವಾಗಿತ್ತು. 'ಹಿಂದೂಗಳು ಇಂಡಿಯಾದಲ್ಲಿ ಕೇವಲ ಹಿಂದೂಗಳು ಇರಬೇಕೆಂದು ವಾದಿಸಿದರೆ ಅದು ಕೇವಲ ಕನಸಿನ ಲೋಕವಷ್ಟೆ. ಹಿಂದೂಗಳು, ಮಹಮ್ಮದೀಯರು, ಪಾರ್ಸಿಗಳು, ಕ್ರಿಶ್ಚಿಯನರು, ಇವರೆಲ್ಲ ಇಂಡಿಯಾವನ್ನು ತಮ್ಮ ವಾಸ ಸ್ಥಳವನ್ನಾಗಿ ಮಾಡಿಕೊಂಡವರು. ಮತ್ತು ಇವರೆಲ್ಲ ನಮ್ಮ ದೇಶಬಾಂಧವರು. ತಮ್ಮ ಪರಸ್ಪರ ಹಿತರಕ್ಷಣೆಗಾಗಿ ಇವರೆಲ್ಲ ಒಗ್ಗಟ್ಟಿನಿಂದ ವಾಸಿಸಬೇಕು, ಇಂಡಿಯಾದಲ್ಲಿಯೇ ಆಗಲಿ, ಜಗತ್ತಿನ ಬೇರಾವ ದೇಶಗಳಲ್ಲಿಯೇ ಆಗಲಿ ಒಂದು ರಾಷ್ಟ್ರವೆಂದರೆ ಅಲ್ಲಿಯ ಜನರೆಲ್ಲ ಒಂದೇ ಮತಧರ್ಮಕ್ಕೆ ಸೇರಿದವರು ಎಂದಲ್ಲ' (ಪುಟ : ೧೮) ಎಂದು ತಮ್ಮ ಪ್ರೌಢವಾದ ವಿಚಾರಗಳನ್ನು ಮುಂದಿಟ್ಟ ಆನಂದ ಕುಮಾರಸ್ವಾಮಿಯವರು 'ರಾಷ್ಟ್ರೀಯತೆಯನ್ನು ರಾಜಕಾರಣಿಗಳು ಮತ್ತು ವ್ಯಾಪಾರಿಗಳು ನಿರ್ವಚಿಸಬಾರದು. ಬದಲು ಕಲಾವಿದರು ಮತ್ತು ಕವಿಗಳು ನಿರ್ವಚಿಸಬೇಕೆಂದು' ಹೇಳುತ್ತಾರೆ. ಗಾಂಧಿಯವರ ವಿಚಾರಧಾರೆ ಇದಕ್ಕಿಂತ ಸ್ವಲ್ಪ ಭಿನ್ನ. ಅವರು ಭಾರತದ ರಾಷ್ಟ್ರೀಯತೆಯನ್ನು ರಾಜಕೀಯ, ಆರ್ಥಿಕ, ನಾಗರಿಕ,

## ಕ್ಯಾಶಿಯಸ್ ರೋಮನ್ನು ಗೆದ್ದುದ್ದು ಹೇಗೆ ?




ಅಮೆರಿಕವನ್ನು ಉನ್ನತ ಶಿಖರಕ್ಕೇರಿಸುವುದು
ನನ್ನ ಒಂದೇ ಗುರಿ
ಆದ್ದರಿಂದಲೇ ರಷ್ಯವನ್ನು ಗೆದ್ದೆ
ಪೋಲೆಂಡನ್ನು ಸೋಲಿಸಿದೆ

ಇಟಾಲಿಯನ್ನರು ಹೇಳಿದರು
"ನಮ್ಮ ವೀರ ಕ್ಯಾಶಿಯಸ್‌ಗಿಂತ
ನೀವು ಧೀರರು
ನಿಮ್ಮ ಹೆಸರೇ ನಮಗಿಷ್ಟ
ನಿಮ್ಮ ಆಟ ಅತಿ ಶ್ರೇಷ್ಠ
ಉಳಿದು ಬಿಡಬಾರದೇ ಈ ರೋಮಿನಲ್ಲಿ
ನೀವು ಇಷ್ಟಪಡುವುದಾದರೆ ?"

ನಾನು ಹೇಳಿದೆ
'ಇಂಥ ಪ್ರೀತಿಗೆ ನಾನು ಶರಣು
ಆದರೆ ಅಮೆರಿಕ ನನ್ನ ದೇಶ
ಲೂಯಿಸ್ ವಿಲ್ಲಿಯ ನನ್ನ ಜನ
ನನಗಾಗಿ ಕಾಯುತ್ತಿದ್ದಾರೆ' ಎಂದು

ನಿಮಗೆ ಗೊತ್ತೆ ?
ಅವನಿಗೆ ಅಮೆರಿಕದಲ್ಲಿ
ಸಿಕ್ಕ ಸ್ವಾಗತದ ರೀತಿ
ಅವನಿಗೆ ಆಘಾತವಾಗಿ
ಒಬ್ಬಂಟಿ ಎನಿಸಿತ್ತು, ನಾಚಿಕೆಯಿಂದ
ಅವನ ಸ್ವಂತ ಊರಿನಲ್ಲೇ ಅವನಿಗೆ
ಊಟ ಕೊಡಲು ನಿರಾಕರಿಸಿತ್ತು ಹೋಟೆಲೊಂದು !

ಏಕೆ ಗೊತ್ತೇ
ಅವನೊಬ್ಬ ನೀಗ್ರೋ !

ಆಮೇಲೆ ಅವನು
ತನ್ನ ಬಂಗಾರದ ಪದಕಗಳನ್ನು
ನೀರಿಗೆ ಎಸೆದಿದ್ದ

ಕ್ಯಾಶಿಯಸ್ ಕ್ಲೇ : ವಿಖ್ಯಾತ ನಿಗ್ರೋ ಬಾಕ್ಸಿಂಗ್ ಚಾಂಪಿಯನ್
ವರ್ಣಭೇದ ಬಗ್ಗೆ ಬೇಸತ್ತು
ಮುಸ್ಲಿಂ ಧರ್ಮಕ್ಕೆ ಮತಾಂತರಗೊಂಡವರು

ಕ್ಯಾಶಿಯಸ್ : ಜೂಲಿಯಸ್ ಸೀಜರನ ಕೊಲೆಗಾಗಿ ಸಂಚು
ರೂಪಿಸಿದ್ದ ಕ್ರಿ. ಪೂ. ೪೪ನೇ
ಶತಮಾನದ ವೀರ

ಲೂಯಿಸ್ ವೆಲ್ಲಿ : ಕ್ಯಾಶಿಯಸ್ ಕ್ಲೇನ ಸ್ವಂತ ಊರು (ಅಮೆರಿಕ)

**ಮುಹಮ್ಮದ್ ಅಲಿ (ಕ್ಯಾಶಿಯಸ್ ಕ್ಲೇ)**
ಕನ್ನಡಕ್ಕೆ: **ಎನ್. ವೆಂಕಟಕೃಷ್ಣಯ್ಯ**

ನಂ. ೨೦ಎ, ೩ನೇ 'ಬಿ' ಅಡ್ಡರಸ್ತೆ, ಗುರುರಾಜ ಬಡಾವಣೆ
ದೊಡ್ಡನಕ್ಕುಂದಿ, ಬೆಂಗಳೂರು – ೫೬೦ ೦೩೭

ಮತ್ತು ನೈತಿಕತೆ ನೆಲೆಯ ಮೇಲೆ ಕಟ್ಟುವ ಬಹಳ ವಿಸ್ತಾರವಾದ ನೋಟವನ್ನು ಹೊಂದಿದವರು. ಇವೆರಡೂ ವಿಚಾರಧಾರೆಗಳಿಗೆ ಭಿನ್ನವಾಗಿ ಅಥವಾ ಬಹುಮಟ್ಟಿಗೆ ವಿರೋಧವಾಗಿ ಸಾವರ್ಕರ್ ಅವರು ಹಿಂದೂ ಧರ್ಮಾಧರಿತವಾದ ರಾಷ್ಟ್ರೀಯತೆಯನ್ನು ಪ್ರತಿಪಾದಿಸಿ ಪಿತೃಭೂಮಿ, ಮಾತೃಭೂಮಿಯಂಥ ಪರಿಕಲ್ಪನೆಗಳನ್ನು ಪ್ರತಿಪಾದಿಸಿದರು. ಇವರ ಪರಿಕಲ್ಪನೆಯ ಭಾರತದಲ್ಲಿ ಹಿಂದೂಗಳೇ ಪ್ರಧಾನವಾಗಿರುತ್ತಾರೆ. ಭಾರತದಲ್ಲಿ 'ರಾಷ್ಟ್ರ ಜೀವನ' ಎಂದರೆ ಅದು 'ಹಿಂದೂ ರಾಷ್ಟ್ರ ಜೀವನ' ಎಂದು ವಾದಿಸುವ ಇವರು 'ಹಿಂದೂ' ಪರಿಕಲ್ಪನೆಯನ್ನು ಬಹುಮಟ್ಟಿಗೆ ಬ್ರಾಹ್ಮಣ್ಯಕ್ಕೆ ಸೀಮಿತವಾಗಿರಿಸುತ್ತಾರೆ. ಕಾರಣ ಅವರಿಗೆ ಪುರಾಣ ಕಾಲದ ಶ್ರೀರಾಮನು ಆದರ್ಶ ಪುರುಷನಾಗಿ ಕಾಣುತ್ತಾನೆ.

ಇವರಿಗೆಲ್ಲ ಹೋಲಿಸಿದರೆ ರವೀಂದ್ರನಾಥ ಠಾಗೋರರು ಬಹಳ ಕ್ರಾಂತಿಕಾರೀ ಧೋರಣೆಯನ್ನು ಅನುಸರಿಸುತ್ತಾರೆ. ರಾಷ್ಟ್ರೀಯತೆಯು ಉಂಟುಮಾಡಿದ ಅನೇಕ ಅನಾಹುತಗಳನ್ನು ಕಂಡ ಅವರಿಗೆ ರಾಷ್ಟ್ರೀಯತೆಯು ಒಂದು ಪಿಡುಗಿನಂತೆ ಕಂಡಿದೆ. 'ಸ್ವಾರ್ಥ ಮತ್ತು ಆಕ್ರಮಣಶೀಲತೆ' ಅದರ ಗುಣ ಎಂದು ಅವರು ಭಾವಿಸಿದರು. 'ರಾಷ್ಟ್ರಾಭಿಮಾನವಿದ್ದೆಡೆ ಎಳೆತನದಿಂದಲೇ ಎಲ್ಲರಿಗೂ ಇತರರ ಬಗೆಗೆ ದ್ವೇಷವನ್ನೂ ಮಹತ್ವಾಕಾಂಕ್ಷೆಗಳನ್ನೂ ಉಪದೇಶಿಸಲಾಗುತ್ತದೆ. ಇತಿಹಾಸ ಕುರಿತಂತೆ ಅರೆ ಸತ್ಯ ಮತ್ತು ಮಿಥ್ಯೆಗಳನ್ನು ಹೇಳಿಕೊಡಲಾಗುತ್ತದೆ. ಮಿಕ್ಕ ಜನಾಂಗಗಳ ಬಗ್ಗೆ, ಇತರ ಸಂಸ್ಕೃತಿಗಳ ಬಗ್ಗೆ, ಸುಳ್ಳು ಸುಳ್ಳು ತಿಳಿವು ನೀಡಲಾಗುತ್ತದೆ. ಅನೇಕ ಸ್ಮಾರಕಗಳನ್ನು ಅದರಲ್ಲೂ ಬಹಳವಾಗಿ ವಿಕೃತಗೊಳಿಸಿದ ಸಂಗತಿಗಳ ಆಧಾರದ ಸ್ಮಾರಕಗಳನ್ನು, ರಚಿಸುತ್ತಾರೆ. ಇಡೀ ಮಾನವ ಜನಾಂಗದ ಹಿತದೃಷ್ಟಿಯಿಂದ ಇವನ್ನೆಲ್ಲ ಶೀಘ್ರವಾಗಿ ಕೈಬಿಡಬೇಕು' (ಪುಟ : ೨೬) ಎಂಬುದು ಅವರ ಖಚಿತ ತಿಳುವಳಿಕೆಯಾಗಿತ್ತು. ಈಚಿನ ದಿನಗಳಲ್ಲಿ ಅವರ ಮಾತು ನಿಜವಾಗುತ್ತಿರುವುದನ್ನು ನಾವು ದಿನನಿತ್ಯ ಕಾಣುತ್ತಿದ್ದೇವೆ.

ಹೀಗೆ ಪ್ರಮುಖ ಚಿಂತಕರ ವಾದವನ್ನು ಸಂಗ್ರಹಿಸಿಕೊಡುವ ಪ್ರೊ॥ ಪಣಿಕ್ಕರ್ ಅವರು ಮುಂದೆ, ನಿರ್ದಿಷ್ಟ ಸಂಸ್ಕೃತಿಗೂ ರಾಷ್ಟ್ರೀಯತೆಗೂ ಇರುವ ಸಂಬಂಧವನ್ನು ಪರಿಶೀಲಿಸುತ್ತಾರೆ. ಈ ಹಂತದಲ್ಲಿ ಆಧುನಿಕ ಅರಿವಿನ ಹಿನ್ನೆಲೆಯಲ್ಲಿ ಸಂಸ್ಕೃತಿಯನ್ನು ಪುನಾರೂಪಿಸುವ ಪ್ರಯತ್ನಗಳು ಹೇಗೆ ಪ್ರಶ್ನೆಗೆ ಉತ್ತರ ನೀಡದೆ, ಮೂಲಕ್ಕೆ ಹಿಂದಿರುಗಿ ಎಂಬ ವಾದವನ್ನೂ, ವರ್ತಮಾನದ ವಾಸ್ತವದ ನಿರಾಕರಣೆಯನ್ನೂ ಒಟ್ಟಿಗೆ ನಿರಾಕರಿಸುತ್ತದೆ ಎಂಬುದನ್ನು ತುಂಬ ಪರಿಣಾಮಕಾರಿಯಾಗಿ ಹೇಳುತ್ತಾರೆ.

ಕೃತಿಯ ಉಳಿದೆಲ್ಲಾ ಲೇಖನಗಳೂ ಮೊದಲನೇ ಲೇಖನದ ತಾತ್ವಿಕತೆಯನ್ನು ಮತ್ತಷ್ಟು ಹೊಸ ಉದಾಹರಣೆಗಳ ಮೂಲಕ ಮನದಟ್ಟು ಮಾಡಿಕೊಡಲು ಪ್ರಯತ್ನಿಸುತ್ತವೆ. 'ಸಂಪ್ರದಾಯ, ಆವಿಷ್ಕಾರ ಮತ್ತು ಅಸ್ಮಿತೆ' ಲೇಖನವು ವಸಾಹತು ಕಾಲಘಟ್ಟದಲ್ಲಿ ಭಾರತದ ಮತಧರ್ಮ ಮತ್ತು ಜಾತಿ ಪದ್ಧತಿಯಲ್ಲಾದ ಸೂಕ್ಷ್ಮ ಬದಲಾವಣೆಗಳನ್ನು ಓದುಗರ ಗಮನಕ್ಕೆ ತರುತ್ತದೆ. ಇಂಗ್ಲಿಷ್ ಓದಿದ ಭಾರತೀಯ ಉದೀಯಮಾನ ಮಧ್ಯಮವರ್ಗದ ವಿದ್ಯಾವಂತರು ಹೇಗೆ ಕೆಲವು ಬಗೆಯ ಬದಲಾವಣೆಗಳಿಗೆ ಕಾರಣರಾದರು ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ರಾಜರಾಮ ಮೋಹನ್ ರಾಯ್, ದಯಾನಂದ ಸರಸ್ವತಿ, ನಾರಾಯಣ ಗುರು ಮೊದಲಾದವರು ಹೊಸ ಭಾರತವನ್ನು ಕಟ್ಟುವಲ್ಲಿ ಹೇಗೆ ನೆರವಾದರು ಎಂಬುದು ಈ ಲೇಖನದ ಮುಖ್ಯ ವಿಷಯ. ಮೂರನೇ ಲೇಖನ 'ಒಂದು ರಾಷ್ಟ್ರದ ನಿರ್ಮಾಣದಲ್ಲಿ ಸಂಸ್ಕೃತಿಯ ಪಾತ್ರ' ಕೂಡ ಚೇತೋಹಾರಿಯಾದ ವಿಶ್ಲೇಷಣೆಯನ್ನು ಒಳಗೊಂಡಿದೆ. ಇಂದು ಬಲಪಂಥೀಯರು ಸಂಸ್ಕೃತಿಯ ವ್ಯಾಖ್ಯೆಯನ್ನೇ ಸಂಕುಚಿತಗೊಳಿಸುತ್ತಿರುವುದನ್ನು ನಾವು ಗಮನಿಸುತ್ತಿದ್ದೇವೆ. ಇಂಥ ದಯನೀಯ ಸಂದರ್ಭದಲ್ಲಿ ಪಣಿಕ್ಕರ್ ಅವರು ಸಂಸ್ಕೃತಿಯ ಬಗ್ಗೆ ನೀಡುವ ವಿವರಗಳು ಬಹಳ ಪ್ರಯೋಜನಕಾರಿಯಾಗಿವೆ. ಅವರ ಮಾತುಗಳು – 'ಒಂದು ರಾಷ್ಟ್ರದ ನಿರ್ಮಾಣದಲ್ಲಿ ಸಂಸ್ಕೃತಿಯ ಪಾತ್ರ ಹಲವು ಸಾಧ್ಯತೆಗಳನ್ನು ಹೊಂದಿದೆ. ಗತಕಾಲವನ್ನು ಮೋಹಕವಾಗಿ ವೈಭವಪೂರ್ಣವಾಗಿ ಬಿಂಬಿಸುತ್ತಾ ತಮ್ಮದು ಅಸಾಧಾರಣ ಹೆಗ್ಗಳಿಕೆ ಎಂದು ಮೆರೆಯುವ ಪ್ರವೃತ್ತಿ ಆಗಬಹುದು, ಅಥವಾ ಅದು ಸಾಂಸ್ಕೃತಿಕ ಬಹುತ್ವವನ್ನು ಸೃಷ್ಟಿಸಬಹುದು, ಲಭ್ಯವಿರುವ ಎಲ್ಲಾ ಸಾಂಸ್ಕೃತಿಕತೆಗಳನ್ನು ಸಮಾನವಾಗಿ ಗೌರವಿಸುತ್ತಾ, ಬಹುಸಂಸ್ಕೃತಿಯ ಆದರ್ಶ ಸ್ಥಿತಿಯಾಗಬಹುದು. ಇವೆಲ್ಲವೂ ಸಂಸ್ಕೃತಿ ಮತ್ತು ರಾಷ್ಟ್ರಗಳ ಪರಸ್ಪರದಲ್ಲಿ ಅಂತಸ್ಥವಾದ ಸಾಧ್ಯತೆಗಳು' (ಪುಟ : ೬೨). ಹೀಗೆ ನಮ್ಮ ಮುಂದೆ ಅವರು ಅನೇಕ ಸಾಧ್ಯತೆಗಳನ್ನು ತೆರೆದಿಡುವ ಪರಿಯೇ ಚಂದ. ನಾಲ್ಕನೇ ಲೇಖನದಲ್ಲಿ ಸಂಘರ್ಷದ ವೇದಿಕೆಯಾಗಿ ಸಂಸ್ಕೃತಿ ಹೇಗೆ ಕಾರ್ಯ ನಿರ್ವಹಿಸುತ್ತಿದೆ ಎಂಬುದರ ಕುರಿತು ವಿಶ್ಲೇಷಣೆಯಿದೆ. ಮುಖ್ಯವಾಗಿ, ಇದು ಕೋಮುವಾದೀ ಚರಿತ್ರೆಕಾರರ ವಾದಗಳನ್ನು ನಿರಾಕರಿಸುವ ಪ್ರಯತ್ನ. ವಸಾಹತುಶಾಹೀ ಇತಿಹಾಸವು ಹೇಗೆ ಕೋಮುವಾದವನ್ನು ಮುನ್ನೆಲೆಗೆ ತಂದು ಇತರ ಶೋಷಣೆಗಳನ್ನು ಗೌಣಗೊಳಿಸಿತು ಎಂಬ ಅಂಶವನ್ನು ಈ ಲೇಖನದಲ್ಲಿ ವಿಶ್ಲೇಷಿಸಲಾಗಿದೆ. 'ಮಾರ್ಕ್ಸ್‌ವಾದಿಗಳು ಸಂಸ್ಕೃತಿ ಕ್ಷೇತ್ರಕ್ಕೆ ಪರಿಣಾಮಕಾರಿಯಾಗಿ ಪ್ರವೇಶಿಸದೆ, ಹಾಗೆ ಅದರಿಂದ ತೆರವಾದ ಅವಕಾಶವನ್ನು ಕೋಮುವಾದಿಗಳೂ ಆಧುನಿಕೋತ್ತರ ವಿಶ್ಲೇಷಣವಾದಿಗಳೂ ಆಕ್ರಮಿಸಿಕೊಂಡರು' ಎಂಬ ಪಣಿಕ್ಕರ್ ಅವರ ಮಾತು ತುಂಬ ಪ್ರಸ್ತುತವಾದುದು. ಐದನೆಯ ಲೇಖನವು ಸಾಮಾಜಿಕ ಬದಲಾವಣೆಯ ಇತಿಹಾಸವಾಗಿ ಸಾಹಿತ್ಯ'ವು ಇತಿಹಾಸ ಮತ್ತು ಸಾಹಿತ್ಯಗಳ ನಡುವಣ ನಿಕಟ ಸಂಬಂಧಗಳ ಕುರಿತು ಚರ್ಚಿಸುವ ಒಳ್ಳೆಯ ಲೇಖನ. ಅವೆರಡೂ ಒಂದೇ ಸಾಮಾಜಿಕ ಪ್ರಕ್ರಿಯೆಯ ವಿಭಿನ್ನ ಭಾಗಗಳೇ ಹೌದಾದರೂ ವಸಾಹತು ಕಾಲದಲ್ಲಿ ಅವೆರಡರ ನಡುವಣ ಸಂಬಂಧಗಳನ್ನು ಗೌಣಗೊಳಿಸಲಾಯಿತು. ಪಣಿಕ್ಕರ್ ಅವರು ಇತಿಹಾಸದ ವಿದ್ಯಾರ್ಥಿಯಾದರೂ ಅವೆರಡರ ನಡುವಣ ಸಂಬಂಧಗಳನ್ನು ವಸ್ತುನಿಷ್ಠವಾಗಿ ನೋಡುವಲ್ಲಿ ಸಫಲರಾಗಿದ್ದಾರೆ. ಜೊತೆಗೆ ಇತಿಹಾಸದ ವಿದ್ಯಾರ್ಥಿಯು ಸಾಹಿತ್ಯದ ಪಠ್ಯವನ್ನು ನೋಡಿದಾಗ ಸಿಗಬಹುದಾದ ಕೆಲವು ಒಳನೋಟಗಳಿಗೆ ಅವರು ತಕಳಿ ಶಿವಶಂಕರ ಪಿಳ್ಳೈ ಅವರ ಸಾಹಿತ್ಯದ ಕುರಿತು ಮಾಡಿದ ಸಮೀಕ್ಷೆ ಒಳ್ಳೆಯ ಉದಾಹರಣೆ. 'ಮತಧರ್ಮಾತೀತತೆಯ ಆಚರಣೆಗಳ ಒಂದು ಮರುಮೌಲ್ಯಮಾಪನ' ಶೀರ್ಷಿಕೆಯ ಆರನೇ ಲೇಖನದಲ್ಲಿ ಪ್ರಭುತ್ವ ಮತ್ತು ಮತಧರ್ಮಗಳ ನಡುವಣ ಸಂಬಂಧ ಹೇಗಿರಬೇಕು ಎಂಬುದರ ಕುರಿತು ಕೆಲವು ಮುಖ್ಯ ಮಾತುಗಳಿವೆ. ವಾಸ್ತವವಾಗಿ ಇದೊಂದು ಅತ್ಯಂತ ಸೂಕ್ಷ್ಮ ವಿಷಯ. ಸಂವಿಧಾನದಲ್ಲಿ 'ಸೆಕ್ಯುಲರ್' ಪದವನ್ನು ಸೇರಿಸಿದಾಗ ಅದಕ್ಕೆ ಯಾವ ಅರ್ಥ ಇತ್ತೋ ಅದು ಇವತ್ತು ಇದ್ದಂತಿಲ್ಲ. ಮತಧರ್ಮ ಸಹಿಷ್ಣುತೆ ಮತ್ತು ಮತಧರ್ಮಾತೀತತೆ – ಇವೆರಡರ ನಡುವೆ ಅಜಗಜಾಂತರ ವ್ಯತ್ಯಾಸವಿದ್ದರೂ ಇವತ್ತು 'ಸೆಕ್ಯುಲರ್' ಪದವನ್ನು ಮತಧರ್ಮ ಸಹಿಷ್ಣುತೆ ಎಂಬರ್ಥದಲ್ಲಿ ಸವಕಲಾಗಿ ಬಳಸಲಾಗುತ್ತಿದೆ. ಇಂಥ ಬೆಳವಣಿಗೆಗಳ ಕುರಿತು ಗಂಭೀರವಾಗಿ ಯೋಚಿಸಲು ಈ ಲೇಖನ ಅನುವು ಮಾಡಿಕೊಳ್ಳುತ್ತದೆ. ಏಳನೇ ಲೇಖನವು ಸಾಂಸ್ಕೃತಿಕ ಚಟುವಟಿಕೆಗೆ ಒಂದು ಕಾರ್ಯಸೂಚಿಯನ್ನು ಸಿದ್ಧಪಡಿಸಿಕೊಟ್ಟರೆ, ಎಂಟನೇ ಲೇಖನವು ಶಿಕ್ಷಣ, ಆಧುನೀಕರಣ ಮತ್ತು ಅಭಿವೃದ್ಧಿಯ ಕುರಿತು ಬೆಳಕು ಚೆಲ್ಲುತ್ತದೆ. ಕೊನೆಯ ಲೇಖನವು ಸ್ವಾಮಿ ವಿವೇಕಾನಂದರು ಹೇಗೆ ಕೋಮುವಾದಿಯಾಗಿರಲಿಲ್ಲ ಎಂಬುದನ್ನು ತರ್ಕಬದ್ಧವಾಗಿ ಸ್ವಾಗತಿಸುತ್ತದೆ.

ಹೀಗೆ ಇಲ್ಲಿಯ ಎಲ್ಲ ಲೇಖನಗಳು ಆಧುನಿಕ ಭಾರತವು ರಾಜಕೀಯ, ಶೈಕ್ಷಣಿಕ ಮತ್ತು ಧಾರ್ಮಿಕ ಕ್ಷೇತ್ರದಲ್ಲಿ ಇದಿರಿಸುತ್ತಿರುವ ಬಿಕ್ಕಟ್ಟುಗಳನ್ನು ಮತ್ತು ಅದರ ಕಾರಣಗಳನ್ನು ಐತಿಹಾಸಿಕ ಚೌಕಟ್ಟಿನಲ್ಲಿ ವಿಶ್ಲೇಷಿಸುತ್ತವೆ. ಪ್ರೊ॥ ಪಣಿಕ್ಕರ್ ಅವರಿಗೆ ಚರಿತ್ರೆ ಎಂಬುದು ಕಳೆದುಹೋದ ಘಟನೆಗಳ ಕಥನವಲ್ಲ, ಬದಲು ವರ್ತಮಾನದ ಅಗತ್ಯವೂ ಹೌದು. ಅವರ ಲೇಖನಗಳಲ್ಲಿ ಒಳ್ಳೆಯ ಅಧ್ಯಾಪಕನೊಬ್ಬನ ಗುಣವಿದೆ. ಅದೆಂದರೆ ಚಾರಿತ್ರಿಕ ಬೆಳವಣಿಗೆ ಅಥವಾ ಘಟನೆಯೊಂದರ ಕುರಿತ ಎಲ್ಲಾ ವಿವರಗಳನ್ನು ಓದುಗರ ಗಮನಕ್ಕೆ ತರುವುದು. ಹಾಗೆ ತರುವಾಗ ತನ್ನ ಒಲವು ಯಾವುದರ ಕಡೆಗಿದೆ ಎಂಬುದನ್ನು ಅವರು ಪ್ರಕಟಿಸಿಯೂ ಕೂಡ ಇತರ ವಿವರಗಳನ್ನೂ ಗೌಣಗೊಳಿಸದೆ ನೀಡುತ್ತಾರೆ. ಅವರ ಬರೆಹದ ಈ ಗುಣದಿಂದಾಗಿ ಓದುಗರಿಗೆ ತುಂಬ ಪ್ರಯೋಜನವಾಗಿದೆ.

ಇಂಥ ಅಮೂಲ್ಯ ಮತ್ತು ಬಹಳ ಅಗತ್ಯವಾದ ಪುಸ್ತಕವನ್ನು ಪ್ರಕಟಿಸಿದ ನವಕರ್ನಾಟಕ ಪ್ರಕಾಶನದವರಿಗೂ ಇದನ್ನು ಕನ್ನಡಕ್ಕೆ ಸೊಗಸಾಗಿ ತಂದ ಶ್ರೀ ಕೆ. ಎಸ್. ಪಾರ್ಥಸಾರಥಿ ಅವರಿಗೂ ಅಭಿನಂದನೆಗಳು. ಕರ್ನಾಟಕದಾದ್ಯಂತ ಅಧ್ಯಯನ ಮಾಡುತ್ತಿರುವ ಪದವಿ ಮತ್ತು ಸ್ನಾತಕೋತ್ತರ ವಿದ್ಯಾರ್ಥಿಗಳು ಈ ಪುಸ್ತಕವನ್ನು ಧ್ಯಾನಿಸಿ ಓದಬೇಕಾದ ಅಗತ್ಯವಿದೆ.

**ಡಾ॥ ಪುರುಷೋತ್ತಮ ಬಿಳಿಮಲೆ**
ಕನ್ನಡ ಪ್ರಾಧ್ಯಾಪಕರು, ಸೆಂಟರ್ ಆಫ್ ಇಂಡಿಯನ್ ಲ್ಯಾಂಗ್ವೇಜಸ್ ಸ್ಕೂಲ್ ಆಫ್ ಲಾಂಗ್ವೇಜ್, ಲಿಟರೇಚರ್ ಆ್ಯಂಡ್ ಕಲ್ಚರ್ ಸ್ಟಡೀಸ್ ಜವಹರಲಾಲ್ ನೆಹರು ಯೂನಿವರ್ಸಿಟಿ,
ಹೊಸ ದೆಹಲಿ – ೧೧೦ ೦೬೭

# ವಿಶ್ವಾಸವಿಲ್ಲದವಳಿಗೆ...

"ಈ ಬರುವ ಸಂಕ್ರಾಂತಿಗೆ ನಿಮಗೆ ಎಂಬತ್ತ ವರ್ಷ ತುಂಬತಾವ. ಅದಕ್ಕ ನಮ್ಮೂರಿನ ಹಿರಿಯರು, ನಮ್ಮ ಸೊಸೈಟಿ ಕಮಿಟಿ ಸದಸ್ಯರು ನಿಮಗೊಂದು ಅಭಿನಂದನಾ ಕಾರ್ಯಕ್ರಮ ಮಾಡುಣ, ಒಂದು ಅಭಿನಂದನಾ ಗ್ರಂಥ ಹೊರಗೆ ತರೋಣ ಎಂದು ಟರಾವ್ ಪಾಸ್ ಮಾಡ್ಯಾರ. ಅದಕ್ಕ ತಾವು ಒಲ್ಲೆ ಅನ್ನಬಾರದು. ನಿಮ್ಮ ಸಹಕಾರ ಕೊಡಬೇಕು" ಎಂದು ಸೊಸೈಟಿ ಚೇರಮನ್ ಪೀಠಿಕೆ ಹಾಕಿದ. ಇನ್ನೂ ಬಾಯಾಗಿನ ಮಾತು ಬಾಯಾಗ ಇರುದರೊಳಗ "ಈ ಊರಿಗೆ, ಸೊಸೈಟಿಗೆ ಮನಿಮಠ ಬಿಟ್ಟು ಸೇವಾ ಮಾಡ್ಯಾರ. ಇವತ್ತರ ನೆನಪಾತಲ್ಲ ನಿಮಗ, ಅವರಿಗೆ ಅಭಿನಂದನೆ ಮಾಡಬೇಕಂತ" ಎಂದು ಮಹಾದೇವಪ್ಪನವರ ಮಗ ಪ್ರಕಾಶ ನಡುವೆ ಬಾಯಿ ಹಾಕಿದ. ಮಗನನ್ನು ಸಿಟ್ಟುಗಣ್ಣಲ್ಲೇ ನೋಡಿದ ಮಹಾದೇವಪ್ಪನವರು, "ಅಂಥಾದ್ದೆಲ್ಲ ಬ್ಯಾಡಪಾ, ಅದಽ ರೊಕ್ಕದಾಗ ಊರಿಗೆ ಒಳ್ಳೇದಾಗೊ ಯಾವದಾದರು ಕೆಲಸಾ ಮಾಡ್ರಿ" ಎಂದು ಚೇರಮನ್ನರಿಗೆ ಹೇಳಿದರು. ಈ ಮುದಕನ ಒಪ್ಪಿಸುವುದು ದುಸ್ತರ ಎಂದರಿತ ಅವರು ಊರ ಜನರನ್ನು ಕರೆದುಕೊಂಡು ಬಂದು ಒಪ್ಪಿಸಿದರಾಯಿತು ಎಂದು ಎದ್ದುಹೋದರು.

"ನಿಮಗ ಬುದ್ಧಿಗಿದ್ದಿ ಐತಿಲ್ಲೋ ಅಪ್ಪಾಜಿ, ನಮಗಂತೂ ಏನೂ ಮಾಡಲಿಲ್ಲ. ಊರು, ದೇಶ ಅಂತೆಲ್ಲಾ ಇದ್ದ ಜಮೀನು ದಾನಾ ಮಾಡೀರಿ. ನಿಮ್ಮಗೂಡ ಹೋರಾಟ ಮಾಡಿದವರು ಈಗ ಮಂತ್ರಿ ಆಗ್ಯಾರ. ಸರಕಾರದಾಗ ಯಾವದಾದರ ಒಂದು ಹುದ್ದೆ ಕೊಡಸಂದ್ರ ಅದನ್ನೂ ಮಾಡಲಿಲ್ಲ. ಮನಿ ಬಾಗಿಲಿಗೆ ಬರು ಪ್ರಶಸ್ತಿ, ಪುರಸ್ಕಾರ, ಸಮ್ಮಾನಗಳನ್ನು ಸಹಿತ ಬ್ಯಾಡ ಅಂದ್ರ ನೀವಿಲ್ಲದ ಕಾಲಕ್ಕ ಜನ ನಮ್ಮನ್ನ ಏನಂತ ಗುರುತಿಸಬೇಕ" ಎಂದು ಮಗ ತಂದೆಗೆ ಜೋರು ಮಾಡತೊಡಗಿದ. ಅಷ್ಟರಲ್ಲಿ ಊರಿನ ಹಿರಿಯ ಜನ ಇವರ ಮನೆಯ ಕಡೆಗೆ ಬರುವುದು ಕಂಡಿತು. "ಅವರು ಹೇಳಿದ ಮಾತಿಗೆ ಹುಂ ಅನ್ರೀ. ಮುಂದಿಂದು ನಾ ನೋಡಕೋತೇನಿ" ಎಂದು ಪ್ರಕಾಶ ತಂದೆಯ ಮೇಲೆ ಒತ್ತಡ ಹಾಕಿದ. ಅಂತೂ ಜನರ ಬೇಡಿಕೆಗೆ ಮಹಾದೇವಪ್ಪ ಒಪ್ಪಿಕೊಂಡರು.



"ನಿಮ್ಮ ಕೈಬರಹದ ಯಾವುದಾದರೂ ಪತ್ರಗಳು, ಲೇಖನಗಳು, ಕವಿತೆಗಳು ಇದ್ದರೆ ಕೊಡಿ. ಅವುಗಳನ್ನು ಅಭಿನಂದನಾ ಗ್ರಂಥಕ್ಕೆ ಬಳಸಿಕೊಳ್ಳುತ್ತೇವೆ" ಎಂದು ಅವರೇ ಕಟ್ಟಿದ ಕಾಲೇಜಿನ ಪ್ರಾಂಶುಪಾಲರು ಕೇಳಿಕೊಂಡರು. ಇದೆಲ್ಲ ಯಾಕೋ ಆತ್ಮವಂಚನೆಯಾಗುತ್ತಿದೆ, ಎಂದು ಮನಸ್ಸಿನಲ್ಲಿಯೇ ಅಂದುಕೊಳ್ಳುತ್ತ ಮಹಾದೇವಪ್ಪ ತಮ್ಮ ಎಡಗಡೆಯ ಕಪಾಟಿನ ಕಡೆಗೆ ಕೈಮಾಡಿ ತೋರಿಸಿದರು. ಪ್ರಾಂಶುಪಾಲರು ಕಪಾಟಿನಲ್ಲಿಯ ಪುಸ್ತಕಗಳ, ಕಾಗದಪತ್ರಗಳ ರಾಶಿಯಲ್ಲಿ ಮಹಾದೇವಪ್ಪನವರ ಕೈ ಬರಹಗಳನ್ನು ಹುಡುಕತೊಡಗಿದರು. ನಾಲ್ಕು ಮಡಿಕೆ ಮಡಚಿ ತುಂಡಾಗಿದ್ದ ಕಾಗದ ಒಂದು ಸಿಕ್ಕಿತು ! ಹೌದು ಅದು ಮಹಾದೇವಪ್ಪನವರ ಕೈಬರಹವೆಂದು ಖಾತ್ರಿಪಡಿಸಿಕೊಂಡು ಬಿಡಿಸಿ ಓದುತ್ತಾರೆ...!!

✶ ✶ ✶

ನನ್ನ ಪ್ರೀತಿಯ ಲಕ್ಷ್ಮಿ,

ನಿನ್ನ ನೆನಪು ತುಂಬ ಕಾಡುತ್ತಿದೆ ಎಂದೇನಲ್ಲ. ಆದರೆ, ನನ್ನೂರಿಗೆ ಹೋದಾಗಲೆಲ್ಲ ಯಾಕೋ ಏನೋ ನಿನ್ನನ್ನು ನೆನೆದು ಮನಸ್ಸು ಕಸಿವಿಸಿಗೊಳ್ಳುತ್ತದೆ. ಈಗ ನೀನಿಲ್ಲ ಎಂಬ ನೋವು ಒಂದು ಕಡೆಯಾದರೆ, ನಿನ್ನ ಕ್ಷಮೆ ಕೇಳಬೇಕಾಗಿತ್ತು ಎಂಬ ಪಾಪಪ್ರಜ್ಞೆ ಮತ್ತೊಂದು ಕಡೆ. ಮೊನ್ನೆ ಊರಿಗೆ ಹೋಗಿದ್ದೆ. ನಿನ್ನ ತಮ್ಮ ಸಿಕ್ಕಿದ್ದ. ನನ್ನ ಹತ್ತಿರ ಬಂದು ದೈನ್ಯತೆಯಿಂದ ಕೈ ಮುಗಿದು 'ಸಾವಕಾರ್ರೇ ಅರಾಮ ಅದೀರ್ರೀ ?' ಎಂದು ಮಾತನಾಡಿಸಿದ. ಎಂದಿನಂತೆ 'ಏನರಾ ಖುಷಿ ಕೋಡ್ರಿ, ಭಿಕ್ಷಾ ಕೋಡ್ರಿ' ಎಂದು ಅವನು ನನ್ನನ್ನು ಕೇಳಲೇ ಇಲ್ಲ !

ಹುರಿಗಟ್ಟೆಯ ಮೇಲೆ ಕುಳಿತು 'ಎಲಿ ಅಡಕಿ ಇದ್ರ ಕೊಡೋ' ಎಂದು ಸಲುಗೆಯಿಂದ ಕೇಳಿದೆ. ಸಂಕೋಚದಿಂದ ಆ ಕಡೆ ಈ ಕಡೆ ನೋಡಿ ತನ್ನ ಚೊಂಚಿಯಿಂದ ಎಲಿ ಅಡಕಿ ತೆಗೆದು ಸುಣ್ಣ ಹಚ್ಚಿಕೊಟ್ಟ. ಅಡಿಕೆ ಬಾಯಿಗೆ ಹಾಕಿಕೊಂಡು, ಲಕ್ಷ್ಮಿ ಹ್ಯಾಂಗದಾಳೋ ಎಂದೆ. ಆತ ನಿನ್ನ ಕಥೆಯನ್ನು ಅಲ್ಲಾ, ವ್ಯಥೆಯನ್ನು ಹೇಳುತ್ತ ಹೋದ. ನನ್ನ ಕಣ್ಣಲ್ಲಿ ನೀರು ಬರತೊಡಗಿತು. ಅವನ ಕಣ್ಣಲ್ಲಿ ಒಂದು ಹನಿ ಕಣ್ಣೀರ ಪಸೆಯೂ ನನಗೆ ಕಾಣಲಿಲ್ಲ.

ಅದು ಇಪ್ಪತ್ತೈದು ವರ್ಷಗಳ ಹಿಂದಿನ ಮಾತು. ಯುಗಾದಿಯ ಆಸುಪಾಸು ಎಂದು ಕಾಣುತ್ತದೆ. ಆಯಾ ಕಾಲಮಾನಕ್ಕೆ ಸಿಗುವ ಫಲಗಳನ್ನು ತಿನ್ನಲು ನಾವು ಹೊಲ ಗದ್ದೆ, ಗುಡ್ಡಗಾಡು ಎಂದೆಲ್ಲ ಸುತ್ತಾಡುವ ದಿನಗಳವು. ಸಾಯಂಕಾಲ ಶಾಲೆ ಮುಗಿಸಿ ಹೊಲಕ್ಕೆ ಹೋಗಿದ್ದಾಗ ಅಲ್ಲಿ ನಿನ್ನನ್ನು ಮೊದಲ ಬಾರಿಗೆ ನಾನು ನೋಡಿದ್ದೆ. ಶಾಲೆಯ ಮುಖವನ್ನೇ ನೋಡದೆ ಹೀಗೆ ಹೊಲ ಗದ್ದೆಗಳಲ್ಲಿ ದನ ಮೇಯಿಸುತ್ತಿರುವ ನಿನ್ನ ಮೇಲೆ ನನಗೆ ಆಗ ಪ್ರೀತಿಯೇನು

**ಮಲ್ಲಿಕಾರ್ಜುನ ಗುಮ್ಮಗೋಳ**

ಹುಟ್ಟಲಿಲ್ಲ. ಉಡಿಯಲ್ಲಿ ಮಾವಿನಕಾಯಿಗಳನ್ನು ಕಟ್ಟಿಕೊಂಡು ನಮ್ಮ ತೋಟದಿಂದ ನೀನು ಹೊರಗೆ ಬರುತ್ತಿರುವದನ್ನು ನಾನು ನೋಡಿದೆ. ಅಲ್ಲೇ ಪಕ್ಕದಲ್ಲಿದ್ದ ಗೊಬ್ಬರ ಗಿಡದ ಜರ್ಲನ್ನು ತೆಗೆದುಕೊಂಡು ನಿನ್ನನ್ನು ಬಡಿದದ್ದು. ನೋವು ತಾಳಲಾರದೆ ನೀನು ನೆಲಕ್ಕೆ ಬಿದ್ದು ಚೀರಾಡಿ ಅತ್ತಿದ್ದು ಎಲ್ಲವೂ ನನ್ನ ಕಣ್ಣಮುಂದೆ ಬಂದು ಚುಚ್ಚುತ್ತಿವೆ.

ಮಾರನೆಯ ದಿನ ಬೆಳಿಗ್ಗೆ ನಿನ್ನ ಕಾಲುಗಳು ಬಾತುಕೊಂಡು ನಡೆದಾಡಲಾರದಂತೆ ಆಗಿದ್ದು, ನಿಮ್ಮವ್ವ ಗಾಣದೆಣ್ಣೆ ಅರಿಶಿಣ ಹಚ್ಚಿ ಗಾಯ ವಾಸಿಮಾಡಲು ಯತ್ನಿಸಿದ್ದು, ಮಗಳ ಯಾತನೆ ನೋಡಲಾಗದೆ ನಿಮ್ಮವ್ವ ನಿನ್ನನ್ನು ನಮ್ಮ ಮನೆಯವರೆಗೆ ಕರೆದುಕೊಂಡು ಬಂದು, ಹುಲಿಯಂತೆ ಇದ್ದ ನಮ್ಮ ಅಜ್ಜಿಯ ಮುಂದೆ ನಿಂತು, "ಸಾವಕಾರ್ತಿ, ನಿಮ್ಮ ಮೊಮ್ಮಗ ನನ್ನ ಮಗಳ್ನ ಹ್ಯಾಂಗ ದನಕ್ ಬಡ್ದಾಂಗ್ ಬಡ್ದಾರ ನೋಡ್ರೀ" ಎಂದು ನಿನ್ನ ಲಂಗವನ್ನು ಎತ್ತಿ ನಿನ್ನ ಮೀನುಗಂಡ ಹಾಗೂ ಕುಂಡಿಗಳನ್ನು ತೋರಿಸಿದ್ದು, ನನ್ನಜ್ಜಿ, "ಈ ಬೋಸ್ಡಿ ಮಾಯಿನಕಾಯಿ ಯ್ಯಾಕ ಹರಿಬೇಕ" ಎಂದು ನನ್ನನ್ನು ಸಮರ್ಥಿಸಿಕೊಂಡದ್ದು, ಅದಕ್ಕೆ ನಿಮ್ಮವ್ವ ನಿನ್ನದ ತಪ್ಪಿರಬೇಕೆಂದು ನಿನ್ನನ್ನು ಬೈಯುತ್ತ ಕೇರಿ ಕಡೆ ಕರೆದುಕೊಂಡು ಹೋದದ್ದು, ಎಲ್ಲವೂ ನೆನಪಾಗುತ್ತಿವೆ. ಉಳ್ಳವರ ಬಾಯಿಯ ಮುಂದೆ ನಿಮ್ಮವ್ವಂದೇನು ನಡೆದೀತು ಹೇಳು?

ಇದಾಗಿ ಎಂಟು ವರ್ಷಗಳ ಮೇಲೆ ನಾನು ನನ್ನ ಹೊಲದ ದಾರಿಯಲ್ಲಿ ನಿನ್ನನ್ನು ಅಡ್ಡಗಟ್ಟಿದಾಗ ಗಾಬರಿಗೊಂಡ ನೀನು, "ಮಂಗ್ಯಾ ಗಿಡ್ದಾಗ ಹತ್ತಿ, ಕಾಯಿ ಉದರಿಸಿದ್ದವು, ಅವುನ್ನ ನಾ ಆಕೊಂಡಿದ್ಯಾ" ಎಂದು ಹೇಳಿದ್ದು. ನಾನು, "ನಿನ್ನ ಹೊಡೆಯೂ ಮುಂಚೆ ಇದನ್ನ ನನಗ್ಯಾಕ ಹೇಳಲಿಲ್ಲ?" ಎಂದು ನಿನ್ನನ್ನು ನಾನು ಗದರಿಸಿದ್ದು, ಎಲ್ಲವೂ ನೆನಪಾಗುತ್ತಿವೆ. ಹೌದು, ನೀನು ಸಾಲಿ ಕಲ್ತಿಲ್ಲ, ಮೂಲಿ ಕಲ್ತಿಲ್ಲ, ಗಾಂಧೀಜಿ ಅಂದ್ರ ಏನಂತ ಗೊತ್ತಿಲ್ಲ. ಆದ್ರೂ ನೀ ನನ್ನ ಕಣ್ಣಾಗ ಗಾಂಧೀಜಿ ಕಂಡಂಗ ಕಾಣಾಕ್ಹತ್ತಿ, ಎಂದು ನಾನು ಅಂದಿದ್ದು, ಗಾಂಧೀಜಿ ಅಂದ್ರ ಯಾರು? ಎಂದು ನೀ ಮುಗ್ಧತೆಯಿಂದ ಕೇಳಿದ್ದು, "ಅದಕ್ಕೆ ನಾನು 'ಅಂವಾ ನಿಮ್ಮಪ್ಪಾ' ಅಂದಿದ್ದು, ಅಂವಾ ನಮ್ಮಪ್ಪೆಂಗ ಅಕ್ಕಾನು, ನಮ್ಮಪ್ಪ ಬರಮಪ್ಪ ಅಂದಿದ್ದು. ಅದಕ್ಕೆ ನಾನು ಗಾಂಧೀಜಿ ಅಂದ್ರ ನಿನ್ನಂಗ ತನ್ನ ತಪ್ಪಿಲ್ಲದಿದ್ದರೂ ಇನ್ನೊಬ್ಬರ ಕಡೆ ಹೊಡಿಸಿ ಕೊಂಡಾಂವ. ನಿನ್ನಂಥವರ ಸಲುವಾಗಿ ಬ್ರಿಟಿಷರಿಂದ ಕಡೆ ಬೂಟುಗಾಲಿನಿಂದ ಒದೆಸಿಕೊಂಡಾಂವ. ಕೊನೆಗೆ ಬ್ರಿಟಿಷರೆ ತಪ್ಪಾಯಿತೆಂದು ಅವನ ಕಾಲಿಗೆ ಬಿದ್ದು ಈ ದೇಶ ಬಿಟ್ಟು ಓಡಿ ಹೋಗುವಂಗ ಮಾಡಿದಾಂವ. ಆದ್ರ ನಿನ್ನಂಗ ಅನ್ಯಾಯ ಸಹಿಸಿಕೊಂಡು, ನೋವು ನುಂಗಿಕೊಂಡು ಬದುಕಿದಾಂವ ಅಲ್ಲ ತಗಿ" ಎಂದು ನಾನು ನಿನಗೆ ಹೇಳಿದ್ದು, ಅದಾವುದೂ ತಿಳಿಯದಂತೆ ನೀನು ನನ್ನ ಕಣ್ಣುಗಳನ್ನೇ ಮಿಕಿ ಮಿಕಿ ನೋಡುತ್ತಿದ್ದದ್ದು, ಆ ನೋಟದಲ್ಲೇ ನಿನಗೆ ನನ್ನ ಮೇಲೆ ಪ್ರೀತಿ ಹುಟ್ಟಿದೆ ಎಂದು ನಾನು ಭಾವಿಸಿದ್ದು, ನಿನ್ನ ಸಹನೆಗಾಗಿ, ನಿನ್ನ ನಿರ್ಮಲತೆಗಾಗಿ ನಾನು ಕರಗಿ ನಿನ್ನ ಧ್ಯಾನದಲ್ಲಿ ಮುಳುಗಿದ್ದು. ಅದಕ್ಕಿಂತ ಹೆಚ್ಚಾಗಿ ತುಂಬಿದ ನಿನ್ನ ಎದೆ, ಮಿರುಗುವ ಗಲ್ಲ, ಕೆಂಪನೆಯ ತುಟಿ, ವಯೋ ಸಹಜ ನಾಚಿಕೆ, ಉಬ್ಬಿದ ಸ್ತನಗಳು ಕಾಣದಂತೆ ಕೈಯನ್ನು ಅಡ್ಡಲಾಗಿ ಇಟ್ಟುಕೊಂಡು, ಮುಖ ಕೆಳಗೆ ಹಾಕಿಕೊಂಡು ನನ್ನೊಂದಿಗೆ ಸಂಕೋಚದಿಂದ ಮಾತನಾಡಿದ್ದು ಎಲ್ಲವೂ ನೆನಪಾಗುತ್ತಿವೆ.

## ಸಾಕಷ್ಟು ಮಂದಿ

ದೀಪ ಉರಿಸಲು ಕೇವಲ<br>
ಕೆಲವೇ ಮಂದಿ<br>
ಬತ್ತಿ ಇಡಲು ಇದ್ದಾರೆ<br>
ಸಾಕಷ್ಟು ಮಂದಿ

**ಕಾಸರಗೋಡು ಅಶೋಕ್ ಕುಮಾರ್**
ಮಂಗಳೂರು – ೫೭೫ ೦೦೮

ನಾನು ಕಾಲೇಜು ಶಿಕ್ಷಣಕ್ಕೆಂದು ಪಟ್ಟಣದ ಪಾಲಾದೆ. ನಿಮ್ಮ ಕೇರಿಯಲ್ಲಿಯೇ ನೀನು ತುಂಬ ಚಲುವಿ ಎಂದು ಊರ ಜನ ನಿನ್ನನ್ನು ದೇವರಿಗೆ ಬಿಡುವ ತೀರ್ಮಾನ ಮಾಡಿದ್ದು, ಅದಕ್ಕೆ ದೇವರಿಗೆ ಬಿಡುವದೆಂದರೇನು ಎಂದು ತಿಳಿಯುವ ಹೊತ್ತಿಗೆ ನೀನು ಮಿಂಡರ ತೆಕ್ಕೆಯಲ್ಲಿ ಸಿಕ್ಕು ಹಣ್ಣಿನ ಸಿಪ್ಪೆಯಂತಾಗಿದ್ದು, ಇದು ನನಗೆ ತಿಳಿಯುವ ಹೊತ್ತಿಗೆ ಐದು ವರ್ಷಗಳು ಕಳೆದುಹೋಗಿದ್ದವು. ನಿನ್ನನ್ನು ನೋಡಬೇಕು ಎನ್ನಿಸಿ ನಿಮ್ಮ ಕೇರಿಯಲ್ಲಿ ಹಾಯ್ದು ನಾನು ನಮ್ಮ ಹೊಲಕ್ಕೆ ಎರಡು ಮೂರು ಬಾರಿ ಸುತ್ತಾಡಿದೆ. ಆದರೂ ನಿನ್ನನ್ನು ನೋಡಲಾಗಲಿಲ್ಲ.

ಮೊನ್ನೆ ಊರಿಗೆ ಹೋದಾಗ ನಿನ್ನ ತಮ್ಮ ಹೇಳಿದ, ಅಕ್ಕ ಊರಾಗಿಲ್ಲ ಅಂತ. "ಎಲ್ಲಿ ಹೋಗ್ಯಾಳು?" ಎಂದು ಕೇಳಿದೆ. ಆತನ ಮುಖದಲ್ಲಿ ಚಿವ್ಟಿದರೂ ಹನಿ ನೆತ್ತರು ಕಾಣದಂತಾಯಿತು. ಯಾಕೋ ಏನಾತೋ ನಿಮ್ಮಕ್ಕಗ? ಎಂದು ಗಾಬರಿಯಿಂದ ಕೇಳಿದೆ. "ಇಲ್ಲ ಸಾವಕಾರ್ರೇ, ಅಕಿಂದ ಮದುವ್ಯಾತು" ಎಂದ. "ಹಾಂ! ಯಾವಾಗ, ಯಾರು ಮದುವಿ ಮಾಡಿಕೊಂಡ ಹೋದ್ರು?" ಎಂದು ನಾನು ಕುತೂಹಲದಿಂದ ಕೇಳಿದೆ. "ಗುಜರಾತಕಡೆ ಮಾರ್‍ವಾಡಿ ಮನಶಾ. ಮೊದ್ಲನೆ ಹೇಂತಿ ಸತ್ತಾಳಂತ, ಮಕ್ಕಳ್ಳಿಲ್ಲ ಮರಿ ಇಲ್ಲಾ, ಬಾಳ ಸಾವಕಾರಂತ, ಒಂದ್ಯೆವತ್ತ ವಯಸ್ಸಾವ ಇರಬೇಕು, ಅಂವ ಬಂದು ನಮ್ಮಪ್ಪಗ ಮೂವತ್ತ ಸಾವಿರ ರೂಪಾಯಿ ತೆರುವ ಕೊಟ್ಟು ಲಕ್ಷ್ಮೀನ ಕರಕೊಂಡ ಹೋದ. ಏಳೆಂಟ ವರ್ಷ ಆತು. ಅಕಿ ಹ್ಯಾಂಗ ಅದಾಳೋ ಏನೋ ಗೊತ್ತಿಲ್ಲ" ಎಂದ. ಸಂಕಟ ತಡೆಯಲಾರದೆ ನಿನ್ನ ವಿಳಾಸ, ಫೋನ್ ನಂಬರ್ ಕೇಳಿದೆ. ಯಾವುದೂ ಗೊತ್ತಿಲ್ಲ ಅಂದ. ನಿನ್ನ ಕ್ಷಮೆ ಕೇಳಬೇಕೆಂದು ಈ ಪತ್ರ ಬರೆದೆ. ವಿಳಾಸವಿಲ್ಲದ ನಿನಗೆ ಹೇಗೆ ತಲುಪಿಸಲಿ. ಅದು ತಲುಪಿದರೂ ನೀನು ಅದನ್ನು ಹೇಗೆ ಓದುತ್ತಿ? ನನ್ನ ಹಾಗೆ ನೀನು ಅಕ್ಷರ ಕಲಿತಿಲ್ಲವಲ್ಲ. ಈ ಭೂಮಿ ಗುಂಡಗಾಗಿದೆ, ಇಂದಲ್ಲಾ ನಾಳೆ ನೀನು ನನಗೆ ಸಿಕ್ಕೇ ಸಿಗುತ್ತೀಯಾ ಎಂಬ ಭರವಸೆಯೊಂದಿಗೆ ಈ ಪತ್ರವನ್ನು ನನ್ನ ಕಿಸೆಯಲ್ಲಿ ಇಟ್ಟುಕೊಂಡು ತಿರುಗುತ್ತಿದ್ದೇನೆ.

ಇಂತಿ ನಿನ್ನ ...

* * *

ಅಚ್ಚರಿಯಿಂದ ಓದುವದನ್ನು ಗಕ್ಕನೆ ನಿಲ್ಲಿಸಿದ ಪ್ರಾಂಶುಪಾಲರು ಈ ಪತ್ರವನ್ನು ತೆಗೆದುಕೊಳ್ಳಲೇ ಎಂದು ಮಹಾದೇವಪ್ಪನವರಿಗೆ ಆ ಪತ್ರವನ್ನು ತೋರಿಸುತ್ತ ಕೇಳಿದರು. ಪತ್ರವನ್ನು ನೋಡಿದ ಮಹದೇವಪ್ಪ ಕರೆಂಟ್ ಶಾಕ್ ಹೊಡೆದವರ ಹಾಗೆ ಚಟ್ಟನೆ ಕುರ್ಚಿಯಿಂದ ಎದ್ದು, ಬೇಡ ಎಂದು ಹೇಳಿ ಆ ಪತ್ರವನ್ನು ಇಸಿದುಕೊಳ್ಳುವಷ್ಟರಲ್ಲಿ, ಅಲ್ಲೇ ಹಿಂದೆ ನಿಂತಿದ್ದ ಅವರ ಮಗ ಆ ಪತ್ರವನ್ನು ಪ್ರಾಂಶುಪಾಲರ ಕೈಯಿಂದ ಕಿತ್ತುಕೊಂಡು ಓದತೊಡಗಿದ: 'ಅದಕs ಅಂತೈನಿ ಹೋರಾಟ, ಚಳುವಳಿ ಅಂಥ ಹೇಳಿ ಮನಿ ಬಿಟ್ಟು ತಿಂಗಳಗಟ್ಟಲೆ ಯಾಕ ಹೋಕ್ಕಿದ್ರ ಅನ್ನೂದು ಈಗ ಗೊತ್ತಾತು. ಅಲ್ಲೆ ಅಕೀಗೆ ಎಷ್ಟು ಮಕ್ಕಳಾಗ್ಯಾವೋ ಏನೋ? ಮನಿ ಮಾರೆಲ್ಲಾ ಖಾಲಿಮಾಡಿ ಅಕೀ ಮನಿ ತುಂಬಸ್ಯಾರ, ಇಲ್ಲೆ ನಮಗ ತಿನ್ನಾಕಿಲ್ಲದಂಗ ಮಾಡ್ಯಾರ' ಎಂದು ಜೋರು ಧ್ವನಿಯಿಂದ ಹಲುಬತೊಡಗಿದ. ಅಷ್ಟರೊಳಗ ಅಡುಗೆಮನೆಯಿಂದ ಪ್ರಕಾಶನ ಹೆಂಡತಿ ಮಕ್ಕಳು ಹೊರಗೆ ಓಡಿ ಬಂದು ಕಾಗದದ ಕಥೆ ಕೇಳಿ ಮಹದೇವಪ್ಪನಿಗೆ 'ಛೀ, ಥೂ' ಎಂದು ಬಯ್ಯ ತೊಡಗಿದರು. ಈ ರಂಪಾಟ ರಾದ್ಧಾಂತ ಕೇಳಿದ ಹಿರಿಯರು, "ಮಹದೇವಪ್ಪ ಬಾಳ ಚಲೋ ಮನಷ್ಯಾ ಅಂತ ತಿಳಕೊಂಡಿದ್ವಿ. ಹಿಂಗೆಲ್ಲಾ ಮಾಡಬಾರದಿತ್ತು. ಹೆಂಡ್ತಿನ ಛಂದಾಗಿ ದವಾಖಾನಿಗೆ ತೋರಿಸಲಿಲ್ಲ. ಮಕ್ಕಳಿಗೆ ಸರಿತನ್ಯಾಗ ಸಾಲಿ ಕಲಿಸಲಿಲ್ಲ. ಮನಷ್ಯಾ ಮೊದಲ ಮನಿ ಗೆದ್ದು ಮಾರ ಗೆಲ್ಲಬೇಕು. ಹಿಂಗ ಮಾಡಿದರ ಎಷ್ಟ ದೊಡ್ಡ ಮನಷ್ಯಾ ಇದ್ರೂ ಸಣ್ಣಾಂವಾಗಿಬಿಡ್ತಾನ" ಎಂದು ತಲೀಗೊಂದೊಂದು ಮಾತು ಆಡುತ್ತ ಎದ್ದು ಹೋದರು.

* * *

ಇಷ್ಟs ನೋಡಪಾ ನನ್ನ ಕಥಿ. 'ನಾ ಕಾಲೇಜು ಕಲಿಯುವಾಗ ಪೇಪರಿನಲ್ಲಿ ಪ್ರೇಮ ಪತ್ರ ಬರೆಯುವ ಸ್ಪರ್ಧೆ ಇತ್ತು. ಆವಾಗ ಸುಮ್ನ ಕಾಲ್ಪನಿಕವಾಗಿ ಈ ಪತ್ರ ಬರೆದಿದ್ದೆ. ಅದರ ಒಂದು ಕಚ್ಚಾ ಪ್ರತಿ ನನ್ನ ಲೈಬ್ರರಿ ಯೊಳಗ ಇತ್ತು. ಅದನ್ನು ಓದಿ ನಿಜ ಎಂದು ತಿಳಿದು, ನನ್ನ ಮಗ, ಸೊಸಿ ಮನಿ ಬಿಟ್ಟು ಹೊರಗೆ ಹಾಕಿದ್ರು. ಇದೊಂದ ನೆವಾ ಬೇಕಿತ್ತ ಅವರಿಗೆ ನನ್ನ ಮನಿಯಿಂದ ಹೊರಗ ಹಾಕಾಕ. ಈ ವೃದ್ಧಾಶ್ರಮ ಸೇರಿ ಬರೋಬ್ಬರಿ ಈ ಸಂಕ್ರಾಂತಿಗೆ ಎರಡು ವರ್ಷ ಆತು. ವಿಳಾಸವಿಲ್ಲದವಳಿಗೆ ಒಂದು ಪ್ರೇಮ ಪತ್ರ ಬರೆಯಲು ಹೋಗಿ ನಾನು ವಿಳಾಸವಿಲ್ಲದವನಂತಾದೆ' ಎಂದು ನಿರಿಗೆಗಟ್ಟಿದ ತನ್ನ ಕೆನ್ನೆಯ ಮೇಲಿನ ಹನಿಗಳನ್ನು ಒರೆಸಿಕೊಳ್ಳುತ್ತ, ಹತ್ತಿರ ಕುಳಿತ ಇನ್ನೊಂದು ವೃದ್ಧ ಜೀವಕ್ಕೆ ಹೇಳುತ್ತಿದ್ದನು.

**ಮಲ್ಲಿಕಾರ್ಜುನ ಗುಮ್ಮಗೋಳ**
ಕೇರಾಫ್ : ಎಸ್. ಎಸ್. ಕುಲಕರ್ಣಿ, 'ಶಿವಗಿರಿ ನಿವಾಸ',
೩ನೇ ಕ್ರಾಸ್ ಸಾಧನಕೇರಿ, ಧಾರವಾಡ – ೫೮೦ ೦೦೮



ಕಾಗೆಯ ಕೂಗು, ನಾಯಿಯ ಬೊಗಳುವಿಕೆ, ಹಲ್ಲಿಯ ಲೊಚಗುಟ್ಟುವಿಕೆ, ಅಂಗ ಸ್ಫುರಣ, ಹೂವಿನ ಪತನ, ಹಾವಿನ ಅಡ್ಡ ದಾಟುವಿಕೆ ಇಂತಹ ಸಾವಿರಾರು ಸಂಗತಿಗಳು ಅವರ ಮಟ್ಟಿಗೆ ನಿರರ್ಥಕಗಳಲ್ಲ. ಅವರು ಅವುಗಳನ್ನು ಶಕುನಗಳೆಂದು ಭಾವಿಸುತ್ತಾರೆ. ಅವು ಎಲ್ಲಿ, ಹೇಗೆ, ಯಾವ ಸಂದರ್ಭದಲ್ಲಿ ನಡೆಯಿತೆಂಬುದನ್ನು ಪರಿಗಣಿಸಿ ತಮ್ಮ ಅನುಭವಗಳ ಸಂಕಲಿತ ಜ್ಞಾನದಿಂದ ಅದಕ್ಕೊಂದು ಅರ್ಥ ಕಲ್ಪಿಸುತ್ತಾರೆ. ಪ್ರಕೃತಿಯ ಆಗುಹೋಗುಗಳಿಗೆಲ್ಲ ಕಾರಣವೆನಿಸಿದ ಈ ದೈವೀ ಸಂಬಂಧಗಳನ್ನು ಅವರು ಅತಿಮಾನುಷ ಶಕ್ತಿಗಳ ಪ್ರಭಾವದಿಂದಲೇ ನಡೆಯುತ್ತವೆ ಎಂಬುದಾಗಿ ಬಗೆದುಕೊಳ್ಳುತ್ತಾರೆ. ಕಾರ್ಯ-ಕಾರಣಗಳ ಹಿನ್ನೆಲೆಯಲ್ಲಿ ಬಂದ ಪರಂಪರಾಗತವಾದ ಜ್ಞಾನ, ಸುದೀರ್ಘಕಾಲದ ಅನುಭವ, ಕಾಲ್ಪನಿಕ ಆಲೋಚನೆ ಹಾಗೂ ಅತೀಂದ್ರಿಯ ವ್ಯವಹಾರಗಳ ಫಲವಾಗಿ ಮೂಡಿದ ಪ್ರಜ್ಞೆಯೇ ನಂಬಿಕೆಗಳು.

# ತುಳು ಜಾನಪದದಲ್ಲೊಂದು ಕೆರೆಗೆ ಹಾರ

**ಡಾ॥ ಪಾಲ್ತಾಡಿ ರಾಮಕೃಷ್ಣ ಆಚಾರ್**

'ಕೆರೆಗೆ ಹಾರ' ಕನ್ನಡ ಜಾನಪದದಲ್ಲೊಂದು ಪ್ರಸಿದ್ಧಿ ಪಡೆದ ಕಥನ ಕವನ. ಇದನ್ನು ಬಹಳಷ್ಟು ಮಂದಿ ವಿದ್ವಾಂಸರು ಸಂಗ್ರಹಿಸಿ ಪ್ರಕಟಿಸಿದ್ದಾರೆ, ವಿಮರ್ಶಿಸಿದ್ದಾರೆ. ಇದು ಪಠ್ಯಪುಸ್ತಕಗಳಲ್ಲಿಯೂ ಅಚ್ಚಾಗಿದೆ. ಇತ್ತೀಚೆಗೆ ಡಾ॥ ಬರಗೂರು ರಾಮಚಂದ್ರಪ್ಪನವರ ನಿರ್ದೇಶನದಲ್ಲಿ ಚಲನಚಿತ್ರವಾಗಿಯೂ ತೆರೆ ಕಂಡಿದೆ.

ಇದೇ ಆಶಯವನ್ನು ಹೊಂದಿದ ಕಥನ ಕವನವೊಂದು ತುಳು ಜಾನಪದದಲ್ಲೂ ಇದೆ. ಇದು ತುಳು ಪಾಡ್ದನ (ಪಾರ್ದನ) ರೂಪದಲ್ಲಿದೆ. ತುಳು ಜಾನಪದ ಪದ್ಯ ಸಾಹಿತ್ಯದಲ್ಲಿ ಪಾಡ್ದನಗಳದ್ದು ಸಿಂಹಪಾಲು. ಪಾಡ್ದನಗಳು ಕನ್ನಡದ ಲಾವಣಿಯನ್ನು ಹೋಲುತ್ತವೆ. ಇವೆಲ್ಲವೂ ಕಥನ ಕವನಗಳು. ಅವು ನಿರ್ದಿಷ್ಟವಾಗಿ ಛಂದೋಬದ್ಧ ವಾಗಿಲ್ಲದಿದ್ದರೂ ಲಯಬದ್ಧವಾಗಿರುತ್ತವೆ. "ಡೆನ್ನಾನ... ಡೆನ್ನಾನ... ಡೆನ್ನಾನ... ಡೆನ್ನಾನ...ಯೇ" ಎಂಬ ಆಲಾಪನೆಯಿಂದ ಪಾಡ್ದನವನ್ನೇ ಗಾಯಕರು ಹಾಡಲು ಪ್ರಾರಂಭಿಸುತ್ತಾರೆ. ಪಾಡ್ದನಗಳೆಲ್ಲ ಒಂದೇ ಧಾಟಿಯವುಗಳಲ್ಲ. ಬೇರೆ ಬೇರೆ ಧಾಟಿಯಲ್ಲಿ ಹಾಡುತ್ತಾರೆ. ಪಾಡ್ದನಗಳು ಚಿಕ್ಕ ಚಿಕ್ಕ ಕವಿತೆಗಳಲ್ಲ, ನೀಳ್ಗವನಗಳು. ಅವುಗಳಲ್ಲಿ 'ಸಿರಿ' ಪಾಡ್ದನ ಅತ್ಯಂತ ದೀರ್ಘವಾದುದು. ಉಜಿರೆಯ ಮಾಚಾರು ಗೋಪಾಲ ನಾಯ್ಕರು ಹಾಡಿದ ಸಿರಿ ಪಾಡ್ದನ ೧೫೬೮೩ ಸಾಲುಗಳನ್ನು ಹೊಂದಿವೆ. ಇದನ್ನು ಡಾ॥ ಕೆ. ಚಿನ್ನಪ್ಪ ಗೌಡರು ಸಂಗ್ರಹಿಸಿದ್ದಾರೆ. ಫಿನ್ಲೆಂಡಿನ ಪ್ರೊ॥ ಲೌರಿಹಾಂಕೋ ಅವರು ಇದನ್ನು ಇಂಗ್ಲಿಷಿನಲ್ಲಿ ವಿಮರ್ಶೆಯೊಂದಿಗೆ ಪ್ರಕಟಿಸಿದ್ದಾರೆ. 'ಕೋಟಿ ಚೆನ್ನಯ' ಮತ್ತೊಂದು ಸುದೀರ್ಘವಾದ ಪಾಡ್ದನ. ಕ್ರಿ. ಶ. ೧೮೮೬ರಲ್ಲೇ ಆಗಸ್ಟ್ ಮೆನ್ನರ್ ಎಂಬುವರು ಇದನ್ನು ಪ್ರಕಟಿಸಿದ್ದಾರೆ. ಇವೆರಡು ಪಾಡ್ದನಗಳೂ ಚಲನಚಿತ್ರಗಳಾಗಿವೆ.

ಪಾಡ್ದನಗಳಲ್ಲಿ ಭೂತದ ಕತೆಗಳೇ ಹೆಚ್ಚಾಗಿರುತ್ತವೆ. ಭೂತಕೋಲ (ಉತ್ಸವ)ದ ಸಂದರ್ಭದಲ್ಲಿ ಭೂತ ಮಾಧ್ಯಮ ಕಲಾವಿದನ ಸಹಾಯಕರು ಹಾಡುತ್ತಾರೆ. ಲೌಕಿಕ ಕತೆಗಳನ್ನು ಹೊಂದಿದ ಪಾಡ್ದನಗಳೂ ಇವೆ. ಪುರಾಣದ ಕತೆಗಳಿಗೆ ಸಂಬಂಧ ಪಟ್ಟವುಗಳೂ ಇವೆ. ಈ ರೀತಿ ವಿಷಯಕ್ಕನುಸಾರವಾಗಿ ಪಾಡ್ದನಗಳನ್ನು ಮೂರು ವಿಭಾಗಗಳನ್ನಾಗಿ ವಿಂಗಡಿಸಬಹುದು. ಪಾಡ್ದನವನ್ನು ಭೂತ ಕಟ್ಟುವಾಗ ಮಾತ್ರ ಹಾಡಬೇಕೆಂದೇನೂ ನಿರ್ಬಂಧವಿಲ್ಲ. ಯಾವಾಗಲಾದರೂ ಹಾಡಬಹುದು. ಹೆಚ್ಚಾಗಿ ಭತ್ತದ ಗದ್ದೆಯಲ್ಲಿ ನೇಜಿ (ಭತ್ತದ ಸಸಿ) ನೆಡುವಾಗ ಮಗುವನ್ನು ತೂಗುವಾಗ, ರಾತ್ರಿ ಮಕ್ಕಳನ್ನು ಮಲಗಿಸುವಾಗ ತಿಳಿದವರು ಹಾಡುತ್ತಾರೆ. 'ಕೆರೆಗೆ ಹಾರ' ಕನ್ನಡ ಪಾಡ್ದನಕ್ಕೆ ಸಂವಾದಿಯಾದ ತುಳು ಪಾಡ್ದನ 'ಬಾಲೆ ಮಾಡೆದಿ' ಅಥವಾ "ಬಾಲೆ ಚಂದ್ರಾಮರಿ" ಊಟ ಮುಗಿದ ಮೇಲೆ ಕೈ ತೊಳೆದು ಬಂದು ಎಲ್ಲರೂ ಚಪ್ಪರದೊಳಗೆ ತಮ್ಮ ತಮ್ಮ ಆಸನದಲ್ಲಿ ಕುಳಿತುಕೊಂಡರು. ವಿವಿಧ ಫಲ ವಸ್ತುಗಳನ್ನು ಸೇವಿಸಿದರು. ಕೆಲವರು ವೀಳ್ಯ ಹಾಕಿದರು.

ಅಷ್ಟರಲ್ಲಿ ಅಣೆಕಟ್ಟಿನ ಮಧ್ಯದಿಂದ ಚಂದ್ರಾಮುವಿನ ತಲೆ ಕಾಣಿಸಿತು. ಮಗಳನ್ನು ನೋಡಿದ ತಾಯಿ, "ಮಗಳೇ ನೀನೇಕೆ ಅಡಿಗರಿಗೆ ಹೋಗುತ್ತಿರುವೆ? ತಡೆದು ನಿಲ್ಲು. ಅಣ್ಣಂದಿರು ನಿನ್ನ ಬಳಿ ಬರುತ್ತಿದ್ದಾರೆ" ಎಂದು ಹಗ್ಗ ಎಸೆಯುತ್ತಾರೆ. ಹಗ್ಗವನ್ನು ಹಿಡಿದು ಮೇಲೇರಿ ಬಾ ಎಂದು ಕೂಗಿದಳು. ಅದನ್ನು ಕೇಳಿದ ಚಂದ್ರಾಮು "ಬೇಡಮ್ಮಾ ಬೇಡ, ನನ್ನನ್ನೆತ್ತ ಯಾರೂ ಬರುವುದು ಬೇಡ, ನಾನು ನನ್ನಿಚ್ಛೆಯಂತೆ ಹೋಗುತ್ತಿದ್ದೇನೆ. ನನ್ನನ್ನು ಯಾರೂ ತಡೆಯಬೇಡಿ, ಹೆಣ್ಣು ಹೆತ್ತರೆ ಆ ಮಗಳನ್ನು ಕೆರೆಯ ಏರಿಗೆ ಬಲಿ ಕೊಡುತ್ತೇನೆಂದು ನೀನೇ ಬೆರ್ಮರಿಗೆ ಹೇಳಿದ್ದಿಯಲ್ಲ. ನೀನು ಹೇಳಿದ ಹರಕೆಯನ್ನು ನಾನೇ ತೀರಿಸುತ್ತಿದ್ದೇನೆ. ನಿನ್ನ ಲೆಕ್ಕದಲ್ಲಿ ನನ್ನ ಮೇಲೆ ಒಂದು ಬುಟ್ಟಿ ಮಣ್ಣು ಹಾಕು" ಎಂದಳು. ದೇಯಿಮಾಡೆದಿ ಉಪಾಯ ಕಾಣದೆ ಕಣ್ಣೀರಿಡುತ್ತಾ ಚಂದ್ರಾಮುವಿನ ಮೇಲೆ ಬಂದು ಬುಟ್ಟಿ ಮಣ್ಣೆತ್ತಿ ಹಾಕಿದಳು. "ಅಮ್ಮ, ನನಗೆ ಸಂತೋಷವಾಯಿತು. ಅಪ್ಪನನ್ನು ಕಳುಹಿಸಿಕೊಡು" ಎಂದಳು ಚಂದ್ರಾಮು. ಅಪ್ಪ ಸೂರಪ್ಪ ಓಡಿಬಂದು "ಮಗಳೇ, ನೀನು ಬಲಿಯಾಗಬೇಡ. ಬೆರ್ಮರ ಹರಕೆ ತೀರಿಸಲು ಬೇರೆ ವ್ಯವಸ್ಥೆಯನ್ನು ನಾನು ಮಾಡಿಸುತ್ತೇನೆ" ಎಂದ. ಬೇಡಪ್ಪಾ ಬೇಡ, ಮೀನು ತಿನ್ನುವ ಆಸೆಯಿಂದ ಅಮ್ಮ ನನ್ನನ್ನು ಬಲಿಕೊಡುವುದಾಗಿ ಹೇಳಿದ್ದರಿಂದ ನಾನೇ ಆಹುತಿಯಾಗಬೇಕೇ ಹೊರತು ಬೇರೆಯವರನ್ನು ಹಾರ ಕೊಡಲಾಗುವುದಿಲ್ಲ. "ಅಪ್ಪಾ, ನೀನು ನನಗೆ ಮಾಡುವುದನ್ನೆಲ್ಲ ಮಾಡಿದ್ದೀಯ. ಮದುವೆ ಮಾಡಿಯೂ ಕೊಟ್ಟಿದ್ದೀಯ. ಇನ್ನು ನನ್ನ



ಚಿಂತೆ ಬಿಡು. ನಾನು ಮದುಮಗಳಾಗಿಯೇ ನೀನಿತ್ತ ವಸ್ತ್ರಾಭರಣ ಧರಿಸಿಕೊಂಡೇ ಬಲಿಯಾಗುತ್ತಿದ್ದೇನೆ. ಅದರಿಂದ ನನಗೆ ಸಂತೋಷವಾಗುತ್ತಿದೆ. ನೀನೂ ಸಂತೋಷಪಡು ಅಪ್ಪಾ. ಒಂದು ಬುಟ್ಟಿ ಮಣ್ಣು ನನ್ನ ತಲೆಮೇಲೆ ಹಾಕಿಬಿಡು" ಎಂದಳು. ಮಾಡರು ಕಣ್ಣೀರಿಟ್ಟುಕೊಂಡು ಒಂದು ಬುಟ್ಟಿ ಮಣ್ಣು ಸುರಿದರು. ನಂತರ ಚಂದ್ರಾಮು ಅಣ್ಣಂದಿರನ್ನು ಕರೆದಳು. ಏಳು ಜನ ಅಣ್ಣಂದಿರೂ ಬಂದರು. "ತಂಗೀ, ನಾವು ಏಳು ಜನರಿಗೆ ನೀನೊಬ್ಬಳೇ ಪ್ರೀತಿಯ ತಂಗಿ. ನೀನು ಹಾರವಾಗ ಬೇಡ" ಎಂದು ಪರಿಪರಿಯಾಗಿ ಕೇಳಿಕೊಂಡರು. "ಅಣ್ಣಂದಿರಾ, ನೀವೆಲ್ಲರೂ ನನ್ನನ್ನು ಬಹಳ ಚೆನ್ನಾಗಿ ನೋಡಿಕೊಂಡಿರಿ, ಮದುವೆ ಮಾಡಿ ಕಳುಹಿಸಿಕೊಡುತ್ತಾ ಇದ್ದೀರಿ. ಆದರೆ ನಾನಿನ್ನೂ ಕನ್ಯೆಯಾಗಿಯೇ ಇದ್ದೇನೆ. ಬೆರ್ಮರು ನನಗೆ ಬಲಿಯಾಗಲು ಅವಕಾಶ ಮಾಡಿಕೊಟ್ಟಿದ್ದಾರೆ. ನನ್ನಿಂದ ನಿಮಗೆಲ್ಲ ಒಳ್ಳೆಯದಾಗುತ್ತದೆ. ಅಣೆಕಟ್ಟು ಗಟ್ಟಿಯಾಗಿ ನಿಲ್ಲುತ್ತದೆ. ಕೆರೆಯ ನೀರು ಎಂದೂ ಬತ್ತುವುದಿಲ್ಲ. ಈ ಊರಿಗೆ ಎಂದೂ ಬರಗಾಲ ಬರುವುದಿಲ್ಲ. ಆ ಪುಣ್ಯದ ಕೆಲಸ ಮಾಡುತ್ತಿದ್ದೇನೆ. ನನ್ನ ತಲೆಯ ಮೇಲೆ ಪ್ರತಿಯೊಬ್ಬರೂ ಒಂದೊಂದು ಬುಟ್ಟಿ ಮಣ್ಣು ಹಾಕಿ ನನ್ನನ್ನ ಕಳುಹಿಸಿಕೊಡಿ" ಎಂದಳು. ಅಣ್ಣಂದಿರು ಕಣ್ಣೀರಿಡುತ್ತಾ ತಂಗಿಯ ಮಾತಿನಂತೆ ಒಂದೊಂದು ಬುಟ್ಟಿ ಮಣ್ಣು ತಂದು ಹಾಕಿದರು. ಚಂದ್ರಾಮು ಮಣ್ಣಿನಿಂದ ಮುಚ್ಚಿಹೋದಳು. ಆವರೆಗೆ ಅಶ್ರುಭರಿತ ಕಣ್ಣುಗಳಿಂದ ನೋಡುತ್ತಾ ನಿಂತಿದ್ದ ಮದುಮಗ ತಾನು ಕೂಡ ಒಂದು ಬುಟ್ಟಿ ಮಣ್ಣೆತ್ತಿ ಹಾಕಿದ. ಚಂದ್ರಮು ಕೆರೆಯ ಏರಿಗೆ ಹಾರವಾದಳು. ಊರವರೆಲ್ಲ ಸೇರಿ ಕೆರೆಯ ಏರಿಗೆ ಕಲ್ಲು, ಮಣ್ಣು ತಂದು ಹಾಕಿ ಭದ್ರಗೊಳಿಸಿದರು. ಏರಿಯ ಭದ್ರತೆಗೆ ಚಂದ್ರಾಮು ಬಲಿಯಾಗಿ ಹೋದಳು. ಮತ್ತೆಂದೂ ಕೆರೆಯ ಏರಿ ಬಿರುಕುಬಿಟ್ಟಿಲ್ಲ. ನೀರು ಬತ್ತಿಹೋಗಿಲ್ಲ. ಈ ಕಥಾನಕ ನಡೆಯಲು ಇಬ್ಬರು ಮಹಿಳೆಯರ ನಂಬಿಕೆಗಳು ಕಾರಣವಾಗುತ್ತವೆ.

ನೈಸರ್ಗಿಕ ಘಟನೆಗಳಿಗೂ ತನ್ನ ಬದುಕಿನ ವ್ಯವಹಾರಗಳಿಗೂ ನಿಕಟ ಸಂಬಂಧವಿದೆ ಎಂದು ಜಾನಪದರು ನಂಬುತ್ತಾರೆ. ಕಾಗೆಯ ಕೂಗು, ನಾಯಿಯ ಬೊಗಳುವಿಕೆ, ಹಲ್ಲಿಯ ಲೊಚಗುಟ್ಟುವಿಕೆ, ಅಂಗ ಸ್ಫುರಣ, ಹೂವಿನ ಪತನ, ಹಾವಿನ ಅಡ್ಡ ದಾಟುವಿಕೆ ಇಂತಹ ಸಾವಿರಾರು ಸಂಗತಿಗಳು ಅವರ ಮಟ್ಟಿಗೆ ನಿರರ್ಥಕಗಳಲ್ಲ. ಅವರು ಅವುಗಳನ್ನು ಶಕುನಗಳೆಂದು ಭಾವಿಸುತ್ತಾರೆ. ಅವು ಎಲ್ಲಿ, ಹೇಗೆ, ಯಾವ ಸಂದರ್ಭದಲ್ಲಿ ನಡೆಯಿತೆಂಬುದನ್ನು ಪರಿಗಣಿಸಿ ತಮ್ಮ ಅನುಭವಗಳ ಸಂಕಲಿತ ಜ್ಞಾನದಿಂದ ಅದಕ್ಕೊಂದು ಅರ್ಥ ಕಲ್ಪಿಸುತ್ತಾರೆ. ಪ್ರಕೃತಿಯ ಆಗುಹೋಗುಗಳಿಗೆಲ್ಲ ಕಾರಣವೆನಿಸಿದ ಈ ದೈವೀ ಸಂಬಂಧಗಳನ್ನು ಅವರು ಅತಿಮಾನುಷ ಶಕ್ತಿಗಳ ಪ್ರಭಾವದಿಂದಲೇ ನಡೆಯುತ್ತವೆ ಎಂಬುದಾಗಿ ಬಗೆದುಕೊಳ್ಳುತ್ತಾರೆ. ಕಾರ್ಯ–ಕಾರಣಗಳ ಹಿನ್ನೆಲೆಯಲ್ಲಿ ಬಂದ ಪರಂಪರಾಗತವಾದ ಜ್ಞಾನ, ಸುದೀರ್ಘಕಾಲದ ಅನುಭವ, ಕಾಲ್ಪನಿಕ ಆಲೋಚನೆ ಹಾಗೂ ಅತೀಂದ್ರಿಯ ವ್ಯವಹಾರಗಳ ಫಲವಾಗಿ ಮೂಡಿದ ಪ್ರಜ್ಞೆಯೇ ನಂಬಿಕೆಗಳು. ಇವು ಪ್ರಜ್ಞಾಪೂರ್ವಕವಾಗಿಯೋ, ಅಪ್ರಜ್ಞಾಪೂರ್ವಕವಾಗಿಯೋ ಪೀಳಿಗೆಯಿಂದ ಪೀಳಿಗೆಗೆ ಹರಿದುಬಂದ ಸಾಮಾಜಿಕ ಹಾಗೂ ಮನೋವೈಜ್ಞಾನಿಕ ಚಿಂತನೆಗಳ ಮೊತ್ತ.

ಹೊಸ ಸೇತುವೆ, ಇಲ್ಲವೇ ಅಣೆಕಟ್ಟು ಕಟ್ಟುವಾಗ ಅದಕ್ಕೆ ನರಬಲಿ ಕೊಟ್ಟರೆ ಅದು ಭದ್ರವಾಗಿ ನಿಲ್ಲುತ್ತದೆ ಎಂಬುದು ಪರಂಪರಾಗತವಾಗಿ ಬಂದ ನಂಬಿಕೆ. ಈ ಸಮಷ್ಟಿ ನಂಬಿಕೆಯ ಕಾರಣದಿಂದಲೇ ಹಿಂದಿನ ಕಾಲದಲ್ಲಿ ಯಾವ ಕಡೆಯಲ್ಲಾದರೂ ಸೇತುವೆ ಇಲ್ಲವೇ ಅಣೆಕಟ್ಟು ನಿರ್ಮಾಣಗೊಳ್ಳುತ್ತಿದ್ದರೆ ಅದರ ಪಕ್ಕದಿಂದ ಸಂಜೆಯಾದ ಬಳಿಕ ಜನಸಂಚಾರ ಕಡಿಮೆಯಾಗುತ್ತಿತ್ತು. ಮುಖ್ಯವಾಗಿ ಮಹಿಳೆಯರು ಆ ಬದಿಯಿಂದ ಹೋಗುತ್ತಿರಲಿಲ್ಲ. ಮಕ್ಕಳನ್ನು ಹೋಗಲು ಬಿಡುತ್ತಿರಲಿಲ್ಲ. ಸೂರಾಲು ಅಣೆಕಟ್ಟು ಭದ್ರವಾಗಿ ನಿಲ್ಲದಿರಲು ಅದಕ್ಕೆ ನರಬಲಿ ಕೊಡದಿರುವುದೇ ಕಾರಣವೆಂಬುದು ಸೂರಾಲು ಜನರ ಸಮಷ್ಟಿ ಪ್ರಜ್ಞೆಯಾಗಿತ್ತು. ಈ ನಂಬಿಕೆ ದೇಯಿ ಮಾಡೆದಿಯಲ್ಲೂ ಸುಪ್ತವಾಗಿತ್ತು. ಈ ಭಯದಿಂದಲೇ ಕೆರೆಯ ಮೀನುಗಳನ್ನು ಯಾರೂ ಹಿಡಿಯುವುದಿಲ್ಲ ಎಂಬ ಊಹನೆಯೂ ಅವಳಲ್ಲಿತ್ತು.



ನಮ್ಮಲ್ಲಿ ಡೈವೋರ್ಸ್ ಪ್ರಶ್ನೆಯೇ ಇಲ್ಲ ! ನಾವು ಮದ್ವೆಯಾದದ್ದೆ ಒಂದ್ವರ್ಷದ ಬಾಂಡ್ ಮಾಡಿ !

ಆದರೂ ಗರ್ಭಿಣಿಯಾದ ಆಕೆಗೆ ಕೆರೆಯ ನೀರಿಗಿಳಿದಾಗ ಆಕೆಯ ಕಾಲುಗಳ ಸುತ್ತ ಜಾಡು ಸುತ್ತಿರುವ ಹೊಳೆಯುವ ದೊಡ್ಡ ದೊಡ್ಡ ಮೀನುಗಳನ್ನು ಕಂಡು ಆಕೆಗೆ ತನ್ನ ಆಸೆಯನ್ನು ತಡೆದುಕೊಳ್ಳಲು ಸಾಧ್ಯವಾಗಲಿಲ್ಲ. ಬಸಿರೆಂದರೆ ಹೊಸತೊಂದು ಜೀವಕಟ್ಟುವ ಕೆಲಸ, ಪುಟ್ಟ ಜೀವವನ್ನು ರೂಪಿಸಲು ಬೇಕಾಗುವ ಸಕಲ ವಸ್ತುಗಳನ್ನು ಹೊಂದಿಸಿಕೊಳ್ಳುವ ಹೊಣೆ ತಾಯಿಯ ಮನಸ್ಸು ಮತ್ತು ದೇಹದ್ದು. ಅದಕ್ಕಾಗಿ ತಾಯಿ ಸದಾ ಹೆಣಗಾಡುತ್ತಿರುತ್ತಾಳೆ. ತನ್ನ ದೇಹ ಮತ್ತು ಮಗುವಿನ ದೇಹ – ಹೀಗೆ ಎರಡು ದೇಹಗಳಿಗೆ ಬೇಕಾದ ಪೋಷಕಾಂಶಗಳು ಆಕೆಗೆ ಪೂರೈಕೆಯಾಗ ಬೇಕು. ಆಕೆಯ ದೇಹಕ್ಕೆ ಮತ್ತು ಹೊಟ್ಟೆಯಲ್ಲಿರುವ ಭ್ರೂಣದ ಬೆಳವಣಿಗೆಗೆ ಬೇಕಾದ ಪೋಷಕಾಂಶಗಳನ್ನು ಆಕೆಯ ದೇಹ ತಾನಾಗಿ ಬಯಸುತ್ತದೆ. ಬೇಡವಾದ ಆಹಾರ ವಸ್ತುಗಳನ್ನು ದೇಹ ಸ್ವೀಕರಿಸುವುದಿಲ್ಲ. ಗರ್ಭಿಣಿ ಬಯಸಿದ ವಸ್ತುಗಳನ್ನು ತಿನ್ನದೇ ಹೋದರೆ ಅಂಗವಿಕಲ ಮಗು ಹುಟ್ಟುತ್ತದೆ ಎಂಬ ಜಾನಪದೀಯ ನಂಬಿಕೆಯೂ ಗರ್ಭಿಣಿಯರಲ್ಲಿ ಭಯವನ್ನು ಹುಟ್ಟಿಸುತ್ತದೆ. ಅಷ್ಟೇ ಅಲ್ಲ, ಗರ್ಭಿಣಿಯರ ಮನಸ್ಸು ದುರ್ಬಲವಾಗಿರುತ್ತದೆ. ಈ ಎಲ್ಲ ಕಾರಣಗಳಿಂದ ಕೆರೆಯ ಮೀನುಗಳನ್ನು ಹಿಡಿದು ಕೊಲ್ಲಬಾರದೆಂಬ ತಿಳಿವಳಿಕೆ ಇದ್ದರೂ ಆಕೆ ಮೀನುಗಳನ್ನು ಕೊಡದಲ್ಲಿ ಬರಿಸಿಕೊಂಡು ಕೊಂಡೊಯ್ದು ಸಾರು ಮಾಡಿ ತಿನ್ನುತ್ತಾಳೆ.

ತಾನು ಹೆಣ್ಣು ಹೆತ್ತರೆ ಮಗಳನ್ನು ಕೆರೆ ಕಟ್ಟೆಗೆ ಬಲಿ ಕೊಡುತ್ತೇನೆ ಎಂದು ಭ್ರಮಾತ್ಮಕವಾಗಿ ಮೀನುಗಳಿಗೆ ಮಾತುಕೊಡಲು ಇನ್ನೊಂದು ಕಾರಣವಿರುತ್ತದೆ. ಆಕೆಯಿಂದ ಭಾಷೆ ಪಡೆದ ಮೀನುಗಳು ಆಕೆ ಹೆರುವ ಮೊದಲೇ ಸತ್ತುಹೋಗಿರುತ್ತವೆ. ಬದುಕಿ ಉಳಿದ ಇತರ ಮೀನುಗಳು ಸಹ ಮಗಳು ದೊಡ್ಡವಳಾಗುವವರೆಗೆ ಬದುಕಿ ಉಳಿಯಲಾರವು. ಮೀನುಗಳ ಹೊರತಾಗಿ ಆಕೆಯ ಭಾಷೆಯನ್ನು ಉಳಿದವರ್‍ಯಾರೂ ಕೇಳಿಲ್ಲ. ಈ ಚತುರತೆ ಆಕೆಯ ಮನಸ್ಸಿನಲ್ಲಿ ಹೊಳೆದು ಆಕೆಯ ಮನಸ್ಸಿನಲ್ಲಿ ಸುಪ್ತವಾಗಿದ್ದ ಅಪರಾಧಿ ಪ್ರಜ್ಞೆಯನ್ನು ನಾಶಗೊಳಿಸುತ್ತದೆ. ಇದನ್ನು ಮನೋವಿಜ್ಞಾನದಲ್ಲಿ ರಕ್ಷಣಾ ತಂತ್ರವೆನ್ನುತ್ತಾರೆ. ಎಲ್ಲದ್ದಕ್ಕೂ ಆಕೆಯ ಮನಸ್ಸಿನಲ್ಲಿ ಮೂಡಿದ ಅತ್ಯಾಸೆಯೇ ಕಾರಣ.

ದೇಯಿ ಮಾಡೆದಿಯ ಅಮಾಯಕತೆ ಈ ರೀತಿಯದ್ದಾದರೆ ಅವಳ ಮಗಳು ಚಂದ್ರಾಮುಳದ್ದು ಇನ್ನೊಂದು ರೀತಿಯ ಅಮಾಯಕತೆ. ಅಣೆಕಟ್ಟಿನ ಭದ್ರತೆಗಾಗಿ ಬಲಿಯಾಗಬೇಕೆಂಬ ವಿಷಯವನ್ನು ಆಕೆಗೆ ಯಾರೂ ತಿಳಿಸಿಲ್ಲ. ಆಕೆಯ ಅಪ್ಪ–ಅಮ್ಮ ಮಾತನಾಡುತ್ತಿದ್ದಾಗ ಆಕೆ ಕದ್ದು ಕೇಳಿದ ವಿಷಯವದು. ಅದನ್ನವಳು ಪಾಲಿಸಬೇಕೆಂದು ಯಾರ ಒತ್ತಡವೂ ಇದ್ದಿರಲಿಲ್ಲ. ಹಾಗಾಗಿ ತಿರಸ್ಕರಿಸಿಬಿಡಬಹುದಿತ್ತು. ಆದರೆ ಅವಳು ಹಾಗೆ ಮಾಡುವುದಿಲ್ಲ. ಆಕೆಯನ್ನು ಪಾಪಪ್ರಜ್ಞೆ ಕಾಡುತ್ತದೆ. ತನ್ನ ತಾಯಿ ಕೊಟ್ಟ ಮಾತಿನ ಮೇರೆಗೆ ತಾನು ನಡೆದುಕೊಳ್ಳದೆ ಇದ್ದರೆ ತನ್ನ ತಾಯಿ–ತಂದೆಗೆ ಕೇಡು ಉಂಟಾಗಬಹುದು. ಅಣೆಕಟ್ಟು ಒಡೆದುಹೋಗಿ ಊರಿಗೆ ತೊಂದರೆಯಾಗಬಹುದು ಎಂಬುದಾಗಿ ಆಕೆ ಭಾವಿಸಿಕೊಳ್ಳುತ್ತಾಳೆ.

ಲೇಖಕಿ ಡಾ॥ ವಿನಯಾ ಒಕ್ಕುಂದ ಅವರ ಮಾತಿನಲ್ಲಿ ಹೇಳುವುದಾದರೆ :

ಮಹಿಳೆಯರ ಘನತೆಯನ್ನು ಹಲ್ಲೆಗೀಡುಮಾಡುವ ಬಹು ದೊಡ್ಡ ವಲಯವೆಂದರೆ ಧರ್ಮ ಮತ್ತು ಧರ್ಮಶಾಸ್ತ್ರಗಳು. ಪ್ರತಿಯೊಂದು ಧಾರ್ಮಿಕ ಕಟ್ಟುಪಾಡುಗಳು. ನೈತಿಕತೆ ಹೆಂಗಸರನ್ನು ತಮ್ಮ ಮುಖಗಳನ್ನಾಗಿ ಪ್ರತಿಪಾದಿಸುತ್ತದೆ. ಯಾವ ಹೆಂಗಸು ಧಾರ್ಮಿಕ ಕಟ್ಟುಪಾಡುಗಳಿಂದ ಶೋಷಿತಳಾಗಿರುತ್ತಾಳೋ ಅವಳನ್ನೇ ಅದನ್ನು ಕಾಪಾಡುವ ವಕ್ತಾರರನ್ನಾಗಿಯೂ ಬದಲಾಯಿಸಲಾಗುತ್ತದೆ. ಇಲ್ಲಿ ಚಂದ್ರಾಮುವನ್ನು ಯಾರೂ ಒತ್ತಾಯಪಡಿಸುವುದಿಲ್ಲ. ಆದರೆ ರಕ್ತಗತವಾಗಿ ಬಂದ ಧಾರ್ಮಿಕ ಕಟ್ಟುಪಾಡುಗಳ ಪ್ರಜ್ಞೆ ಅಮಾಯಕಳಾದ ಹೆಣ್ಣು ಬಾಲೆ ಚಂದ್ರಾಮು ಅಣೆಕಟ್ಟೆಗೆ ಹಾರವಾಗಲು ಕಾರಣವಾಯಿತು.

**ಡಾ॥ ಪಾಲ್ತಾಡಿ ರಾಮಕೃಷ್ಣ ಆಚಾರ್**
'ನೆಲೆ', ಬೆದ್ರಾಳ, ಅಂಚೆ : ದರ್ಬೆ – ೫೭೪ ೨೦೨
ಪುತ್ತೂರು, ದಕ್ಷಿಣ ಕನ್ನಡ



# ರಾಷ್ಟ್ರಕವಿ ಕುವೆಂಪು ಚಿತ್ರಿಸಿದ 'ರೈತನ ದೃಷ್ಟಿ'

**ಮೊದಲಿನಿಂದಲೂ ಕುವೆಂಪು ತಮ್ಮ ರಕ್ತಗತ ನಿರಂಕುಶಮತಿಗೆ ಶ್ರುತಿ ಹಿಡಿದು ಹಾಡಿಕೊಂಡು ಬೆಳೆದವರು, ಮುಕ್ತ ಸಶಕ್ತ ಚಿಂತನೆಯ ನಿಲುವು ತಳೆದವರು, ಸರ್ವೋದಯದ ಪರಿಕಲ್ಪನೆಯಲ್ಲಿ ಅಚಲ ವಿಶ್ವಾಸವಿರಿಸಿಕೊಂಡು ಸಮನ್ವಯ ಹಾಗೂ ಸರ್ವಸಮಭಾವವನ್ನು ಕೊನೆಯವರೆಗೂ ಉಳಸಿಕೊಂಡವರು. ಅಂತೆಯೇ, ದೀನ–ದರಿದ್ರರ ಹಾಗೂ ಮೈಮುರಿ ದುಡಿದೂ ಅರೆಹೊಟ್ಟೆಯ ಮೇಲೆ ದಿನಗಳೆವವರ ರಕ್ತ ಹೀರಿ ಕೊಬ್ಬುವ ಬಲವುಳ್ಳವರ ಶೋಷಕವೃತ್ತಿಯ ಬಗ್ಗೆ ಸದಾ ಹಲ್ಲು ಮಸೆಯುವವರು. ಇಂಥ ಶೋಷಿತ ವರ್ಗಕ್ಕೆ ಸೇರಿದ ಬಡರೈತರ ಕುರಿತು ಕವಿಗೆ ಅಪಾರ ಸಹಾನುಭೂತಿ, ಕಕ್ಕುಲ್ಲಾತಿ ಮಾತ್ರವಲ್ಲ, ಇಂಥ ಜನಸಮುದಾಯದ ಪರವಾಗಿ ದನಿಯೆತ್ತಬಲ್ಲವರಾದರೂ, ತಮ್ಮ ಸಾಮಯಿಕ ಜವಾಬುದಾರಿಯನ್ನು ಮರೆತು 'ಹೆಣ್ಣು ಸೋಬಾನೆ'ಗಳನ್ನು ಹಾಡುವುದರಲ್ಲಿ ಕಾಲ ಕಳೆಯುವ ಕವಿಗಳ ಕುರಿತು ಸಿಡಿದೇಳುವವರು. ಇದೀಗ ನಾವು ಅವಲೋಕಿಸಿದ 'ಕ್ರಾಂತಿಕಾಳ' ಸುನೀತವು ರೈತರ ಹಾಗೂ ಹೊಟ್ಟೆಗೆ ಅನ್ನವಿಲ್ಲದೆ ಸಾಯುವ ಬಡಜನರ ಕುರಿತಾಗಿ ಕುವೆಂಪು ಅವರ ನಿತಾಂತ ಕಳಕಳಯನ್ನು ಬಲು ಪ್ರಖರವಾದ ಪದಗಳಲ್ಲಿ ಅಭಿವ್ಯಕ್ತಿಸಿದ ಒಂದು ಸಶಕ್ತ ದೃಷ್ಟಾಂತವಾಗಿದೆ.**

**ಬಿ. ಎ. ಸನದಿ**

*ಕ್ರಾಂತಿಕಾಳಿ ಕಠಾರಿಯಂ ನನ್ನೆದೆಗೆ ಕುರಿತು*
*ಝಳಪಿಸುತೆ, ಬದ್ಧಭ್ರುಕುಟಿ ಕೋಪದಲಿ ನಿಂತು,*
*ದಂಷ್ಟ್ರ ಘರ್ಷಣ ರವಂ ಪೊಣ್ಮೆಗಜರಿದಳಿಂತು :*
*ಓ ದ್ರೋಹಿ ಕವಿಯೆ, ನಿನಗಿತ್ತಾಣತಿಯ ಮರೆತು*
*ಕ್ಲೀಬತನದಲಿ ಹೆಣ್ಣು ಸೋಬಾನೆಗಳ ಹಾಡಿ*
*ಪಾಳ್ಗೆಯ್ದೆ ಕಜ್ಜಮಂ! ಶುಕ, ಪಿಕ, ವಸಂತ, ಲತೆ*
*ಮುಂಗುರುಳು, ತಂಗಾಳಿ, ದೊರೆಗಿರೆಗಳಜ್ಜಿ ಕಥೆ*
*ಬೆಳ್ದಿಂಗಳೆಂಬುವಂ ನೂಕಾಚೆ, ಹೆಂಬೇಡಿ !*
*ಬಡತನಂ, ಗೊಬ್ಬರಂ, ಕತ್ತಿ, ಗುದ್ದಲಿ, ಹಾರೆ*
*ಬೆವರು ನೆತ್ತರಗಳ್ಂ ಗಾನಗೈವುದು ನಿನ್ನ*
*ಕರ್ತವ್ಯವಿಂದು ಹಾ ! ಹೊಟ್ಟೆಗಿಲ್ಲದೆ ಅನ್ನ*
*ಬಡ ಜನರು ಸಾಯುತಿರೆ, ರಸ ಗಂಧವನು ತೋರೆ*
*ತಣಿವಹುದೆ ? ಕ್ರಾಂತಿಕಾಳಿಯು ನಾನು, ಕೈ ಬೀಸಿ*
*ಕರೆಯೆ ಬಾ, ಪೂಜೆಗೈ ಹೃದಯರಕ್ತವ ಸೂಸಿ !*

– ಇದು ನಮ್ಮ ಮಹಾಕವಿ ಕುವೆಂಪು ಅವರೊಮ್ಮೆ ತಮ್ಮ ಕಾವ್ಯದ 'ಕ್ರಾಂತಿಕಾಳಿ'ಯೂದಿದ ಪರಿ. ಸುನೀತದ ಬಿಗಿ ಬಂಧದಲ್ಲಿ ತಮ್ಮ ಬಂಡಾಯಪ್ರವೃತ್ತಿಗೆ ಗಂಡುದನಿಯಿತ್ತ ಅಪರೂಪದ ಪರಿ.

ಮೊದಲಿನಿಂದಲೂ ಕುವೆಂಪು ತಮ್ಮ ರಕ್ತಗತ ನಿರಂಕುಶಮತಿಗೆ ಶ್ರುತಿ ಹಿಡಿದು ಹಾಡಿಕೊಂಡು ಬೆಳೆದವರು, ಮುಕ್ತ ಸಶಕ್ತ ಚಿಂತನೆಯ ನಿಲುವು ತಳೆದವರು, ಸರ್ವೋದಯದ ಪರಿಕಲ್ಪನೆಯಲ್ಲಿ ಅಚಲ ವಿಶ್ವಾಸವಿರಿಸಿಕೊಂಡು ಸಮನ್ವಯ ಹಾಗೂ ಸರ್ವಸಮಭಾವವನ್ನು ಕೊನೆಯವರೆಗೂ ಉಳಿಸಿಕೊಂಡವರು. ಅಂತೆಯೇ, ದೀನ–ದರಿದ್ರರ ಹಾಗೂ ಮೈಮುರಿ ದುಡಿದೂ ಅರೆಹೊಟ್ಟೆಯ ಮೇಲೆ ದಿನಗಳೆವವರ ರಕ್ತ ಹೀರಿ ಕೊಬ್ಬುವ ಬಲವುಳ್ಳವರ ಶೋಷಕವೃತ್ತಿಯ ಬಗ್ಗೆ ಸದಾ ಹಲ್ಲು ಮಸೆಯುವವರು. ಇಂಥ ಶೋಷಿತ ವರ್ಗಕ್ಕೆ ಸೇರಿದ ಬಡರೈತರ ಕುರಿತು ಕವಿಗೆ ಅಪಾರ ಸಹಾನುಭೂತಿ, ಕಕ್ಕುಲ್ಲಾತಿ ಮಾತ್ರವಲ್ಲ, ಇಂಥ ಜನಸಮುದಾಯದ ಪರವಾಗಿ ದನಿಯೆತ್ತಬಲ್ಲವರಾದರೂ, ತಮ್ಮ ಸಾಮಯಿಕ ಜವಾಬುದಾರಿಯನ್ನು ಮರೆತು 'ಹೆಣ್ಣು ಸೋಬಾನೆ'ಗಳನ್ನು ಹಾಡುವುದರಲ್ಲಿ ಕಾಲ ಕಳೆಯುವ ಕವಿಗಳ ಕುರಿತು ಸಿಡಿದೇಳುವವರು. ಇದೀಗ ನಾವು ಅವಲೋಕಿಸಿದ 'ಕ್ರಾಂತಿಕಾಳಿ' ಸುನೀತವು ರೈತರ ಹಾಗೂ ಹೊಟ್ಟೆಗೆ ಅನ್ನವಿಲ್ಲದೆ ಸಾಯುವ ಬಡಜನರ ಕುರಿತಾಗಿ ಕುವೆಂಪು ಅವರ ನಿತಾಂತ ಕಳಕಳಿಯನ್ನು ಬಲು ಪ್ರಖರವಾದ ಪದಗಳಲ್ಲಿ ಅಭಿವ್ಯಕ್ತಿಸಿದ ಒಂದು ಸಶಕ್ತ ದೃಷ್ಟಾಂತವಾಗಿದೆ. ಇದು ೧೯೩೦ರ ಮೊದಲ 'ಮಾಸದಷ್ಟು' ಹಿಂದೆ ಅವರು ಬರೆದ ಪದ್ಯ! ಅದೇ ಅವಧಿಯಲ್ಲಿ, ಅದೇ ಬಂಡಾಯಪ್ರವೃತ್ತಿಯ ಗಡಸು ಧಾಟಿಯಲ್ಲಿ ಬರೆದ ಇನ್ನೊಂದು ಸುನೀತ

'ಬೆಕ್ಕು–ಇಲಿ'ಯೂ ಇಲ್ಲಿ ಪ್ರಸ್ತುತವೆನಿಸುತ್ತದೆ: ಅದರ ಕೊನೆಯ ಭಾಗ ಹೀಗಿದೆ:

*ಊರಿನ ಕೊಳೆಯನೆಲ್ಲ ತೊಳೆವ ನಿನಗೆಯೆ ತೊಳೆಯೆ*
*ನೀರಿಲ್ಲ, ಓ ತೋಟಿ! ಹಣವಂತರಿಗೆ ತೊಟ್ಟಿ*
*ಮನೆಗಳನು ಕಟ್ಟುವ ನಿನಗೆ ಮಲಗೆ ಬಡಹಟ್ಟಿ*
*ಗತಿಯಿಲ್ಲ, ಓ ಕೂಲಿಕಾರ! ಪೈರನು ಬೆಳೆಯೆ*
*ನೀನು, ಲೋಕಕೆ ಕೂಳು; ಆದರುಣ್ಣಲು ನಿನಗೆ*
*ಕಾಳಿಲ್ಲ, ಓ ರೈತ! ತಿಂದು ಧನಿಕರ ಬುತ್ತಿ*
*ತೇಗುತಿದೆ; ಬಡಜನರೊ ಹೊಟ್ಟೆ ಬೆನ್ನಿಗೆ ಹತ್ತಿ*
*ನರಳಿ ಹೊರಳುತ್ತುರುಳುತಿಹರು ಜವನ ಮನೆಗೆ.*

– ಓದುಗನ ಎದೆ ತಟ್ಟುವ ಈ ಪದ್ಯದಲ್ಲಿ ಬೆವರು ಹರಿಸಿ ದುಡಿವವರ ಹಾಗೂ ಕುಳಿತುಂಬುವವರ ಸ್ಥಿತಿ–ಗತಿಗಳ ವಿಪರ್ಯಾಸದ ವಿಷಾದವು ಸ್ಪಷ್ಟವಾಗಿ ಬಿಂಬಿಸಲ್ಪಟ್ಟಿದೆ. ತೋಟಿಗ, ಕಟ್ಟಡದ ಕೆಲಸಗಾರ, ಕೂಲಿಕಾರ, ರೈತರೇ ಅಲ್ಲದೆ, ಶ್ರೀಸಾಮಾನ್ಯರಾದಿಯಾಗಿ ಹೆಜ್ಜೆಹೆಜ್ಜೆಗೆ ಬಲವುಳ್ಳವರ ತುಳಿತಕ್ಕೊಳಗಾಗುವ ಬಡಜನರ ದಾರುಣ ಪರಿಸ್ಥಿತಿಗೆ ಕೈಗನ್ನಡಿ ಈ ಕವಿತೆ. ಕುವೆಂಪು ಅವರು ತಮ್ಮ ಬರವಣಿಗೆಯ ಆರಂಭ ಕಾಲದಿಂದಲೂ ದೀನ–ದರಿದ್ರರ, ಶೋಷಿತರ ಹಾಗೂ ಸಮಬಾಳಿನ ಅವಕಾಶಗಳಿಂದ ವಂಚಿತರ ಪರವಾಗಿ ದನಿಯೆತ್ತುತ್ತಲೇ ಬಂದವರು. ಅವರ ಆರಂಭಿಕ ಕಾವ್ಯವಾಣಿಯ ತೀಕ್ಷ್ಣತೆಗೆ ಕ್ರಾಂತಿಕಾಳಿಯೇ ಒಂದು ಸಮರ್ಪಕ ಮತ್ತು ಪರಿಣಾಮಕಾರಿ ರೂಪಕ; ಅವರು ಅನವರತವೂ ಅನುಸರಿಸಿದ ಸರ್ವೋದಯ ತತ್ವದ ಅತ್ಯಂತ ಸೂಕ್ತ ಪರಿಪೋಷಕ. ಅವರ ಪ್ರಸಿದ್ಧ ಕವಿತೆ 'ಕಲ್ಕಿ'ಯಂತೂ ಸಮಾಜದಲ್ಲಿ ಬಿದ್ದವರಿಗೂ, ಎದ್ದವರಿಗೂ ಎದೆ ನಡುಗಿಸುವ ಜೋಡುಧಾರೆಯ ಸಂದೇಶವನ್ನೇ ನೀಡಿದ್ದು ಕನ್ನಡಿಗರೆಲ್ಲ ತಿಳಿದ ಸಂಗತಿಯೇ ಆಗಿದೆ:

*ಬಡವರ ಬಡಬಾಗ್ನಿಯು ಎದ್ದು*
*ಗುಡಿಸಿಲುಗಳಿಗೇ ಬೆಂಕಿಯು ಬಿದ್ದು*
*ಧಗ ಧಗ ಧಗ ಧಗ ಹೊತ್ತಿದುದು*
*ಭುಗಿ ಭುಗಿಲೆನ್ನುತ ಮುತ್ತಿದುದು!*
*ಮುಗಿಲಿನವರೆಗೂ ಬಾನಿನವರೆಗೂ*
*ದಿಕ್ಕು ದಿಕ್ಕುಗಳ ಜುಟ್ಟಿನವರೆಗೂ*

## ಅಭಿನಂದನೆ...

ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರು, ಹಿರಿಯ ಬರಹಗಾರರು, ಚಿಂತಕರು ಆಗಿರುವ ಗೊ. ರು. ಚನ್ನಬಸಪ್ಪ ಅವರಿಗೆ ಪ್ರತಿಷ್ಠಿತ 'ರಾಷ್ಟ್ರೀಯ ಬಸವ ಪುರಸ್ಕಾರ' ಲಭಿಸಿದೆ. ಇವರಿಗೆ 'ನವಕರ್ನಾಟಕ' ಹಾಗೂ 'ಹೊಸತು' ಬಳಗದ ಅಭಿನಂದನೆಗಳು.

*ಬಡವರ ಬೆಂಕಿಯು ನಾಲಿಗೆ ಚಾಚಿ*
*ಶ್ರೀಮಂತರನಪ್ಪಿತು ಬಾಚಿ!*

– ಹೀಗೆ ಬಡವರ ಒಡಲ ಕಳವಳದ ರುದ್ರವಾಣಿ ಈ 'ಕಲ್ಕಿ' ಕವನದಲ್ಲಿ ಸುದೀರ್ಘವಾಗಿ ಭೋರ್ಗರೆದು ಹರಿದದ್ದು ಕುವೆಂಪು ಅವರ ಬಿಸಿನೆತ್ತರಿನ ಪ್ರಾಯಸ್ಥ ಮನಸ್ಸಿನ ತೀಕ್ಷ್ಣ ಅನಿಸಿಕೆಗಳ ದ್ಯೋತಕವೇ ಆಗಿದೆ. ಇದು ಕ್ರಾಂತಿಕಾರಿ ಕವಿಯೊಬ್ಬನ ಒಡಲಲ್ಲಿ ಕುದಿವ ಕೆಂಡದ ಕಿಡಿಗಳನ್ನುದುರಿಸಿ ಎದೆಭಾರವಿಳಿಸಿ ಕೊಳ್ಳುವ ರೀತಿ. 'ಹೆಮ್ಮೆಗೆ ಕೂಳನು ಬಿಸುಡುವ' ಜನರಿರುವ ಸಮಾಜದಲ್ಲೇ 'ಹೊಟ್ಟೆಗೆ ಇಲ್ಲದೆ ಕೊರಗುವ' ಜನರಿರುವುದನ್ನು ಕಂಡು ಇಂಥ ಕವಿಜೀವ ತಣ್ಣಗಿರಲು ಸಾಧ್ಯವೇ? ಸಾಧುವೆ?? ಕುವೆಂಪು ಅವರು ಇಂಥ ವಿಷಮ ಸ್ಥಿತಿಯ ಸಮಾಜವ್ಯವಸ್ಥೆಯನ್ನು ಕಂಡು ಕನಲಿದ್ದು ಅವರ ಹಲವೊಂದು ಕವಿತೆಗಳಲ್ಲಿ ಧಾಳಾಗಿ ಕಂಡು ಬರುತ್ತದೆ. ಕುವೆಂಪು ಅವರ ಸುಂದರ ಕಥನ ಕವನಗಳಲ್ಲೊಂದಾದ 'ಕರಿ ಸಿದ್ಧ'ನೊಳಗಂತೂ ಅವರು ಬಡವರ ಪರವಾಗಿ ಭಾರತದ ಸಾಂಸ್ಕೃತಿಕ ಇತಿಹಾಸಕ್ಕೇ ಸುರಂಗ ಹೊಡೆದುದನ್ನು ಇಲ್ಲಿ ಸ್ಮರಿಸಬಹುದು.

ಕುವೆಂಪು ಅವರು ಜನ್ಮತಃ 'ನಿರಂಕುಶಮತಿ'ಯಾಗಿ ಬೆಳೆದವರು. ತಮ್ಮ ಪ್ರಾಯಸ್ಥ ದಿನಗಳಿಂದಲೂ ನಮ್ಮ ದೇಶದಲ್ಲಿ, ವಿವಿಧ ಹಂತಗಳಲ್ಲಿ, ವಿವಿಧ ರೂಪಗಳಲ್ಲಿ ಬಡವರ ಮೇಲೆ ನಡೆಯುವ ಶೋಷಣೆಯ ಮಂತ್ರ–ತಂತ್ರಗಳನ್ನು ನೋಡಿ ಸಿಡಿಮಿಡಿಗೊಳ್ಳುವ ಸ್ವಭಾವದವರು. ಧನದಾಹಿ ಶೋಷಕರ ಮಾತಂತೂ ಸರಿ, ಕುವೆಂಪು ಅವರು ಇತಿಹಾಸದ ವಿವಿಧ ಹಂತಗಳಲ್ಲಿ ನಮ್ಮ ದೇಶವನ್ನು ಆಳುತ್ತ ಬಂದ ಸಾಮ್ರಾಜ್ಯಶಾಹಿ, ವಸಾಹತುಶಾಹಿ ಹಾಗೂ ಅಧಿಕಾರಶಾಹಿಗಳ ಕುರಿತಾಗಿಯೂ ತುಂಬ ತೀಕ್ಷ್ಣವಾಗಿ ಪ್ರತಿಕ್ರಿಯಿಸುತ್ತ ಬಂದವರು. ಬಡವರ ಉದ್ಧಾರದ ಬಗ್ಗೆ ಪೊಳ್ಳು ಭರವಸೆಗಳನ್ನು ನೀಡಿ ತಮ್ಮ ಬೇಳೆ ಬೇಯಿಸಿ ಕೊಳ್ಳುವ ರಾಜಕಾರಣಿಗಳ ಪ್ರತಿರೋಧದಲ್ಲಿ ಕುವೆಂಪು ಯಾವಾಗಲೂ ಪ್ರಜಾಕೋಟಿಯ ಪಕ್ಷಪಾತಿಯಾಗಿಯೇ ದನಿಯೆತ್ತಿದವರು. ತನ್ನ ಬೆವರು ಹರಿಸಿ, ಹೊಲಗದ್ದೆಗಳಲ್ಲಿ ಉತ್ತಿ, ಬಿತ್ತಿ, ಬೆಳೆ ತೆಗೆದು ಜನಕೋಟಿಯ ಹೊಟ್ಟೆಗಾಧಾರವಾಗಿ ನಿಲ್ಲುವ 'ನೇಗಿಲಯೋಗಿ'ಯ ಕುರಿತಾಗಿ ಕುವೆಂಪು ಚಿಂತಿಸಿದ ಹಾಗೆ ಆಧುನಿಕ ಕನ್ನಡದ ಬೇರಾವ ಕವಿಯೂ ಚಿಂತಿಸಿದ ಉದಾಹರಣೆಯಿಲ್ಲವೆಂದೇ ಹೇಳಬಹುದು! ಅದು ಬರಿಯ ಭಾವುಕ ಚಿಂತನೆಯಾಗಿರದೆ ವಿವೇಕಪೂರ್ಣ ವಿಶ್ಲೇಷಣೆಯೊಡಗೂಡಿದ ಆಳವಾದ ಆಲೋಚನೆಯ ಆವಿಷ್ಕಾರವೇ ಹೌದು. "ನೇಗಿಲ ಕುಳದೊಳಗಡಗಿದೆ ಕರ್ಮ, ನೇಗಿಲ ಮೇಲೆಯೆ ನಿಂತಿದೆ ಧರ್ಮ" ಎಂಬ 'ಬೀಜ' ಮಾತನ್ನು ಉಗ್ಘಡಿಸಿದವರು ಕುವೆಂಪು ಮಾತ್ರ. ಇಂಥ 'ನೇಗಿಲಯೋಗಿ' ರೈತ–ಅನ್ನದಾತ ನಮ್ಮ ದೇಶದಲ್ಲಿ ಪಡುತ್ತ ಬಂದ ಅವರ್ಣನೀಯ ದುರವಸ್ಥೆಯ ಬಗ್ಗೆ ಅವರು ತಮ್ಮೆದೆಯ ಕಳವಳದ ಕಾವಿಗೆ ದನಿಯಿತ್ತ ಕವಿತೆ 'ರೈತನ ದೃಷ್ಟಿ'. ಇದೂ ಕೂಡ ನಮ್ಮ ದೇಶದ ಸ್ವಾತಂತ್ರ್ಯಪೂರ್ವ ಕಾಲದಲ್ಲೇ ರಚಿತವಾದ್ದು:

*ಕರಿಯದೊ ಬಿಳಿಯರದೊ ಯಾರದಾದರೆ ಏನು?"*
*ಸಾಮ್ರಾಜ್ಯವಾವಗಂ ಸುಲಿಗೆ ರೈತರಿಗೆ!*
*ವಿಜಯನಗರವೊ? ಮೊಗಲರಾಳಕೆಯೊ? ಇಂಗ್ಲಿಷರೊ?*
*ಎಲ್ಲರೂ ಜಿಗಣೆಗಳೆ ನನ್ನ ನೆತ್ತರಿಗೆ!*
*ಕತ್ತಿ ಪರದೇಶಿಯಾದರೆ ಮಾತ್ರ ನೋವೆ?*
*ನಮ್ಮವರೆ ಹದಹಾಕಿ ತಿವಿದರದು ಹೂವೆ?*

– ಇದು, ನಮ್ಮ 'ಜಗದ ಕವಿ, ಯುಗದ ಕವಿ' ಕುವೆಂಪು ಅವರ ದೃಷ್ಟಿಯಲ್ಲಿ 'ರೈತನ ದೃಷ್ಟಿ'! ಈ ಕವಿತೆಯ ಒಂದೊಂದು ನುಡಿಯೂ ಸ್ವತಃ ರೈತನೇ





ತನ್ನನ್ನಾಳುವವರ ಕುರಿತಾಗಿ ತನ್ನೆದೆಯಲ್ಲಿ ಕುದಿವ ರೊಚ್ಚು–ಕಿಚ್ಚುಗಳನ್ನು ತೋಡಿಕೊಂಡ ಬಿಚ್ಚುಮಾತಿನ ಕಿಡಿಯಾಗಿ ಸಿಡಿದ ಹಾಗಿದೆ. ಯಾವ ಕಾಲದ ಯಾವ ಅರಸರ ಆಳ್ವಿಕೆಯಲ್ಲಾದರೂ ರೈತರ ಗೋಳು ತಪ್ಪಿದ್ದಲ್ಲವೆಂಬ ಸಂಕೇತ ಈ ಕವಿತೆಯಲ್ಲಿದೆ. 'ಯಾವ ರಾಜ ಬಂದ್ರೇನು, ನಮಗೆ ರಾಗೀ ಬೀಸೋದು ತಪ್ಪಲಿಲ್ಲ' ಎಂಬುದು ನಮ್ಮ ಹಳ್ಳಿಯ ಹೆಣ್ಣುಮಕ್ಕಳ ಬಾಯಲ್ಲಿ ಕೇಳಿಬರುವ ಗಾದೆ ಮಾತು. ಕುವೆಂಪು ಅವರ ಕವಿತೆಯೂ ಅದೇ ಕಳವಳದ 'ಜನವಾಣಿ'ಯ ಮೂಸೆಯಿಂದ ಮೂಡಿಬಂದದ್ದು. ಕವಿತೆಯ ಸಾಲುಸಾಲಿನಲ್ಲೂ ರೈತಕುಲದ ಕುರಿತ ಕವಿಹೃದಯದ ತಳಮಳವೇ ಕೊನೆಗೊಂಡಂತಿದೆ. ಆಳರಸರು ಹೊರದೇಶದ ಬಿಳಿಯರೇ ಆಗಲಿ, ಒಳದೇಶದ ಕರಿಯರೇ ಆಗಲಿ, ಅವರು ಜಿಗಣೆಗಳಂತೆ ರೈತನ ರಕ್ತವನ್ನೇ ಹೀರಿದರಲ್ಲದೆ, ಅವನಿಗೆ ಬೇಕಾದ ಉತ್ತೇಜನ ವನ್ನೇನೂ ನೀಡಲಿಲ್ಲ. ಅವನ ದುಡಿಮೆಯ ಫಲವನ್ನು ತಮ್ಮ ಬೊಕ್ಕಸಕ್ಕೆ ಬಳಸಿಕೊಂಡರೇ ಹೊರತಾಗಿ, ಅವನ ಆಹಾರ–ವಿಹಾರ–ಉಪಚಾರ ಗಳಂಥ ಕನಿಷ್ಠ ಸೌಕರ್ಯಗಳನ್ನೂ ಒದಗಿಸಲಿಲ್ಲ! ರೈತನ ಕುತ್ತಿಗೆಯ ಮೇಲೆ ಕತ್ತಿಯಿಟ್ಟಂತೆ ಅವನ ಅಸಹಾಯಕತೆಯ ಪ್ರಯೋಜನ ಪಡೆದವರಲ್ಲಿ ಒಳಹೊರಗಿನ ಶೋಷಕರೆಲ್ಲ ಸಮಾನರೇ! 'ಜಿಗಣೆಯ ಜಾತಿಯವರೇ!' "ಕತ್ತಿ ಪರದೇಶಿ ಯಾದರೆ ಮಾತ್ರ ನೋವೆ? / ನಮ್ಮವರೆ ಹದಹಾಕಿ ತಿವಿದರದು ಹೂವೆ?" ಎಂದು ಕವಿ ನೊಂದು ನುಡಿದದ್ದು ಎಂಥ ಕಲ್ಲೆದೆ ಯನ್ನೂ ನಡುಗಿಸುವ ಪ್ರಶ್ನೆಯೇ. ನಮ್ಮ




ನಾಡನ್ನಾಳುವವರು ಕರಿಯರಾಗಿರಲಿ, ಬಿಳಿಯರಾಗಿರಲಿ, ಹೊರಗಿನವರಾಗಿರಲಿ, ಒಳಗಿನವರಾಗಿರಲಿ, ಯಾವ ಕಾಲಖಂಡದವರೇ ಆಗಿರಲಿ – ಯಾರಾದರೂ ಸರಿ, ಎಲ್ಲರೂ ತನ್ನ ರಕ್ತ ಹೀರುವ ಜಿಗಣೆಗಳೇ ಎಂದು ಕುವೆಂಪು ಕಂಡರಸಿದ ರೈತನು ಆಕ್ರೋಶವನ್ನು ವ್ಯಕ್ತಪಡಿಸಿದಾಗ ನಮ್ಮ ಮೆದುಳಿಗೊಂದಿಷ್ಟು ಚುರುಕು ಮುಟ್ಟಿದಂತಾಗುತ್ತದೆ! ತನ್ನ ಶೋಷಣೆಯ ಪ್ರತೀಕವಾದ 'ಕತ್ತಿ' ಪರದೇಶದ್ದಾಗಲಿ, ಒಳದೇಶದ್ದಾಗಲಿ – ಅದು ತನ್ನ ಕುತ್ತಿಗೆ ಕೊಯ್ಯುವಂಥದ್ದೇ! ಇಲ್ಲಿ ಕವಿ ಬಳಸಿದ 'ನೋವು' ಹಾಗೂ 'ಹೂವು' ಎಂಬ ಪದಗಳು ಕೇವಲ ಅಂತ್ಯಪ್ರಾಸ ಜೋಡಣೆಗಾಗಿ ಬಳಸಿದವುಗಳಾಗಿರದೆ, ರೈತನ ತೀವ್ರತರ ಸಂಕಟದ ವಿರುದ್ಧಾರ್ಥದ ರೂಪಕಗಳಾಗಿ ಕೈಗೂಡಿಸಿರುವುದನ್ನು ಗಮನಿಸಬೇಕು. ಮೈಮುರಿ ದುಡಿವವರ ಹೊಟ್ಟೆಗೇ ಸಾಕಷ್ಟು ಉಳಿಯದಂತೆ ಆಳರಸರು ತಮ್ಮ ಬೊಕ್ಕಸವನ್ನು ತುಂಬಿಕೊಂಡರೆ ರೈತನ 'ನೋವು' ಅಸಹನೀಯವಾದಾಗ 'ಸಾವು' ಅವನ ಬಾಗಿಲಿಗೆ ಬಂದು ನಿಂತರೆ ಆಶ್ಚರ್ಯವೇನು! ಈ ಹೊತ್ತು ಎಷ್ಟೆಲ್ಲ ರೈತರು ಆತ್ಮಹತ್ಯೆಗೆ ಶರಣಾಗುತ್ತಿರುವ ಅರ್ಥವೇನು? ಎಷ್ಟೆಲ್ಲ ಎಳೆಯ ಕಂದಮ್ಮಗಳು ಐದು ವರ್ಷ ತುಂಬುವ ಮೊದಲೇ ಹೆತ್ತಮ್ಮನ ಮಡಿಲು ಬರಿದಾಗಿಸುತ್ತಿರುವ ಸಂಕೇತವೇನು?

ಮೇಲೆ ಅವಲೋಕಿಸಿದ ಕವಿತೆಗಳ ಸಾಲುಗಳೆಲ್ಲ ಮಹಾಕವಿ ಕುವೆಂಪು ಅವರು ತಮ್ಮ ಕಾವ್ಯಸಾಧನೆಯ ಏರುವೆಯ ಹಂತದಲ್ಲಿದ್ದಾಗ ಬರೆದಂಥವು; ಸ್ವಾತಂತ್ರ್ಯ ಪೂರ್ವದ ನಮ್ಮ ಗ್ರಾಮ ಭಾರತದಲ್ಲಿ ಕಾಣುತ್ತಿದ್ದ 'ಹಾಲ್–ಚಾಲ್' ನೋಡಿ ನೋಡಿ, ಸಂಕಟಪಟ್ಟು, ದುಡಿವವರ ಜೀವಧ್ವನಿಯಾಗಿ ಹಾಡಿಕೊಂಡಂಥವು. ಅಂತೆಯೇ ಅವುಗಳಲ್ಲಿ ಆಳುವ ವರ್ಗದ ಕುರಿತಾದ ರೊಚ್ಚಿದೆ, ಕಿಚ್ಚಿದೆ. ಪ್ರಾಯಸ್ಥ ಕವಿಜೀವದ ತೀವ್ರತರ ತುಡಿತವಿದೆ. ಇತ್ತೀಚೆಗೆ ಕರ್ನಾಟಕ ಸರಕಾರ 'ಜಯ ಭಾರತ ಜನನಿಯ ತನುಜಾತೆ' ಎಂಬ ಸಾರವತ್ತಾದ ಭಾವಗೀತೆಯನ್ನು ನಮ್ಮ ನಾಡಗೀತೆಯೆಂದೂ, ನಾಡಿನ ರೈತಜೀವನದ ಹಿರಿಮೆ–ಗರಿಮೆಗಳನ್ನು ಸಾರುವ 'ನೇಗಿಲ ಯೋಗಿ' ಎಂಬ ಅರ್ಥಪೂರ್ಣ ಪದ್ಯವನ್ನು ರೈತಗೀತೆಯೆಂದೂ ಆಯ್ಕೆಮಾಡಿ ನವಕರ್ನಾಟಕ ರಾಜ್ಯದ ಪ್ರಥಮ ರಾಷ್ಟ್ರಕವಿ ಕುವೆಂಪು ಅವರಿಗೆ ಬಲು ದೊಡ್ಡ ಗೌರವ ನೀಡಿದ್ದು ನಿಜ. ಆದರೆ ಬಲು ಹಿಂದೆಯೇ ಈ ನಾಡಿನ ರೈತಕುಲದ ಕಷ್ಟಪರಂಪರೆಯನ್ನು ಕುರಿತು ಬರೆದ ಅವರ ಕ್ರಾಂತಿಕಾರೀ ಪದ್ಯಗಳ ಪ್ರಖರ ಆಶಯವನ್ನು ಚೆನ್ನಾಗಿ ಮನನ ಮಾಡಿ, ಇಂದಿನ ರಾಜಕಾರಣಿಗಳು, ವಿಚಾರವಂತರು, ಸಮಾಜ – ಸುಧಾರಕರು, ಗ್ರಾಮಾಭಿವೃದ್ಧಿಯಲ್ಲಿ ಮೈ – ಮನ ತೊಡಗಿಸಿ ದುಡಿಯುವ ಗ್ರಾಮಾಂತರ ಪ್ರದೇಶಗಳ ನೇತಾರರಾದಿಯಾಗಿ ಸಕಲರೂ ಧೇನಿಸುವುದು ಅಗತ್ಯವೆಂದೇ ಹೇಳಬೇಕು. ನಮ್ಮ ನಾಡಿನ ಯಾವುದೇ ಮೂಲೆಯಲ್ಲಿಯ ಯಾವೊಬ್ಬ ರೈತನಾಗಲೀ, ಯಾವುದೇ ಕಾರಣಕ್ಕಾಗಲೀ, ಆತ್ಮಹತ್ಯೆ ಮಾಡಿಕೊಂಡ ದುಃಖದ ಸಮಾಚಾರವನ್ನು ಓದಿದಾಗ, ಅಥವಾ ಕೇಳಿದಾಗ ನಮ್ಮ ನಾಡಿನ ಮಹಾಕವಿಯ ಜಾಗೃತವಾಣಿಯೇ ವಿವೇಕವಂತರ ಕಿವಿಯಲ್ಲಿ ಜಾಗಟೆ ಹೊಡೆದಂತೆ ಭಾಸವಾಗುತ್ತದೆ.

**ಬಿ. ಎ. ಸನದಿ**
ಮಿಲನ, ಸಾ ಮಿಲ್ ಎದುರು, ಹೇರವಟ್ಟ
ಕುಮಟಾ – ೫೮೧ ೩೪೩

# ಗಝಲ್




ನನ್ನೊಳಗಿನ ಮೌನ ಸಾವಿರದ ಶೂಲವಾಗಿ ಅಣಕಿಸುತಿದೆ ಸಖ
ನನ್ನೊಳಗಿನ ಮೌನ ನಿನ್ನ ಬಿರುಮಾತಿನೆದುರು ಸುಮ್ಮನೆ ಕೂತಿದೆ ಸಖ

ನನ್ನೊಳಗಿನ ಮೌನ ಹರಿಯುವ ನದಿಗುಂಟ ದೋಣಿಯ ತೇಲಿಸುತಿದೆ
ನನ್ನೊಳಗಿನ ಮೌನ ಅಬ್ಬರಿಸುವ ಅಲೆಗಳನು ತಲೆತಗ್ಗಿಸುವಂತೆ ಮಾಡಿದೆ ಸಖ

ನನ್ನೊಳಗಿನ ಮೌನ ಬರಿ ಮೌನವಷ್ಟೇ ಅಲ್ಲ ಮಾತಿನ ಧ್ಯಾನವೆಂಬುದ ಮರೆಯದಿರು
ಪರಂಪರೆಯ ಮೌನಗಳೆಲ್ಲ ಪಿಸುಮಾತಿನಲಿ ನಡೆದು ಮಾತಿನ ಮೆರವಣಿಗೆಯಲಿ ಹೆಜ್ಜೆ ಹಾಕಿದೆ ಸಖ

ನನ್ನೊಳಗಿನ ಮೌನವೆಂಬುದು ಅಸಹಾಯಕತೆಯಲ್ಲ ತಾಳ್ಮೆಯ ಮೈಲುಗಲ್ಲದು
ನನ್ನೊಳಗಿನ ಮೌನವದು ನದಿಯೂ ಹೌದು ಸಮುದ್ರವೂ ಹೌದೆಂಬುದ ನೀ ಅರಿಯಬೇಕಿದೆ ಸಖ

'ರೇಣು' ಮೌನವಾಗಿದ್ದದ್ದು ಬೊಗಸೆ ತುಂಬಿದ ನಿನ್ನ ಮೊಹಬ್ಬತ್‌ಗಾಗಿ ನೆನಪಿರಲಿ ನಿನಗೆ
ನನ್ನೊಳಗಿನ ಮೌನದ ನೂರು ಭಾಷೆಯ ನೀನೇ ನೀನೇ ಅರಿತು ಬಾಳಬೇಕಿದೆ ಸಖ

**ರೇಣುಕಾ ಎ. ಕಠಾರಿ**
ಕೇರಾಫ್ : ಅರುಣಕುಮಾರ ಕಠಾರಿ, ಲಕ್ಷ್ಮೀನಗರ ೧ನೇ ಕ್ರಾಸ್
ಪೆಟ್ರೋಲ್ ಬಂಕ್ ಹತ್ತಿರ, ಅಂಚೆ : ಕಾಕತಿ – ೫೯೧ ೧೧೩, ಬೆಳಗಾವಿ ತಾಲೂಕು ಮತ್ತು ಜಿಲ್ಲೆ

# ಭಗವದ್ಗೀತೆಯ ರಚನೆಯ ಸುತ್ತಮುತ್ತ ...

ಒಂದು ಗ್ರಂಥ/ಧರ್ಮಗ್ರಂಥ/ಕೃತಿಯನ್ನು ವ್ಯಾಖ್ಯಾನ ಮಾಡುವಾಗ ವ್ಯಾಖ್ಯಾನಕಾರನ ದೃಷ್ಟಿಕೋನ, ನಿಲುವು, ಸಾಮಾಜಿಕ/ರಾಜಕೀಯ ಒಲವು ಇತ್ಯಾದಿ ಪ್ರತಿಫಲನಗೊಳ್ಳುವ ಸಾಧ್ಯತೆಗಳು ಇದ್ದೇ ಇರುತ್ತವೆ. ಇದುವರೆಗೆ ಭಗವದ್ಗೀತೆಯ ಬಗೆಗಿನ ಬಹುತೇಕ ವಾದ–ಪ್ರತಿವಾದಗಳು, ಆರೋಪ–ಪ್ರತ್ಯಾರೋಪಗಳು, ಸಮರ್ಥನೆ–ಅಮಾನ್ಯಕರಣಗಳು ಈ ಆಯಾಮವನ್ನು ಹೊಂದಿವೆ. ಪೂರ್ವಗ್ರಹವಿರದ ವ್ಯಾಖ್ಯಾನಗಳ ಇರುವಿಕೆಯ ಬಗೆಗೆ ಸಂದೇಹವನ್ನು ಕೆಲವು ವಿಶೇಷಜ್ಞರು ವ್ಯಕ್ತಪಡಿಸುತ್ತಾರೆ.

ಭಗವದ್ಗೀತೆಯನ್ನು ಅದರ ರಚನೆಯ ಚಾರಿತ್ರಿಕ/ಸಾಮಾಜಿಕ ಸಂದರ್ಭಗಳಲ್ಲಿರಿಸಿ ಡಿ. ಡಿ. ಕೊಸಾಂಬಿ, ಎಸ್. ಜಿ. ಸರ್ದೇಸಾಯಿ, ದಿಲೀಪ್ ಬೋಸ್‌ರಂತಹ ವಿದ್ವಾಂಸರು ವ್ಯಾಖ್ಯಾನಿಸಿದ್ದಾರೆ. ಗೀತೆಯ ಕಾಲದ ಬಗೆಗೆ ಹಲವರು ತಮ್ಮ ಕಪೋಲಕಲ್ಪಿತ ವಿಚಾರಗಳನ್ನು, ಸಮಂಜಸವೆನಿಸುವ ಸಂಗತಿಗಳನ್ನು ನೀಡಿದ್ದಾರೆ. ಆದರೆ ಕ್ರಿ. ಪೂ. ಐದನೇ ಶತಮಾನದಿಂದ ಕ್ರಿ. ಪೂ. ಎರಡನೇ ಶತಮಾನದ ಅವಧಿಯಲ್ಲಿ ಒಬ್ಬರಿಗಿಂತ ಹೆಚ್ಚು ಮಂದಿ ಗೀತೆಯನ್ನು ರಚಿಸಿದರು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ಕ್ರಿ. ಶ. ಮೊದಲನೇ ಶತಮಾನದಿಂದ ಮೂರನೇ ಶತಮಾನಗಳ ನಡುವಣ ಅವಧಿಯಲ್ಲಿ ಇದು ರಚಿಸಲ್ಪಟ್ಟಿತು ಎಂಬುದು ಸರ್ದೇಸಾಯಿ ಮತ್ತು ದಿಲೀಪ್ ಬೋಸರ ನಿಲುವಾಗಿದೆ. ಈ ನಿಲುವಿಗೆ ಅವರು ನೀಡುವ ಅಭಿಮತಗಳು/ಸಮರ್ಥನೆಗಳು ವಿಚಾರಪ್ರಚೋದಕವಾಗಿವೆ. ಧರ್ಮಶಾಸ್ತ್ರ ಗ್ರಂಥಗಳಲ್ಲಿ ಗೀತೆಯ ಉಲ್ಲೇಖವಿಲ್ಲ, ಆದುದರಿಂದ ಗೀತೆ ಈ ಗ್ರಂಥಗಳ ನಂತರದ ಕಾಲದ್ದು ಎಂದು ಗ್ರಹಿಸಬಹುದು. ಈ ಸಂಗತಿ ಮೇಲೆ ಪ್ರಸ್ತಾಪಿಸಿರುವ ವಿದ್ವಾಂಸರ ನಿಲುವನ್ನು ಸಮರ್ಥಿಸುತ್ತದೆ.

ಗೀತೆಯ ರಚನೆಯ ಕಾಲವನ್ನು ವ್ಯಾಖ್ಯಾನಿಸುವಾಗ, ನಾವು ಉಪನಿಷತ್‌ಗಳ ಕಾಲಕ್ಕಿಂತಲೂ (ಅಂದರೆ ಕ್ರಿ. ಪೂ. ಹತ್ತನೇ ಶತಮಾನದಿಂದ ಕ್ರಿ. ಪೂ. ಆರನೇ ಶತಮಾನ) ಮುಂಚಿನ ಪಶುಪಾಲನೆಯನ್ನು ಮಾಡಿಕೊಂಡು ಅಲೆಮಾರಿ ಜೀವನ ನಡೆಸುತ್ತಿದ್ದ ಸಮಯದಲ್ಲಿದ್ದ ಸಮಾಜದತ್ತ ನೋಟವನ್ನು ಹರಿಸಬೇಕು. ಆ ಕಾಲವನ್ನು 'ಹಿಂದೀ–ಆರ್ಯ ಸಮಾಜ' ಅಥವಾ 'ಋಗ್ವೇದ ಕಾಲ' ಎಂದು ಸರ್ದೇಸಾಯಿ/ದಿಲೀಪ್ ಬೋಸ್ ಗುರುತಿಸುತ್ತಾರೆ. ಆಗ ಸಮಾಜದಲ್ಲಿ ವರ್ಣಗಳ ಆಧಾರದಡಿ ವರ್ಗ ವಿಭಜನೆಯಾಗಿತ್ತು. ಒಂದು ಕಡೆ ಬ್ರಾಹ್ಮಣರು ಮತ್ತು ಕ್ಷತ್ರಿಯರಿದ್ದರೆ, ಇನ್ನೊಂದೆಡೆ ಶೂದ್ರರು ಮತ್ತು ಹೆಚ್ಚಿನ ಸಂಖ್ಯೆಯ ವೈಶ್ಯರಿದ್ದರು. ಉಪನಿಷತ್ತುಗಳ ಕಾಲದಲ್ಲಿ ಈ ವರ್ಣವೈಷಮ್ಯ ತುಂಬ ವೃದ್ಧಿಸಿತು. ಶೂದ್ರರು ಮತ್ತು ವೈಶ್ಯರು ತೀವ್ರ ಶೋಷಣೆಗೆ ಒಳಗಾದರು. ಇನ್ನೊಂದು ಬೆಳವಣಿಗೆಯೂ ಈ ಕಾಲಾವಧಿಯಲ್ಲಿ ಜರುಗಿತು. ಅದೆಂದರೆ ಗಣಗಳ ವ್ಯವಸ್ಥೆಯ ಬದಲಿಗೆ ರಾಜ್ಯ ವ್ಯವಸ್ಥೆಯು ರೂಪುಗೊಂಡಿತು. ಅನೇಕ ಚಿಕ್ಕ ರಾಜ್ಯಗಳು, ಕುಲೀನ ಮನೆತನಗಳ ಆಡಳಿತದ ನಿಯಂತ್ರಣಕ್ಕೆ ಒಳಗಾದ ಗಣರಾಜ್ಯಗಳು ಸ್ಥಾಪನೆಗೊಂಡವು. ಆತ್ಮ, ಬ್ರಹ್ಮ, ಕರ್ಮ, ಪುನರ್ಜನ್ಮ, ಮೋಕ್ಷ ಮುಂತಾದ ಕಲ್ಪನೆಗಳು ಯಥಾಸ್ಥಿತಿಯನ್ನು ಪೋಷಿಸುವ ನಿಟ್ಟಿನಲ್ಲಿ ಬಿತ್ತಲ್ಪಟ್ಟವು.

ಈ ನಾಗರಿಕತೆ ಮುನ್ನಡೆಯುತ್ತ ಗಂಗಾನದಿ ಬಯಲಿನ ಪೂರ್ವಾಭಿಮುಖವಾಗಿ ಮಗಧವನ್ನು ಪ್ರವೇಶಿಸಿತು (ಕ್ರಿ. ಪೂ. ಏಳನೇ ಶತಮಾನದಿಂದ ಐದನೇ ಶತಮಾನದವರೆಗಿನ ಅವಧಿ). ಆ ಕಾಲದಲ್ಲಿ ಕಬ್ಬಿಣದ ಅದಿರಿನ ಭಾರಿ ನಿಕ್ಷೇಪ ಪತ್ತೆಯಾಗಿ, ಅನೇಕ ಉಪಕರಣಗಳು ಆವಿಷ್ಕಾರಗೊಂಡವು. ಕಾಡುಗಳನ್ನು ಸವರಿ, ಹೆಚ್ಚು ಪ್ರಮಾಣದ ಭೂಮಿಯನ್ನು ಕೃಷಿಗೆ ಒಳಪಡಿಸಲಾಯಿತು. ಚರ್ಮದ ಉತ್ಪಾದನೆಯಲ್ಲಿ ಉತ್ಕರ್ಷ ಕಂಡುಬಂದಿತು. ಸಂಚಾರ ಮಾರ್ಗಗಳು ಪ್ರಗತಿ ಹೊಂದಿದವು. ಇದರಿಂದ ವಾಣಿಜ್ಯ, ಸರಕು ಸಾಗಾಟಗಳು ಬೆಳೆದವು. ದೊಡ್ಡ ಹಳ್ಳಿಗಳ ಸ್ಥಾನವನ್ನು ನಗರಗಳು ಆಕ್ರಮಿಸಿಕೊಂಡವು. ಈ ಪಲ್ಲಟಗಳು ಸಾಮಾಜಿಕ/ಆರ್ಥಿಕ/ಧಾರ್ಮಿಕ ಜೀವನದ ಮೇಲೆ ವ್ಯಾಪಕ ಪ್ರಭಾವವನ್ನು ಬೀರಿದವು.



ಇವುಗಳ ಜೊತೆಜೊತೆಗೆ ಸಮಾಜದಲ್ಲಿ ಕ್ಷೋಭೆ, ಅಶಾಂತಿಯೂ ನೆಲೆಯೂರಿದವು. ಅಲ್ಲದೆ ಚಾತುರ್ವರ್ಣ್ಯ ವ್ಯವಸ್ಥೆ, ವೇದ ಪ್ರಾಮಾಣ್ಯ, ಯಜ್ಞಗಳು, ಬ್ರಹ್ಮ, ಆತ್ಮ, ಪುನರ್ಜನ್ಮ, ಮೋಕ್ಷ ಮುಂತಾದ ಪರಿಕಲ್ಪನೆಗಳನ್ನು ತೀವ್ರವಾಗಿ ಪ್ರಶ್ನಿಸಲಾಯಿತು. ಗೌತಮ ಬುದ್ಧ ಈ ಪ್ರಶ್ನೆಗಳನ್ನು ಬಲವಾಗಿ ಮಂಡಿಸಿದ್ದ.

ಹೀಗೆ ಮೌರ್ಯ ಸಾಮ್ರಾಜ್ಯ ಬೆಳೆಯುತ್ತ ತನ್ನ ಉನ್ನತ ಹಂತವನ್ನು ಅಶೋಕನ ಆಳ್ವಿಕೆಯಲ್ಲಿ (ಕ್ರಿ. ಪೂ. ಮೂರನೇ ಶತಮಾನ) ಕಂಡುಕೊಂಡಿತು. ಆದರೆ ಆತನ ರಾಜ್ಯಭಾರದ ಕೊನೆಯ ಘಟ್ಟದಲ್ಲಿ ಈ ಸಾಮ್ರಾಜ್ಯ ಪತನಗೊಳ್ಳುವ ಚಹರೆಗಳು ಗೋಚರಿಸಿದವು. ಕ್ರಿ. ಪೂ. ಎರಡನೇ ಶತಮಾನದ ಸುಮಾರಿಗೆ ಮೌರ್ಯ ಸಾಮ್ರಾಜ್ಯ ಅವನತಿಯ ಹಾದಿ ಹಿಡಿಯಿತು. ಈ ತೆರನಾದ ದೊಡ್ಡ ಸಾಮ್ರಾಜ್ಯ ಉದಯಿಸಿದ್ದು ಕ್ರಿ. ಶ. ಮೂರನೇ ಶತಮಾನದ ಬಳಿಕ. ಅದೇ ಗುಪ್ತ ಸಾಮ್ರಾಜ್ಯ. ಈ ಎರಡು ಸಾಮ್ರಾಜ್ಯಗಳ ನಡುವಿನ ಅವಧಿಯಲ್ಲಿ ಗೀತೆಯನ್ನು ರಚಿಸಲಾಯಿತು ಎಂಬುದು ಈ ವಿದ್ವಾಂಸರ ಅಂಬೋಣ.

ಅಲ್ಲದೆ ಆ ಕಾಲದಲ್ಲಿ ಗ್ರೀಕರು, ಶಕರು, ಕುಶಾನರು ದಂಡೆತ್ತಿ ಬಂದರು. ಶುಂಗ, ಶಾತವಾಹನ, ಕಳಿಂಗದಂತಹ ರಾಜ್ಯಗಳು ಅಸ್ತಿತ್ವಕ್ಕೆ ಬಂದವು. ಈ ಸ್ಥಿತ್ಯಂತರಗಳು ಧಾರ್ಮಿಕತೆಯ ಮೇಲೂ ಪರಿಣಾಮಗಳನ್ನು ಬೀರಿದವು. ಬೌದ್ಧ ಧರ್ಮ ಪ್ರವರ್ಧಮಾನ ಸ್ಥಿತಿಯಲ್ಲಿತ್ತು. ಸನಾತನ/ವೈದಿಕ ಧರ್ಮ ಸಂಕಟದ ಪರಿಸ್ಥಿತಿಗೆ ಒಳಗಾಯಿತು. ಅದನ್ನು ಪುನರುತ್ಥಾನಗೊಳಿಸಲು ಗೀತೆಯಂತಹ ಧರ್ಮಗ್ರಂಥವನ್ನು ರಚಿಸಲಾಯಿತು ಎಂಬುದು ಈ ವಿದ್ವಾಂಸರ ನಿಲುಮೆಯಾಗಿದೆ.

ಗೀತೆಯ ನಾಲ್ಕನೇ ಅಧ್ಯಾಯದಲ್ಲಿ ಕೃಷ್ಣ ಹೀಗೆ ಹೇಳಿದ್ದಾನೆ :

ಅ) "ಯದಾ ಯದಾ ಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ
ಅಭ್ಯುತ್ಥಾನಮಧರ್ಮಸ್ಯ ತದಾತ್ಮಾನಂ ಸೃಜಾಮ್ಯಹಂ" (೪.೭)
("ಧರ್ಮವು ಅವನತಿ ಹೊಂದಿ, ಅಧರ್ಮವು ತಲೆ ಎತ್ತಿದಾಗಲೆಲ್ಲ ನಾನು ಆವಿರ್ಭವಿಸುತ್ತೇನೆ.")

ಆ) "ಪರಿತ್ರಾಣಾಯ ಸಾಧೂನಾಂ ವಿನಾಶಾಯ ಚ ದುಷ್ಕೃತಾಂ
ಧರ್ಮಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ." (೪.೮)
("ದುಷ್ಟರನ್ನು ನಾಶ ಮಾಡಿ, ಸಾಧು ಸಜ್ಜನರನ್ನು ರಕ್ಷಿಸಿ, ಧರ್ಮವನ್ನು ಸಂಸ್ಥಾಪಿಸುವ ಸಲುವಾಗಿ ಪ್ರತಿ ಯುಗದಲ್ಲೂ ನಾನು ಅವತರಿಸುತ್ತೇನೆ.")

ಈಗಾಗಲೇ ಪ್ರಸ್ತಾಪಿಸಿರುವಂತೆ ಬೌದ್ಧ ಧರ್ಮ ಮತ್ತು ಶಕ, ಕುಶಾನ ದಾಳಿಗಳಿಂದ ಚಾತುರ್ವರ್ಣ್ಯ ವ್ಯವಸ್ಥೆಗೆ ದೊಡ್ಡ ಧಕ್ಕೆಯಾಗಿತ್ತು. "ಅಧರ್ಮವು ತಲೆ ಎತ್ತಿದಾಗಲೆಲ್ಲ..." ಎಂದಾಗ ಗೀತೆಯ ಕರ್ತೃವಿನ ಮನಸ್ಸಿನಲ್ಲಿದ್ದ ವಿಷಯ ಇದೇ ಎಂದು ವ್ಯಾಖ್ಯಾನಿಸಬಹುದು.

ಸ್ವಧರ್ಮದ ರಕ್ಷಣೆಯ ಜೊತೆಗೆ ಗೀತೆಯ ಕೆಲವು ಶ್ಲೋಕಗಳಲ್ಲಿ ನಾಸ್ತಿಕರ ಖಂಡನೆ ಇರುವುದರಿಂದ ಈ ವಿದ್ವಾಂಸರ ಮೇಲಿನ ವ್ಯಾಖ್ಯಾನಕ್ಕೆ ಪುಷ್ಟಿ ದೊರೆಯುತ್ತದೆ.

*(ಆಧಾರ : ಹಲವು ಮೂಲಗಳು)*

**ಮ. ಶ್ರೀ. ಮುರಳಿ ಕೃಷ್ಣ**
ನಂ. ೩೭, ೩ನೇ ಅಡ್ಡರಸ್ತೆ, ರಾಜಾ ಗಾರ್ಡನಿಯಾ ಬಡಾವಣೆ
ತುರಹಳ್ಳಿ, ಸುಬ್ರಹ್ಮಣ್ಯಪುರ ಅಂಚೆ, ಬೆಂಗಳೂರು – ೫೬೦ ೦೬೧

**ಸಿ. ಆರ್. ಕೃಷ್ಣರಾವ್**

# ಟಿ. ವಿ. ಲೋಕ ಖಾಸಗೀ ಚಾನೆಲ್‌ಗಳ ಭರಾಟೆ

ಇನ್ನೂ ಐವತ್ತು ವರ್ಷಗಳು ತುಂಬದ ಟಿ.ವಿ. ಲೋಕ ಈಗ ಭಾರತದ ಎಲ್ಲ ಭಾಷೆಗಳಲ್ಲೂ ಹಗಲಿರುಳೂ ವರ್ಣರಂಜಿತವಾಗಿ ಪ್ರಸಾರದಲ್ಲಿ ತೊಡಗಿದೆ. ಸಾವಿರಾರು ಚಾನೆಲ್‌ಗಳು ವೀಕ್ಷಕರಿಗೆ ಲಭ್ಯ. ಅದಕ್ಕಾಗಿ ಕೇಬಲ್ ನೆಟ್‌ವರ್ಕ್‌ಗಳು, ಟಾಟಾ ಸ್ಕೈ, ಡಿಟಿಎಚ್, ವಿಡಿಯೊಕಾನ್ ಮುಂತಾದವು ಸೇವೆ ಒದಗಿಸಲು ಸಿದ್ಧವಾಗಿವೆ. ಹಾಗಿದ್ದರೂ ಇಂದೂ ಕೂಡ ಸರಕಾರದ ಒಡೆತನದಲ್ಲಿರುವ ದೂರದರ್ಶನ ಚಾನೆಲ್‌ಗಳು ದೇಶದ ಮೂಲೆಮೂಲೆಗಳನ್ನೂ ತಲುಪುವ ವ್ಯಾಪಕ ವ್ಯವಸ್ಥೆ ಹೊಂದಿವೆ. ಆದರೆ ಖಾಸಗೀ ಚಾನೆಲ್‌ಗಳ ಭರಾಟೆ ಜೋರಾಗಿದೆ. ಪ್ರತಿಯೊಂದು ಚಾನೆಲ್‌ಗಳೂ ಸುದ್ದಿವಾಹಿನಿ ಜೊತೆಗೆ ಮನೋರಂಜನೆಯನ್ನೂ ಬೇರೆ ನೀಡುತ್ತವೆ. ಅವು ಪ್ರಾರಂಭವಾದದ್ದು ೬೦ರ ದಶಕದಲ್ಲಿ.

ಸ್ವಾತಂತ್ರ್ಯಪೂರ್ವ ಕಾಲದಲ್ಲಿ ಪತ್ರಿಕೆಗಳ ಪ್ರಕಟಣೆ ಉದ್ಯಮವಾಗಿರಲಿಲ್ಲ. ಪತ್ರಕರ್ತರೂ ಕೂಡ ಅತ್ಯಂತ ಕಡಿಮೆ ವೇತನದಲ್ಲಿ, ಅನೇಕ ಸಂದರ್ಭಗಳಲ್ಲಿ ಸೇವಾ ಮನೋಭಾವದಿಂದ ದುಡಿಯುತ್ತಿದ್ದರು. ಅದು ವಸಾಹತುಶಾಹಿ ಆಡಳಿತವನ್ನು ಅಂತ್ಯಗೊಳಿಸುವ ಸೇವಾ ಮನೋಭಾವದಿಂದ, ಮೌಲ್ಯಾಧಾರಿತವಾಗಿ ಬೆಳೆದಿತ್ತು. ಅದು ಉದ್ಯಮವಾಗಿ ಬೆಳೆದದ್ದು ಸ್ವಾತಂತ್ರ್ಯ ಬಂದ ಮೇಲೆ. ಹಾಗಾಗಿ ಪತ್ರಿಕೆಗಳ ಸ್ಥಿತಿಗತಿಗಳನ್ನು ಕುರಿತು ಅಧ್ಯಯನ ನಡೆದದ್ದೂ ಕೂಡ ಸ್ವಾತಂತ್ರ್ಯಾನಂತರ ಐವತ್ತರ ದಶಕದ ಪ್ರಾರಂಭದಲ್ಲಿ. ನ್ಯಾಯಮೂರ್ತಿ ರಾಜ್ಯಾಧ್ಯಕ್ಷ ಎಂಬುವರ ನೇತೃತ್ವದಲ್ಲಿ ಪರಿಶೀಲನೆ ನಡೆಸಿದ ಕೇಂದ್ರ ಸರಕಾರದಿಂದ ನೇಮಕಗೊಂಡಿದ್ದ ಆಯೋಗ ತನ್ನ ವರದಿಯನ್ನು ಸಮರ್ಪಿಸಿತು. ಅದರ ಫಲಶೃತಿಯೇ ಪತ್ರಕರ್ತರಿಗಾಗಿಯೇ ಬಂದ ವಿಶೇಷ ಕಾನೂನು, ಆನಂತರ ನೇಮಕಗೊಂಡ ವೇತನ ಆಯೋಗ ಇತ್ಯಾದಿ. ಈ ವರದಿಯ ಅಸ್ತಿತ್ವ ಈಗ ಒಂದು ನೆನಪು ಮಾತ್ರ. ಅದು ಸರಕಾರಿ ದಫ್ತರಗಳಲ್ಲಿ ಯಾವುದೋ ಮೂಲೆ ಸೇರಿರಬಹುದು. ಇಲ್ಲ ಅದೃಶ್ಯವಾಗಿರಬಹುದು ಇತರ ಅನೇಕ ವರದಿಗಳಂತೆ. ಆದರೆ ಈ ಆಯೋಗವು ಮಾಡಿದ ಅನೇಕ ಶಿಫಾರಸುಗಳಲ್ಲಿ ಗಮನಕ್ಕೆ ತಂದ ಒಂದು ಅಂಶವೆಂದರೆ ಪತ್ರಿಕೋದ್ಯಮ ಮುಂದಿನ ದಿನಗಳಲ್ಲಿ ಲಾಭದಾಯಕವಾದ ಉದ್ಯಮವಾಗಿ ಬೆಳೆದು ಬಂಡವಾಳಗಾರರ ಕೈಸೇರುವ ಅಪಾಯ ಕುರಿತದ್ದಾಗಿತ್ತು. ಸೇವಾ ಮನೋಭಾವ, ಜನರ ಬವಣೆಗಳಿಗೆ ಸ್ಪಂದಿಸುವ ಪತ್ರಿಕೋದ್ಯಮ ಹೂಡಿಕೆದಾರರ ಹಿತ ಕಾಪಾಡುವ ಸ್ಥಿತಿ ತಲುಪುವ ಬಗ್ಗೆ ವರದಿ ಎಚ್ಚರಿಸಿತ್ತು. ಪತ್ರಕರ್ತರೂ ಕೂಡ ಸಂಪಾದನೆಗಾಗಿ ವೃತ್ತಿ ಹಿಡಿಯುವುದನ್ನು ಕುರಿತು ಹೇಳಿತ್ತು. ಅವೆಲ್ಲ ನಿಜವಾಗಲು ಹೆಚ್ಚು ಕಾಲ ಬೇಕಾಗಲಿಲ್ಲ. ಎರಡು ಮೂರು ದಶಕಗಳ ಕಾಲದಲ್ಲೇ ಪತ್ರಿಕೆಗಳು ಅಂದಿನ ದೊಡ್ಡ ಬಂಡವಾಳಗಾರರ ಕೈವಶವಾಯಿತು. ರಾಜಕೀಯವಾಗಿ ಪ್ರಭಾವ ಬೆಳೆಸಿಕೊಳ್ಳಲು, ಪ್ರಭಾವ ಬೀರಲು ಪತ್ರಿಕೆಗಳು ಅವರಿಗೆ ಒಂದು ಸಾಧನವಾದುವು. ಇಷ್ಟೆಲ್ಲ ನೆನಪು ಮಾಡಿಕೊಳ್ಳಲು ಕಾರಣ ಇಂದು 'ಪ್ರಿಂಟ್ ಮಾಧ್ಯಮ' ಎಂದು ಕರೆಸಿಕೊಳ್ಳುವ ಪತ್ರಿಕಾ ವಲಯ ಬೃಹತ್ತಾಗಿ ಬೆಳೆದಿರುವುದು. ಎಲ್ಲ ನಿಯಮಗಳನ್ನು ಮೀರಿ ಸುದ್ದಿಗಿಂತ ಜಾಹಿರಾತುಗಳಿಗೆ ಮಾರುಹೋಗಿರುವುದು. ಪತ್ರಕರ್ತರೂ ಕೂಡ ಇಂದು ಕೈತುಂಬ ಸಂಬಳ ಪಡೆಯುತ್ತಿದ್ದಾರೆ, ಬಗೆಬಗೆಯ ಸವಲತ್ತುಗಳನ್ನು ಅನುಭವಿಸುತ್ತಿದ್ದಾರೆ. 'ಕಾಸಿಗಾಗಿ ಸುದ್ದಿ' ಎನ್ನುವ ಪ್ರವೃತ್ತಿಯೂ ಇಪ್ಪತ್ತೊಂದನೆ ಶತಮಾನದಲ್ಲಿ ಸುದ್ದಿಯಾಗಿದೆ.

ಪತ್ರಿಕೆಗಳ ಸ್ಥಿತಿಯೇ ಹೀಗಿರುವಾಗ ಇನ್ನು 'ಇಲೆಕ್ಟ್ರಾನಿಕ್ ಮಾಧ್ಯಮ' ಎನಿಸಿಕೊಂಡಿರುವ ಟೆಲಿವಿಷನ್ ಪ್ರಪಂಚ ಏನಾಗಿದೆ ? ಸಾವಿರಾರು ಕೋಟಿ ಬಂಡವಾಳ ಹೂಡಿಕೆ ಅಗತ್ಯವಿರುವ ಈ ಮಾಧ್ಯಮ ಕಾರ್ಪೊರೇಟ್ ಧಣಿಗಳ ಹಿಡಿತದಲ್ಲಿರುವುದು ಆಶ್ಚರ್ಯವೇನಲ್ಲ. ಅತ್ಯಂತ ಪ್ರಭಾವಶಾಲಿಯಾಗಿರುವ ಈ ಮಾಧ್ಯಮ ಸುದ್ದಿ ಪ್ರಸಾರಕ್ಕಷ್ಟೇ ಸೀಮಿತವಾಗಿಲ್ಲ, ಮನೋರಂಜನೆಯನ್ನೂ ನೀಡುವುದರಿಂದ ಅತ್ಯಂತ ಪ್ರಭಾವಶಾಲಿಯಾಗಿದೆ. ಹಿರಿಯ ಪತ್ರಕರ್ತ ಹಾಗೂ ರಾಜಕೀಯ ವಿಶ್ಲೇಷಕ ಪರಂಜಯ ಗುಹ ಠಾಕುರ್ತಾ ಅವರ ಅಭಿಪ್ರಾಯ ಇದು : "ಒಂದು ಉದ್ಯಮ ಸಮೂಹ ಮೂರು–ನಾಲ್ಕು ಸಾವಿರ ಕೋಟಿ ವೆಚ್ಚ ಮಾಡಿ ನ್ಯೂಸ್ ಚಾನಲ್ ಅದನ್ನು ಖರೀದಿ ಮಾಡುತ್ತಿದೆ ಎಂದರೆ ಏನಾಗಬಹುದು ? ನಾಲ್ವರು ಬಂಡವಾಳಗಾರರು ದೇಶದ ಮಹತ್ವದ ಮಾಧ್ಯಮಗಳನ್ನು ಖರೀದಿ ಮಾಡುತ್ತಿದ್ದರೆ, ಇದರರ್ಥ, ಮಾಧ್ಯಮದ ಚಿಂತನೆಯ ಮೇಲೆ ಅವರೇ (ಬಂಡವಾಳಗಾರರು) ಅಧಿಕಾರ ಚಲಾಯಿಸುವವರಾಗಿದ್ದಾರೆ ಎಂದರ್ಥ. ಆ ಬಂಡವಾಳ ಹೂಡಿದವರು



ಆ ಅಧಿಕಾರ ಮತ್ತು ಅಧಿಕಾರಸ್ಥರ ಹಿತವನ್ನು ಕಾಪಾಡುವವರಾಗಿರುತ್ತಾರೆ.”

ಇನ್ನೂ ಐವತ್ತು ವರ್ಷಗಳು ತುಂಬದ ಟಿ.ವಿ. ಲೋಕ ಈಗ ಭಾರತದ ಎಲ್ಲ ಭಾಷೆಗಳಲ್ಲೂ ಹಗಲಿರುಳೂ ವರ್ಣರಂಜಿತವಾಗಿ ಪ್ರಸಾರದಲ್ಲಿ ತೊಡಗಿದೆ. ಸಾವಿರಾರು ಚಾನೆಲ್‌ಗಳು ವೀಕ್ಷಕರಿಗೆ ಲಭ್ಯ. ಅದಕ್ಕಾಗಿ ಕೇಬಲ್ ನೆಟ್‌ವರ್ಕ್‌ಗಳು, ಟಾಟಾ ಸ್ಕೈ, ಡಿಟಿಎಚ್, ವಿಡಿಯೊಕಾನ್ ಮುಂತಾದವು ಸೇವೆ ಒದಗಿಸಲು ಸಿದ್ಧವಾಗಿವೆ. ಹಾಗಿದ್ದರೂ ಇಂದೂ ಕೂಡ ಸರಕಾರದ ಒಡೆತನದಲ್ಲಿರುವ ದೂರದರ್ಶನ ಚಾನೆಲ್‌ಗಳು ದೇಶದ ಮೂಲೆಮೂಲೆಗಳನ್ನೂ ತಲುಪುವ ವ್ಯಾಪಕ ವ್ಯವಸ್ಥೆ ಹೊಂದಿವೆ. ಆದರೆ ಖಾಸಗೀ ಚಾನೆಲ್‌ಗಳ ಭರಾಟೆ ಜೋರಾಗಿದೆ. ಪ್ರತಿಯೊಂದು ಚಾನೆಲ್‌ಗಳೂ ಸುದ್ದಿವಾಹಿನಿ ಜೊತೆಗೆ ಮನೋರಂಜನೆ ಬೇರೆ ನೀಡುತ್ತವೆ. ಅವು ಪ್ರಾರಂಭವಾದದ್ದು ೯೦ರ ದಶಕದಲ್ಲಿ. ಉದಾರೀಕರಣ, ಜಾಗತೀಕರಣ, ಮುಕ್ತಮಾರುಕಟ್ಟೆ ನೀತಿಗೆ ಮಾರುಹೋದಮೇಲೆ ವಿದೇಶೀ ಚಾನೆಲ್‌ಗಳಾದ ಸಿಎನ್‌ಎನ್, ಸ್ಟಾರ್ ಟಿ.ವಿ.ಗಳ ಜೊತೆಗೆ ದೇಸೀ ಖಾಸಗೀ ಚಾನೆಲ್‌ಗಳೂ ಪ್ರಾರಂಭವಾದವು. ಆಗ ಸ್ಟಾರ್ ಟಿ.ವಿ. ನೆಟ್‌ವರ್ಕ್ ಭಾರತದಲ್ಲಿ ಎಂ.ಟಿ.ವಿ., ಸ್ಟಾರ್ ಪ್ಲಸ್, ಸ್ಟಾರ್ ಮೂವೀಸ್, ಬಿಬಿಸಿ, ಪ್ರೈಮ್ ಸ್ಪೋರ್ಟ್ಸ್ ಮೊದಲಾದ ಐದು ಚಾನೆಲ್‌ಗಳನ್ನು ಪ್ರಾರಂಭಿಸಿತು. ಅದರ ಜೊತೆಯಲ್ಲೇ ಭಾರತದ ಮೊದಲ ಖಾಸಗೀ ಚಾನೆಲ್ ಝೀ ಟಿ.ವಿ. ಶುರುವಾಯಿತು. ಅನಂತರ ಏಶಿಯಾ ನೆಟ್ ಟೆಲಿವಿಷನ್ ನೆಟ್‌ವರ್ಕ್ ಹಲವು ಚಾನೆಲ್‌ಗಳ ಮೂಲಕ ಕನ್ನಡ, ತೆಲುಗು, ಮಲೆಯಾಳಂ, ತಮಿಳು ಭಾಷೆಗಳಲ್ಲಿ ಪ್ರಸಾರದಲ್ಲಿ ತೊಡಗಿತು. ಕೆಲವರ್ಷಗಳ ನಂತರ ಡಿಸ್ಕವರಿ ಚಾನೆಲ್, ನ್ಯಾಷನಲ್ ಜಿಯಾಗ್ರಫಿಕ್ ಚಾನೆಲ್‌ಗಳು ಕೂಡ ಪ್ರಸಾರ ಮಾಡತೊಡಗಿದುವು. ಇವೆಲ್ಲ ಬಂದದ್ದು ೧೯೯೦–೨೦೦೦ದ ಕಾಲದಲ್ಲಿ.

ದಕ್ಷಿಣ ಭಾರತದಲ್ಲಿ ಮೊದಲ ಖಾಸಗಿ ಚಾನೆಲ್ ಬಂದದ್ದು ೧೯೯೨ರಲ್ಲಿ ಸನ್ ಟಿ.ವಿ. ನೆಟ್‌ವರ್ಕ್ ಮೂಲಕ. ಇಪ್ಪತ್ತು ಚಾನೆಲ್‌ಗಳನ್ನು ಹೊಂದಿದ್ದ ಈ ಟಿವಿ ಜಾಲಬಂಧ ಕನ್ನಡ, ತೆಲುಗು, ಮಲೆಯಾಳಂ, ತಮಿಳು ಭಾಷೆಗಳಲ್ಲಿ ಪ್ರಸಾರ ಪ್ರಾರಂಭಿಸಿತು. ಕನ್ನಡದಲ್ಲಿ ಅದು ಉದಯ ಟಿ.ವಿ. ಎಂಬ ಹೆಸರು ಪಡೆಯಿತು. ಆಂಧ್ರಪ್ರದೇಶದ ಜನಪ್ರಿಯ ದಿನಪತ್ರಿಕೆ ‘ಈ ನಾಡು’, ಅದೇ ಹೆಸರಿನಲ್ಲಿ ತೆಲುಗು, ಕನ್ನಡ, ತಮಿಳು, ಮಲೆಯಾಳಂ ಭಾಷೆಗಳಲ್ಲಿ ಚಾನೆಲ್‌ಗಳನ್ನು ಸ್ಥಾಪಿಸಿ ಕಾರ್ಯಕ್ರಮಗಳನ್ನು ಪ್ರಸಾರ ಮಾಡತೊಡಗಿತು. ಅನಂತರ ‘ಈ ನಾಡು’ ಇತರ ಭಾಷೆಗಳಿಗೂ ವಿಸ್ತರಿಸಿತು. ಈಗ ‘ಈ ನಾಡು’ ತೆಲುಗು ಒಂದನ್ನು ಬಿಟ್ಟು ಉಳಿದ ಎಲ್ಲ ಭಾಷೆಗಳ ಚಾನೆಲ್‌ಗಳೂ ಭಾರತದ ಬಹುದೊಡ್ಡ ಉದ್ದಿಮೆದಾರರಾದ ಅಂಬಾನಿಗಳ ತೆಕ್ಕೆಗೆ ಬಂದಿದೆ. ಅಂಬಾನಿಗಳ ಕಾರ್ಪೊರೇಟ್ ದೇಶದ ಶೇ. ೬೦ರಷ್ಟು ಚಾನೆಲ್‌ಗಳ ಒಡೆತನ ಹೊಂದಿದೆ ಎಂದು ಒಂದು ಅಂದಾಜು. ಮದ್ಯದ ದೊರೆ ಎನಿಸಿಕೊಂಡಿರುವ ವಿಜಯಮಲ್ಯ ಕೂಡ ಒಂದು ಕಾಲದಲ್ಲಿ ತಮಿಳಿನ ವಿಜಯ ಟಿ.ವಿ. ಚಾನೆಲ್‌ನ ಒಡೆತನ ಪಡೆದುಕೊಂಡಿದ್ದರು. ಹೀಗೆ ಪ್ರಾರಂಭಗೊಂಡ ಖಾಸಗೀ ಟಿವಿ ಚಾನೆಲ್‌ಗಳು ಇಂದು ದೊಡ್ಡ ಸಂಖ್ಯೆಯಲ್ಲಿ ಬೆಳೆದಿವೆ. ಹೆಚ್ಚು ಕಡಿಮೆ ಇಂದು ವೀಕ್ಷಕರಿಗೆ ನಾನಾ ಭಾಷೆಗಳಲ್ಲಿ ಒಂದು ಸಾವಿರಕ್ಕೂ ಹೆಚ್ಚು ಚಾನೆಲ್‌ಗಳ ಆಯ್ಕೆ ಇದೆ. ಅತ್ಯಂತ ಪ್ರಭಾವಶಾಲಿಯಾಗಿ ಬೆಳೆದಿರುವ ಈ ಮಾಧ್ಯಮ ಆಧುನಿಕ ಜೀವನಶೈಲಿಯ ಅವಿಭಾಜ್ಯ ಅಂಗವಾಗಿದೆ. ಮಕ್ಕಳಿಗೆ ಮನೋರಂಜನೆ ಒದಗಿಸಲು ಕಾರ್ಟೂನ್ ನೆಟ್‌ವರ್ಕ್, ವಿಎಚ್–೧, ಡಿಸ್ನಿ, ಟೂನ್ ಡಿಸ್ನಿ ಮೊದಲಾದ ಚಾನೆಲ್‌ಗಳಿವೆ. ೨೦೦೧ರಲ್ಲಿ ಅಂತರರಾಷ್ಟ್ರೀಯ ಚಾನೆಲ್‌ಗಳಾದ ಹೆಚ್‌ಬಿಓ, ಹಿಸ್ಟರಿ ಚಾನೆಲ್‌ಗಳು ಸೇರಿದುವು.

Z ಅತ್ಯಂತ ಜನಪ್ರಿಯವೆನಿಸಿರುವ ಇಂಗ್ಲಿಷ್ ಚಾನೆಲ್‌ಗಳು ಎನ್‌ಡಿ ಟಿವಿ, ಸಿಎನ್‌ಎನ್, ಐಬಿಎನ್, ಆಜ್‌ತಕ್, ಟೈಂಸ್ ನೌ ಮೊದಲಾದವು. ಇದರ ಜೊತೆಗೆ ಚಲನಚಿತ್ರಗಳನ್ನು ಬಿತ್ತರಿಸುವ ಯುಟಿವಿ, ಯುಟಿವಿ ಬಿಂದಾಸ್, ಝೂಮ್ ಕಲರ್ಸ್, ೯X, ೯XM ಮೊದಲಾದವೂ ಸೇರಿವೆ. ಪ್ರತಿಯೊಂದು ಚಾನೆಲ್‌ಗಳು ಸುದ್ದಿ ಪ್ರಸಾರದ ಜೊತೆಗೆ, ಬಗೆಬಗೆಯ ಮನೋರಂಜನೆ ಒದಗಿಸುವ ಚಾನೆಲ್‌ಗಳನ್ನು ಹೊಂದಿವೆ. ಸಂಪೂರ್ಣವಾಗಿ ಕ್ರೀಡಾ ಪ್ರಪಂಚಕ್ಕೇ ಮೀಸಲಾಗಿರುವ ಚಾನೆಲ್‌ಗಳಿವೆ. ಭಾರತದಲ್ಲಿ ಅತ್ಯಂತ ಜನಪ್ರಿಯವಾಗಿರುವ ಕ್ರೀಡೆ ಎಂದರೆ ಕ್ರಿಕೆಟ್. ವರ್ಷಪೂರ್ತಿ ಕ್ರಿಕೆಟ್‌ಅನ್ನೇ ಪ್ರಸಾರಮಾಡುವ ಚಾನೆಲ್‌ಗಳೂ ಇವೆ. ಅಂತರರಾಷ್ಟ್ರೀಯ ಪಂದ್ಯಗಳು ಜರುಗಿದಾಗ ಇದು ಪ್ರೇಕ್ಷಕರನ್ನು ಹಿಡಿದಿರಿಸುತ್ತದೆ. ಅದರಲ್ಲಿ ಕೋಟಿಗಟ್ಟಲೆ ಸಂಪಾದನೆಯೂ ಇದೆ. ಚಾನೆಲ್‌ಗಳಿಗಷ್ಟೇ ಅಲ್ಲದೆ ಆಟಗಾರರಿಗೂ ಅಧಿಕ ಲಾಭವಿದೆ.




ಇಂದು ಬೃಹತ್ ಉದ್ಯಮವಾಗಿ ಬೆಳೆದಿರುವ ಟೆಲಿವಿಷನ್ ಮಾಧ್ಯಮ ಹತ್ತಾರು ಸಹಸ್ರ ಜನರಿಗೆ ಉದ್ಯೋಗ ಒದಗಿಸಿದೆ. ಸಾವಿರಾರು ವೃತ್ತಿಪರ ಹಾಗೂ ಹವ್ಯಾಸಿ ಕಲಾವಿದರಿಗೆ ಅವಕಾಶ ಕಲ್ಪಿಸಿಕೊಟ್ಟಿದೆ ತಮ್ಮ ಪ್ರತಿಭೆ ತೋರಲು. ಇಷ್ಟೆಲ್ಲಾ ಬೆಳೆದಿದ್ದರೂ ಈ ಉದ್ಯಮ ಲಾಭ ನಷ್ಟಗಳ ತೂಗುಯ್ಯಾಲೆಯಲ್ಲಿದೆ ಚಲನಚಿತ್ರೋದ್ಯಮದಂತೆ. ಒಂದು ಅಂದಾಜಿನ ಪ್ರಕಾರ ಹೆಚ್ಚಿನ ಚಾನೆಲ್‌ಗಳು ನಷ್ಟದಲ್ಲಿವೆ. ಟೆಲಿವಿಷನ್ ಕೇಂದ್ರಗಳಿಗೆ ಆದಾಯದ ಮೂಲ ಜಾಹಿರಾತು. ವೃತ್ತಪತ್ರಿಕೆಗಳಂತೆಯೇ ಜಾಹಿರಾತೇ ಜೀವಾಳ. ಅಂದರೆ ಮತ್ತೆ ಕಾರ್ಪೊರೇಟ್ ಕಂಪೆನಿಗಳ ಮೇಲೆ ಅವಲಂಬಿತ ಎಂದಾಯಿತು. ವೃತ್ತಪತ್ರಿಕೆಗಳಲ್ಲಿ, ಅದರಲ್ಲೂ ರಾಷ್ಟ್ರವ್ಯಾಪಿಯಾಗಿ ಹಲವು ಆವೃತ್ತಿಗಳನ್ನು ಹೊಂದಿರುವ ಪತ್ರಿಕೆಗಳಲ್ಲಿ ಎಲ್ಲ ಆವೃತ್ತಿಗಳಲ್ಲೂ ಪ್ರಕಟವಾಗುವ ಒಂದು ಜಾಹಿರಾತಿಗೆ ಒಂದೂವರೆ ಕೋಟಿ ರೂಪಾಯಿ ಅಂತೆ. ಕಳೆದ ಚುನಾವಣೆಗಳಲ್ಲಿ ಕಾಂಗ್ರೆಸ್ ಮತ್ತು ಭಾಜಪಗಳು ಇದಕ್ಕಾಗಿ ಎಷ್ಟು ಖರ್ಚು ಮಾಡಿರಬಹುದು ಊಹಿಸಿಕೊಳ್ಳಿ. ವೃತ್ತಪತ್ರಿಕೆಗಳ ಜನಪ್ರಿಯತೆ, ಪ್ರತಿಗಳ ಮಾರಾಟ ಆಧರಿಸಿ ಜಾಹಿರಾತು ದರಗಳು ನಿಷ್ಕರ್ಷೆಯಾಗುತ್ತವೆ. ಹಾಗೆಯೇ ಟೆಲಿವಿಷನ್ ಚಾನೆಲ್‌ಗಳ ಜಾಹಿರಾತಿನ ಮಾನದಂಡವೂ ಕೂಡ ಪ್ರೇಕ್ಷಕವೃಂದದ ಮರ್ಜಿಯ ಮೇಲೆ ನಿರ್ಧಾರವಾಗುತ್ತದೆ. ಪ್ರತಿ ಹತ್ತು ಸೆಕೆಂಡ್ ಜಾಹಿರಾತಿಗೆ ರೂ. ೪೦೦ರಿಂದ ೧೦೦೦ರೂ.ವರೆಗೆ ಜಾಹಿರಾತು ದರ ಇರುತ್ತದೆ. ಇದನ್ನು ನಿರ್ಧರಿಸುವುದಕ್ಕೆ ಟೆಲಿವಿಷನ್ ರೇಟಿಂಗ್ ಪಾಯಿಂಟ್ ಎಂಬ ವ್ಯವಸ್ಥೆ ಇದೆ, ಇದನ್ನೇ ಚುಟುಕಾಗಿ ‘ಟಿಆರ್‌ಪಿ’ ಎನ್ನುತ್ತಾರೆ ಮಾಧ್ಯಮ ವಲಯದಲ್ಲಿ. ಕಾರ್ಯಕ್ರಮವೊಂದರಲ್ಲಿ ಜಾಹಿರಾತಿನ ಪ್ರಮಾಣ ೨೪೦ ಸೆಕೆಂಡ್‌ಗಳಿಗೆ ಮೀರಿರಬಾರದು ಎಂಬುದು ನಿಯಮ. ಆದರೆ ಅದರ ಉಲ್ಲಂಘನೆಯೇ ಹೆಚ್ಚು. ಟಿಆರ್‌ಪಿ ಕಡಿಮೆಯಾದರೆ ಜಾಹಿರಾತು ಕಮ್ಮಿಯಾಗುವುದು. ಅಂದರೆ, ಚಾನೆಲ್‌ನ ವರಮಾನ ಕಡಿಮೆಯಾಗುವುದು. ಹಾಗಾಗಿ ಕಾರ್ಪೊರೇಟ್ ಬಂಡವಾಳಗಾರರ ಹಿಡಿತದಲ್ಲಿರುವ ಈ ಮಾಧ್ಯಮ ವೀಕ್ಷಕರಾದ ಜನಸಾಮಾನ್ಯರ ಮೇಲೆ ಅವಲಂಬಿತ. ಅದಕ್ಕಾಗಿ ಮಾಧ್ಯಮ ಏನೆಲ್ಲ ಸರ್ಕಸ್ ಮಾಡುತ್ತದೆ ಎನ್ನುವುದು ಬೇರೆಯ ವಿಚಾರ. ಅದನ್ನು ಮುಂದೆ ಪರಿಶೀಲಿಸೋಣ.

ಅತ್ಯಂತ ಪ್ರಭಾವಶಾಲಿಯಾದ ಪ್ರಿಂಟ್ ಮಾಧ್ಯಮ ಹಾಗೂ ದೃಶ್ಯಮಾಧ್ಯಮಗಳ ಮೇಲೆ ನಿಯಂತ್ರಣ ಹೊಂದಿರುವ ಬಂಡವಾಳಗಾರರು ಒಂದು ಬಗೆಯಲ್ಲಿ ಅಭಿವ್ಯಕ್ತಿ ಸ್ವಾತಂತ್ರ್ಯವನ್ನೂ ನಿಯಂತ್ರಿಸುತ್ತಿದ್ದಾರೆ. ಮರಾಠಿ ಪತ್ರಕರ್ತ ನಿಖಿಲ್ ವಾಗಳೆ ಎಂಬುವರು ಹೇಳುವ ಪ್ರಕಾರ, “ಈಗ ಈ ದೇಶದಲ್ಲಿ ಯಾವುದೇ ಸರಕಾರ ಘೋಷಿತ ತುರ್ತು ಪರಿಸ್ಥಿತಿಯನ್ನೂ ಹೇರುವುದಿಲ್ಲ. ಆದರೆ ಕೆಲವು ಬಂಡವಾಳಶಾಹಿಗಳು ವಿಶಿಷ್ಟ ಸಾಮಾಜಿಕ ಘಟಕಗಳ ಬಲದಿಂದ ಈ ದೇಶದೊಳಗೆ ಮಾಧ್ಯಮಗಳ ಹಾಗೂ ಒಟ್ಟು ಅಭಿವ್ಯಕ್ತಿ ಸ್ವಾತಂತ್ರ್ಯದ ಕತ್ತನ್ನು ಹಿಸುಕಲಿದ್ದಾರೆ. ಇದನ್ನು ಲಕ್ಷ್ಯದಲ್ಲಿಡಬೇಕು.” ಮುಂದುವರಿದು ಅವರು ಹೇಳಿರುವುದು ಗಮನಾರ್ಹ: “ದೇಶದೊಳಗಿನ ಬಂಡವಾಳಶಾಹಿಗಳು ಇಂದು ರಾಜಕೀಯ ಪಕ್ಷದ ನೆರವಿನಿಂದ ದೇಶದ ಮಾಧ್ಯಮಗಳ ಸ್ವಾತಂತ್ರ್ಯದ ಮೇಲೆ ಹಿಡಿತ ಸಾಧಿಸಲು ಹವಣಿಸುತ್ತಿದ್ದಾರೆ. ದೇಶದ ಪ್ರಜಾಪ್ರಭುತ್ವದ ದೃಷ್ಟಿಯಿಂದ ಇದು ಅತ್ಯಂತ ಭಯಸೂಚಕ ವಿದ್ಯಮಾನವಾಗಿದೆ. ಅತ್ಯಂತ ವಿಚಿತ್ರ ಪರಿಸ್ಥಿತಿ ನಿರ್ಮಾಣಗೊಳ್ಳುವುದರ ಆರಂಭ ಸೂಚಿಯಾಗಿದೆ.”

***(ಮುಂದುವರಿಯುವುದು)***

**ಸಿ. ಆರ್. ಕೃಷ್ಣರಾವ್**
‘ಚೌಬೀನ’, ನಂ. ೮೪೯, ೬ನೇ ಕ್ರಾಸ್, ಬನಶಂಕರಿ ೩ನೇ ಹಂತ
೩ನೇ ಬ್ಲಾಕ್, ಕತ್ರಿಗುಪ್ಪೆ, ಬೆಂಗಳೂರು – ೫೬೦ ೦೮೫



# ಪುಸ್ತಕ ಲೋಕಾರ್ಪಣೆ ಪ್ರಹಸನವು...

**‘ಓದುವವರು ಓದುವತನಕ, ಪ್ರಕಾಶಕರು ಪ್ರಕಟಿಸುವತನಕ, ನಾನು ಬರೆಯಲು ಯೋಜಿಸುವ ತನಕ ನನ್ನ ಈ ವೃತ್ತಿಯಲ್ಲಿ ನಾನು ಮೂರ್ಖನೇ.’**

*– ಲೀ ಚೈಲ್ಡ್ (ಬ್ರಿಟನ್ನಿನ ರೋಚಕ ಬರಹಗಾರ)*

ಈ ಉದ್ಧರಣಕ್ಕೆ ಸಂವಾದಿಯಾಗಿ ‘ಇಂದಾಯಿತೆ ನಿಮ್ಮ ಗ್ರಂಥ ಬಿಡುಗಡೆ. ತೆಗೆದಿಡಿ ಈಗಲೆ ಅದನ್ನು ಒಳಗಡೆ’ ಎಂಬ ವ್ಯಂಗ್ಯೋಕ್ತಿಯಿದೆ. ಹೊಸ ಪುಸ್ತಕವೊಂದರ ಬಿಡುಗಡೆ ಎಂದಾಗ ಹಲವು ಪ್ರಶ್ನೆಗಳು ಪುಟಿದೇಳುತ್ತವೆ. ಅದು ಈವರೆಗೆ ಎಲ್ಲಿ, ಏಕೆ ಬಂಧಿಯಾಗಿತ್ತು ? ಹಿಡಿದಿಟ್ಟುಕೊಂಡಿದ್ದವರು ಯಾರು ? ಯಾವ ಕಾರಣಕ್ಕಾಗಿ ಬಿಡುಗಡೆಯಾಗುತ್ತಿದೆ ? ಅದಕ್ಕೆ ಅರ್ಹತೆಯೇನು ? ಅದು ಬಿಡುಗಡೆಯನ್ನು ಅರಸುತ್ತಿದ್ದುದಾದರೂ ಏಕೆ ? ಪುಸ್ತಕ ಇನ್ನೊಮ್ಮೆ ಸೆರೆಯಾಗುವುದಿಲ್ಲ ಎನ್ನಲು ಏನು ಖಾತರಿ ? ನನ್ನ ಶಿಷ್ಯ ನಾಣಿ ಪತ್ರಿಕೆಗಳಲ್ಲಿ ಕಥೆ, ಕವನ ಬರೆಯುತ್ತಾನೆ. ಐವತ್ತು, ಅರವತ್ತು ಐಟಂ ಆಗುವುದೆ ತಡ ತಂದೇ ಬಿಡುತ್ತಾನೆ ಒಂದು ಸಂಕಲನ. ಮೊನ್ನೆ ಶನಿವಾರ ಸಂಜೆ ಗಾಂಧಿಬಜಾರ್‌ನಲ್ಲಿ ಸಿಕ್ಕ. “ಸಾರ್, ನಾಳೆಯೆ ನನ್ನ ಕೃತಿ ‘ಇನ್ನೇನು ?’ ಬಿಡುಗಡೆ... ಬಂದ್ಬುಡಿ ಸಾರ್ ಅರ್ಧ ತಾಸು ಮೊದ್ಲೆ” ಅಂತ ಆಮಂತ್ರಣ ಪತ್ರಿಕೆ ಕೈಗಿತ್ತ. ಆಕಾಶದಿಂದ ದೊಡ್ಡ ಉಲ್ಕೆಯೊಂದು ನಾಳೆ ಅಪ್ಪಳಿಸುತ್ತದೆಯೊ ಎನ್ನುವ ಹಾಗಿತ್ತು ಅವನ ಏದುಸಿರು ! “ಸಾರ್, ಯಾರಿಂದ ಬಿಡುಗಡೆ ಅಂತ ನೀವು ವಿಚಾರಿಸೋಕೆ ಮೊದ್ಲೇ ಹೇಳ್ಬುಡ್ತೀನಿ. ಬಂದಿರೊ ಎಲ್ಲರ ಕೈಲಿಂದ್ಲೂ ಬಿಡುಗಡೆ ಮಾಡಿಸ್ತೀನಿ ಬಿಡಾಕಿಲ್ಲ. ಆದ್ರೆ ಅವ್ರು ಅದಕ್ಕೆ ದುಡ್ಡು ಕೊಟ್ಟು ಪುಸ್ತಕ ಕೊಂಡಿರಬೇಕು, ಅಷ್ಟೆ” ಎಂದ. ಒಳ್ಳೆಯ ಅಭಿಯಾನವೆ. ಗೌರವಪೂರ್ವಕವಾಗಿ ಅತಿಥಿಗಳಿಗೆ ಪ್ರತಿಗಳನ್ನು ಕೊಡಬೇಕಿಲ್ಲ. ಬಿಡುಗಡೆ ಸಂದರ್ಭದಲ್ಲೇ ಮಾರಾಟಕ್ಕೆ ಐನಾತಿ ಟೇಕಾಫ್ ಕೂಡ. ಅಂದಹಾಗೆ ಬಿಡುಗಡೆಗೆ ಪರ್ಯಾಯವಾಗಿ ‘ಲೋಕಾರ್ಪಣೆ’ ಎಂಬ ಪದ ಬಳಕೆಯಾಗುತ್ತಿದೆ. ಗ್ರಂಥ ಬಿಡುಗಡೆಗೊಳಿಸುವ ಸಂದರ್ಭದಲ್ಲಿ ಸಾಕಷ್ಟು ಪ್ರತಿಗಳನ್ನು ‘ಗೌರವ ಪೂರ್ವಕವಾಗಿ’ ನೀಡಬೇಕಾದುದರಿಂದ ಈ ಪದ ಅನ್ವರ್ಥವೆನ್ನೋಣ. ಅಬ್ಬ ! ಕಡೆಗೂ ನನ್ನ ಪುಸ್ತಕವೂ ಬಿಡುಗಡೆಯ ಭಾಗ್ಯ ಕಂಡಿತು ಎಂದು ತಮ್ಮ ‘ಚೊಚ್ಚಲ ಹೆರಿಗೆ’ಗೆ ಉದಯೋನ್ಮುಖ ಸಾಹಿತಿಗಳ ನಿಟ್ಟುಸಿರು. ಸದ್ಯ, ಈಗ ನನ್ನ ಕೃತಿಗಳ ಸಂಖ್ಯೆ ಇಷ್ಟು ಅಂತ ತಕ್ಕಮಟ್ಟಿಗೆ ಪ್ರಸಿದ್ಧರ ಬೀಗು. ಲೇಖಕ ಹಾಗೂ ಸ್ವಯಂ ಪ್ರಕಾಶಕರಾದವರಿಗೋ ತಮ್ಮ ಕೃತಿ ಹೊರಬಂದಾಗ ಸಮರ ಜಯಿಸಿದಷ್ಟೆ ನಿರಾಳ ಸರಿಯೆ. ಆದರೆ ಈ ಹಿಗ್ಗನ್ನು ಅಟ್ಟಿಸಿಕೊಂಡು ಬಂದಿರುತ್ತದೆ ದೊಡ್ಡದೆ ಸವಾಲು. ಅದೇ ಸ್ವಾಮಿ ...ಪ್ರತಿಗಳ ಮಾರಾಟ. ರಷ್ಯಾದಲ್ಲಿ ‘ಪ್ರಕಟಿಸು ಅಥವಾ ಇಹ ತೊರೆ’ ಎಂಬ ಗಾದೆಯುಂಟು. ‘ಅಥವಾ’ ತೆಗೆದು ‘ಮತ್ತು’ ಹಾಕೋಣವೆ ?! ಮೂರುವರೆ ದಶಕಗಳ ಹಿಂದಿನ ಮಾತು. ನಾನು ಅರವತ್ತು ಪುಟಗಳ ವಿಜ್ಞಾನ ಬರಹಗಳ ‘ರಶ್ಮಿ’ ಎಂಬ ಕಿರುಹೊತ್ತಿಗೆಯೊಂದನ್ನು ಹೊರತಂದಿದ್ದೆ. ಸಾವಿರ ಪ್ರತಿಗಳ ಮಾರಾಟಕ್ಕೆ ಬೇಡ ನನ್ನ ತಾರಾಟ. ಬಿಡುಗಡೆ ಸಮಾರಂಭದಲ್ಲಿ ವೇದಿಕೆ ಅಲಂಕರಿಸಿದವರ ಸಂಖ್ಯೆ ಸಭಿಕರದ್ದನ್ನು ದಾಟಲು ನಾನೇ ಹೊಣೆ. ಪ್ರಾಸ್ತಾವಿಕವಾಗಿ ಮಾತನಾಡುತ್ತಾ ಅವರನ್ನು ಇಂಥವರು, ಅಂಥವರು ಅಂತ ಹೊಗಳಿ ಕೂರಿಸಿದ್ದೆ. ಪರಿಣಾಮವಾಗಿ ಪುಸ್ತಕ ಬಿಡುಗಡೆಯಾದಾಗ ಎಲ್ಲರಿಗೂ ಒಂದು ಪ್ರತಿ ಕೈಸೇರಿಸುವುದು ಅನಿವಾರ್ಯವಾಯಿತು. ವೇದಿಕೆಯಲ್ಲಿ ಒಂದು

---

**ಬಿಂಡಿಗನವಿಲೆ ಭಗವಾನ್**

---

ಮೊನ್ನೆ ಶನಿವಾರ ಸಂಜೆ ಗಾಂಧಿಬಜಾರ್‌ನಲ್ಲಿ ಸಿಕ್ಕ. ಸಾರ್, “ನಾಳೆಯೆ ನನ್ನ ಕೃತಿ ‘ಇನ್ನೇನು ?’ ಬಿಡುಗಡೆ... ಬಂದ್ಬುಡಿ ಸಾರ್ ಅರ್ಧ ತಾಸು ಮೊದ್ಲೆ” ಅಂತ ಆಮಂತ್ರಣ ಪತ್ರಿಕೆ ಕೈಗಿತ್ತ. ಆಕಾಶದಿಂದ ದೊಡ್ಡ ಉಲ್ಕೆಯೊಂದು ನಾಳೆ ಅಪ್ಪಳಸುತ್ತದೆಯೊ ಎನ್ನುವ ಹಾಗಿತ್ತು ಅವನ ಏದುಸಿರು ! ‘‘ಸಾರ್, ಯಾರಿಂದ ಬಿಡುಗಡೆ ಅಂತ ನೀವು ವಿಚಾರಿಸೋಕೆ ಮೊದ್ಲೇ ಹೇಳ್ಬುಡ್ತೀನಿ. ಬಂದಿರೊ ಎಲ್ಲರ ಕೈಲಿಂದ್ಲೂ ಬಿಡುಗಡೆ ಮಾಡಿಸ್ತೀನಿ ಬಿಡಾಕಿಲ್ಲ. ಆದ್ರೆ ಅವ್ರು ಅದಕ್ಕೆ ದುಡ್ಡು ಕೊಟ್ಟು ಪುಸ್ತಕ ಕೊಂಡಿರಬೇಕು ಅಷ್ಟೆ ’’ ಎಂದ. ಒಳ್ಳೆಯ ಅಭಿಯಾನವೆ. ಗೌರವಪೂರ್ವಕವಾಗಿ ಅತಿಥಿಗಳಗೆ ಪ್ರತಿಗಳನ್ನು ಕೊಡಬೇಕಿಲ್ಲ. ಬಿಡುಗಡೆ ಸಂದರ್ಭದಲ್ಲೇ ಮಾರಾಟಕ್ಕೆ ಐನಾತಿ ಟೇಕಾಫ ಕೂಡ. ಅಂದಹಾಗೆ ಬಿಡುಗಡೆಗೆ ಪರ್ಯಾಯವಾಗಿ ಲೋಕಾರ್ಪಣೆ ಎಂಬ ಪದ ಬಳಕೆಯಾಗುತ್ತಿದೆ. ಗ್ರಂಥ ಬಿಡುಗಡೆಗೊಳಸುವ ಸಂದರ್ಭದಲ್ಲಿ ಸಾಕಷ್ಟು ಪ್ರತಿಗಳನ್ನು ‘ಗೌರವ ಪೂರ್ವಕವಾಗಿ’ ನೀಡಬೇಕಾದುದರಿಂದ ಈ ಪದ ಅನ್ವರ್ಥವೆನ್ನೋಣ.

ತುದಿಯಿಂದ ಇನ್ನೊಂದು ತುದಿಗೆ ನನ್ನ ಕೃತಿಯನ್ನು ಎತ್ತರಕ್ಕಿಡಿದು ಅವರೆಲ್ಲ ಕೆಮರಾಗೆ ಪೋಸ್ ನೀಡುತ್ತಿದ್ದರು. ಕಟ್ಟು ಬಿಚ್ಚುವ ಮೂಲಕ ಕೃತಿ ಬಿಡುಗಡೆಗೊಳಿಸಿದ ಅತಿಥಿವರ್ಯರು ಯಾಕ್ರೀ... ಬನ್ನಿ ನೀವೂನು ಎಂದರು. ಆದರೆ ಆಗಿದ್ದೇನು ಗೊತ್ತೇ ? ಮುದ್ರಣಾಲಯದಿಂದ ತತ್ಕಾಲಕ್ಕೆಂದು ತಂದಿದ್ದ ಮೂವತ್ತು ಪ್ರತಿಗಳೂ ವೇದಿಕೆಯಲ್ಲಿದ್ದವರ ಪಾಲಾಗಿತ್ತು. ಕಡೆಗೆ ಅತಿಥಿಗಳ ಪಕ್ಕದಲ್ಲಿ ನಿಂತು ಅವರ ಮೊಣಕೈ ತಗುಲಿಸಿ ಸಡಗರಿಸಬೇಕಾಯಿತು.

ನಮ್ಮ ಆಫೀಸಿನ ಚುಟುಕು ಕವಿ, ಕ್ಯಾಶಿಯರ್ ಸಂಪಂಗಿಯದು ಕಾವ್ಯ ರಚನೆಗೂ ಮೀರಿದ ವ್ಯವಹಾರ ಪ್ರತಿಭೆ. ಯಾರದೆ ಸಿಬ್ಬಂದಿ ಮನೆಯಲ್ಲಿ ಮದುವೆ, ಮುಂಜಿ, ಗೃಹಪ್ರವೇಶ, ಹುಟ್ಟಿದ ಹಬ್ಬ ಇತ್ಯಾದಿ ಸಂದರ್ಭವಿರಲಿ ಆತ ಮುಂದೆ ಬಂದು ಏನಾದ್ರು ಒಟ್ಟಿಗೆ ಸೇರಿ ಉಡುಗೊರೆ ನೀಡೋಣ ಎನ್ನುವವನು. ಎಲ್ಲರೂ ಒಪ್ಪಿ ತಲಾ ಅಷ್ಟು ಹಣ ನೀಡುವರು. ಸರಿ, ಸಮಾರಂಭದಲ್ಲಿ ಒಟ್ಟು ಸಂಗ್ರಹವಾದ ಮೊತ್ತಕ್ಕೆ ಸರಿಸಮಾನವಾಗಿ ತಾನು ಪ್ರಕಟಿಸಿದ ಕೃತಿಗಳನ್ನು ತಂದು ಆ ಮನೆ ಮಂದಿಗೆ, ಸಮೀಪದ ನೆಂಟರಿಷ್ಟರಿಗೆ ನೀಡುವನು. ಒಂದೇ ಕಲ್ಲಿಗೆ ಎರಡೇನು, ಹಲವು ಹಕ್ಕಿಗಳು ! ನೋಡಿ, ಈ ನನ್ನ ಪುಸ್ತಕ ಮೊನ್ನೆ ತಾನೆ ಬಿಡುಗಡೆಯಾಯಿತು. ನೀವು ಒಂದು ಪ್ರತಿ ಕೊಂಡು ಉತ್ತೇಜಿಸಿ ಅಂತ ಪರಿಚಿತ/ ಅರೆಪರಿಚಿತರ ಮುಂದೆ ಹೆಮ್ಮೆ, ನಿರೀಕ್ಷೆಯಿಂದ ಹಿಡಿದರೆ ಚಿತ್ರವಿಚಿತ್ರ, ನಯವಿನಯ ಪ್ರತಿಕ್ರಿಯೆಗಳು ಕೊಳ್ಳುವುದನ್ನು ಬಿಟ್ಟು! "ಒಂದೇನು, ಹತ್ತು ಖರ್ಚು ಮಾಡಿಸ್ತೀನಿ ಇರಿ. ನಮ್ಮವರೆಲ್ಲ ಓದೋರೆ... ಇಟ್ಕೊಂಡಿರಿ ಹೇಳ್ತೀನಿ" ಎಂದವರು ಉಲಿಯುತ್ತಿದ್ದಂತೆ ನಾವಿತ್ತಿರುವ ನಮ್ಮ ಕೃತಿ ನಮ್ಮ ಕೈಗೇ ಹಿಂದಿರುಗಿರುತ್ತದೆ. "ಖಂಡಿತ ಆಗ್ಲಿ. ಇಲ್ಲಿ ಕೊಡಿ. ನೀವು ಬರೆದಿರೋದು ಹೆಚ್ಚೊ, ನಾನು ಕೊಳ್ಳೋದು ಹೆಚ್ಚೊ. ಆಮೇಲೆ ದುಡ್ಡು ಕೊಡ್ಬೋದಲ್ಲ" ಅನ್ನುವ ಅಕ್ಷರಪ್ರಿಯರನ್ನು ಹೇಗೆ ನಿಭಾಯಿಸುವುದು ? ಬೆಂಗಳೂರಿನ ಹೊರ ಬಡಾವಣೆಯೊಂದರಲ್ಲಿ ನೆಲೆಸಿರುವ ನನ್ನ ಹಿರಿಯ ಸಾಹಿತಿ ಮಿತ್ರ 'ಶ್ರೀ ವಲ್ಲಭ'ರಲ್ಲಿ ನಾನು ಬಹು ಭರವಸೆ ಹೊಂದಿದ್ದೆ. ನನ್ನ ಎಲ್ಲ ಡಜನ್ ಪ್ರಕಟಣೆಗಳ ಎರಡೆರಡು ಪ್ರತಿಗಳನ್ನು ಅವರು ಸೋಡಿರಹಿತವಾಗಿಯೆ ಖರೀದಿಸಿಯಾರೆಂದು ಭಾವಿಸಿದ್ದೆ. ಆದರೆ ಆಗಿದ್ದು ಬೇರೆ. ಒಂದೊಂದಾಗಿ ಕೃತಿಗಳನ್ನು ಕಣ್ಣಲ್ಲಿ ಕಣ್ಣಿಟ್ಟು ಒಂದೆರಡು ಪುಟ ತೆರೆದು ನೋಡಿದರು. ಒಂದರ ಮೇಲೊಂದು ಓರಣವಾಗಿರಿಸಿದರು. ಎಣಿಸಿದರು. ಇದೋ ಬಂದೆ ಅಂತ ಆತ ಕೊಠಡಿಯೊಳಗೆ ಹೋದಾಗ ನಾನು ಬಂದ ಕೆಲಸ ಆಯಿತೆಂದುಕೊಳ್ಳಲು ಬೇರೆ ಲಕ್ಷಣ ಬೇಕೆ ? ಮೂರೇ ನಿಮಿಷಗಳ ನಂತರ ಮಹಾನುಭಾವರು ಒಂದು ಕಟ್ಟು ತಂದು ನನ್ನ ಮುಂದಿಟ್ಟರು. ಅವರ ಡಜನ್ ಕೃತಿಗಳು ! ಒಟ್ಟಿನಲ್ಲಿ ನನ್ನ ಭಾರ ಹೆಚ್ಚು ಮಾಡದಿದ್ದುದಕ್ಕೆ ನಾನು ನಿಮಗೆ ಆಭಾರಿ ಸಾರ್ ಅಂತ ಹೇಳಿ ಅವರ ಮನೆಯಿಂದ ಹೊರಬಂದಿದ್ದಾಯಿತು !

## ನಗದು

ಪ್ರಶಸ್ತಿ
ಪತ್ರದ
ಜೊತೆ
ಇರದಿದ್ದರೆ ನಗದು
ಕವಿಯ
ಮುಖ
ಖಂಡಿತ ನಗದು

**ಗೀತಾಶಾಸ್ತ್ರಿ**
ಬೆಂಗಳೂರು – ೨೮

ನನ್ನ 'ಪರದಾಟ' ಕಾದಂಬರಿಯ ಹದಿನೈದು ಪ್ರತಿಗಳನ್ನು 'ಜೈ ಜೈ ಬುಕ್ ಹೌಸ್'ಗೆ 'ಮಾರು ಇಲ್ಲ ಹಿಂದಿರುಗಿಸು' ಷರತ್ತಿನನ್ವಯ ನೀಡಿದ್ದೆ. ಏನಿದ್ರೂ ಎರಡು ಮೂರು ತಿಂಗಳಾದ ಮೇಲೇನೆ ಈ ಹಾದಿ ನಿಮ್ದು ಸಾರ್ ಎಂದಿದ್ದರು ಮಾಲೀಕರು ರವೀಶ್. ಕುತೂಹಲ ಎನ್ನುವುದುಂಟಲ್ಲ. ಎರಡೂವರೆ ತಿಂಗಳಾಯಿತು. ಆಗಲೇ ನನಗೆ ತವಕ, ತಲ್ಲಣ. ನಿಮ್ಮಲ್ಲಿ 'ಪರದಾಟ' ಸಿಗುತ್ತಾ ಅಂತ ಯಾರೊ ವಿಚಾರಿಸುವವರಂತೆ ಮೊಬೈಲಾಯಿಸಿದೆ. "ಅಯ್ಯೊ... ಬನ್ನಿ ಸ್ವಾಮಿ ಈಗಲೇ. ಎಷ್ಟು ಕಾಪಿಯಾದ್ರೂ ಕೊಡೋಣ. ನೀವು ಇದ್ದಲ್ಲಿಗೆ ಕಳಿಸೋಕು ನಾವು ರೆಡಿ" ಎಂಬ ಧ್ವನಿ ಮೊಳಗಿತ್ತು. ಇನ್ನೂ ಬೋಣಿಯೂ ಆಗಿಲ್ಲವೆಂಬ ಸಂದೇಶ ಆ ಮೊರೆತದಲ್ಲಿತ್ತು. ನೋಡು ದೊರೆ, ನಿನ್ನದು ಜನ ತೂಕದ ಸಾಹಿತ್ಯ ಅಂತ ಜನ ಗುರುತಿಸುವ ಮೊದಲೇ ನಿನ್ನ ಒಂದೊಂದು ಕೃತಿಯ ಅರ್ಧದಷ್ಟು ಪ್ರತಿಗಳನ್ನಾದರೂ ಮಾರುವ ಏರ್ಪಾಡು ಮಾಡಿಕೊ ಅಂತ ನಮ್ಮ ಶೇಷು ಅಂಕಲ್ ಆಗಾಗ ಕಿವಿಮಾತು ಹೇಳುತ್ತಾರೆ. ಪುಸ್ತಕ ಪ್ರಕಟಣೆ ಸುಲಭ ಎನ್ನುವವರು ಒಂದೊ ಅವರು ನಿಜ ಹೇಳುತ್ತಿಲ್ಲ. ಇನ್ನೊಂದು ಅವರ ಪುಸ್ತಕ ಸತ್ವರಹಿತ ಎನ್ನುವ ಮಾತಿದೆ. ಖಂಡಿತ ಇದಕ್ಕೆ ಧಾರಾಳವಾಗಿ ಅಪವಾದಗಳಿವೆ. ಈಚೆಗೆ ನಾನು ಆವಲಹಳ್ಳಿಯಲ್ಲಿ ಸಣ್ಣ ಮನೆ ಕಟ್ಟಿಸುತ್ತಿದ್ದೆ. ನನಗೆ ಅಲ್ಪಸ್ವಲ್ಪ ಬರೆಯುವ ಹವ್ಯಾಸವಿದೆಯೆಂದು ಹೇಗೋ ಗ್ರಹಿಸಿದ ಮೇಸ್ತ್ರಿ ವೇಲು "ಎನ್ನ ಸ್ವಾಮಿ, ಸೈಟ ಚಿನ್ನದಾನಕ ಎನ್ನಾಚಿ ? ವಂಗಳಕ ವೇಣ್ಮೇ ವೇಣು ಪೆರಿ ಅಟ್ಟಂ" ಎಂದವನೆ ಕಂಬಿ ಕಟ್ಟುವುದಕ್ಕೆ ಮುಂದಾದ. ಎಲ್ಲಿಂದಲಾದರೂ ಬನ್ನಿ ಭಾಷಣ ಮಾಡಿ ಅಂತಲೊ ಗೋಷ್ಠಿಯ ಅಧ್ಯಕ್ಷರಾಗಿ ಎಂದೊ ಆಹ್ವಾನ ಬಂದರೆ ಆ ಸಂಘ, ಸಂಸ್ಥೆಯ ಕಾರ್ಯಕರ್ತರಿಗೆ ಓಹೋ ಖಂಡಿತ, ಆದರೆ ನನ್ನ ಕೃತಿಗಳನ್ನು ಕೊಳ್ಳಿ ಎಂಬ ಸಿದ್ಧ ಕರಾರು ಪರಿಣಾಮಕಾರಿ ಉಪಾಯ. ವೇದಿಕೆ ಚಪಲ ಯಾರನ್ನೂ ಬಿಡದು ಅಲ್ಲವೆ ? ದಯವಿಟ್ಟು ನೀವು ನನ್ನ 'ಎಡವಟ್ಟು' ವಿನೋದ ಬರಹಗಳ ಗುಚ್ಛ ಲೋಕಾರ್ಪಿಸುವ ದೊಡ್ಡ ಮನಸ್ಸು ಮಾಡಬೇಕು ಎಂದು ಪ್ರಸಿದ್ಧ ಹಾಸ್ಯ ಸಾಹಿತಿಯೊಬ್ಬರನ್ನು ಆಮಂತ್ರಿಸಿದ್ದೆ. ಅವರು ಪರಮ ಸಂತೋಷದಿಂದ ವೇದಿಕೆ ಹತ್ತಿದರು. ಆದರೆ ಆಗಿದ್ದು ಎಡವಟ್ಟೇ. ಬೇರೆ ಒಂದಷ್ಟು ಚಟಾಕಿಗಳನ್ನು ಅವರು ಸಿಡಿಸಬಹುದಿತ್ತು. ವ್ಯವಧಾನವಿರಲಿಲ್ಲವೇನೋ. ಕೃತಿ ಕುರಿತು ಒಂದೆರಡು ಮಾತಾಡಬೇಕಾಗಿದ್ದವರು ಇಡಿಇಡಿಯಾಗಿಯೆ 'ಎಡವಟ್ಟು'ನಲ್ಲಿನ ತಮಾಷೆ ಪ್ರಸಂಗಗಳನ್ನೇ ಸಭಿಕರಿಗೆ ಒಪ್ಪಿಸುವುದೆ ?! ತನ್ಮೂಲಕ ಇನ್ನು ನೀವಿದನ್ನು ಖರೀದಿಸುವ ಅಗತ್ಯವಿಲ್ಲವೆಂದು ಸಾರುವುದೆ ?!

**ಬಂಡಿಗನವಿಲೆ ಭಗವಾನ್**
ನಂ. ೩೬ ಬಿ, ೯ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ
೨ನೇ ಬ್ಲಾಕ್, ಬೆಂಗಳೂರು – ೫೬೦ ೦೫೦

## ಸೈನಿಕ



ದೇಶದ ಗಡಿ ಕಾಯುವ ಸೈನಿಕ
ಮನೆಯಿಂದ ದೂರವಿದ್ದು ಮಾನಸಿಕ
ಹಿಂಸೆಯ ಅನುಭವಿಸುವೆ ದೈನಿಕ
ನಿನ್ನ ಸಂಚಾರ ವೈಮಾನಿಕ
ರಕ್ಷಿಸುವೆ ನಮ್ಮನ್ನು ಕೊನೆ ತನಕ
ಊರಿಂದ ಬಂದರೆ ಒಂದು ಕಾಗದದ ತುಣುಕ
ಹೇಳಲಾಗದು ನಿನ್ನ ಮನದ ತವಕ
ಯುದ್ಧಭೀತಿಯೆಂಬ ಕಷ್ಟಗಳು ಅನೇಕ
ಆದರು ಅವುಗಳ ನಡುವೆಯೂ ನೀನು ಭಾವುಕ
ನಿನ್ನ ಭಾವುಕತೆ ಎಂದೂ ಆಗದು ಅತಿರೇಕ
ಏಕೆಂದರೆ ನೀನೊಬ್ಬ ಗಡಿ ಕಾಯುವ ಸೈನಿಕ...!

**ವಿಶ್ವೇಶ್ವರ ಎಮ್.**
'ಮಕರಂದ', ಮಾಲೆಮಾರ್
ಪರಪಾದೆ ರಸ್ತೆ
ಮಂಗಳೂರು – ೫೭೫ ೦೦೬



ಚಿತ್ರಲೇಖನ : ಡಿ. ಎನ್. ರವಿಕುಮಾರ್

ತಿಮ್ಮಣ್ಣನಾಯಕನ ಕೆರೆಯ ದಂಡೆಯಲ್ಲಿರುವ ಗುಹೆಯು ಮಳೆಗಾಲದಲ್ಲಿ ಹಚ್ಚ ಹಸಿರಿನಿಂದ ಕಂಗೊಳಿಸಿ, ಕುರುಚಲು ವನದಲ್ಲಿ ಕಣ್ಮರೆಯಾದಂತೆ ಭಾಸವಾಗುತ್ತದೆ. ಸುತ್ತಲೂ ಎತ್ತರದ ಕುರುಚಲು ಗುಡ್ಡಗಾಡು ಮತ್ತು ಕಣ್ಮನಗಳನ್ನು ಸೂರೆಗೊಳಸುವ ಕೆರೆಯ ವಿಹಂಗಮ ನೋಟ ಹಾಗೂ ಸರ್ಪಗಲ್ಲಿನ ಪಕ್ಷಿನೋಟವು ನಮ್ಮ ಸಂತಸವನ್ನು ಇಮ್ಮಡಿಗೊಳಸುತ್ತದೆ. ಈ ಪ್ರದೇಶದ ಕಡಿದಾದ ಬಂಡೆ ಪೊಟರೆಗಳು ಸಾಹಸೀಯ ಮನೋಬಲವನ್ನು ಹೆಚ್ಚಿಸಲು ಸಹಕಾರಿಯಾಗುತ್ತವೆ.

# ಬಾಳೇಕಾಯಿ ಸಿದ್ದಪ್ಪನ ಗುಹೆ

**ಚಿ**ತ್ರದುರ್ಗದ ತಿಮ್ಮಣ್ಣನಾಯಕನ ಕೆರೆಯ ವ್ಯಾಪ್ತಿಯಲ್ಲಿ ಬರುವ ಬಾಳೇಕಾಯಿ ಸಿದ್ದಪ್ಪನ ಗುಹಾಂತರ ದೇವಾಲಯವು ಸಿದ್ಧರ ಕಾಲದಲ್ಲಿ ನಿರ್ಮಿತಗೊಂಡಂತಹ ಏಕಶಿಲಾ ಗುಹೆ. ಸಿದ್ಧರ ಕಾಲದಲ್ಲಿ ಪ್ರತಿಷ್ಠಾಪಿಸಿದ ಈಶ್ವರ ಲಿಂಗವು ಇಂದಿಗೂ ಸುಸ್ಥಿತಿಯಲ್ಲಿದ್ದು, ವಾರಕ್ಕೊಮ್ಮೆ ಭಕ್ತಾದಿಗಳಿಂದ ಪೂಜಾ ಕಾರ್ಯಗಳೂ ನೆರವೇರುತ್ತವೆ. ಪ್ರಸ್ತುತ ಗುಹೆಯ ಹೊರಾಂಗಣವು ಇತ್ತೀಚೆಗೆ ನವೀಕರಣಗೊಂಡು, ಗುಹೆಯ ಒಳಾಂಗಣ ಮತ್ತು ಮೇಲ್ಛಾವಣಿಗಳನ್ನು ಸುಣ್ಣ ಬಣ್ಣಗಳಿಂದ ನವೀಕರಿಸಿ ಕಾಂಕ್ರೀಟ್ ನೆಲವನ್ನು ರೂಪಿಸಲಾಗಿದೆ. ಇದರ ಪ್ರವೇಶದ್ವಾರವು ಕೇವಲ ಎರಡು ಅಡಿಗಳಷ್ಟು ಉದ್ದಗಲವಿದ್ದು, ಬಾಗಿಕೊಂಡೇ ಒಳ ಪ್ರವೇಶಿಸಬೇಕಾಗುತ್ತದೆ. ಪ್ರವೇಶದ್ವಾರಕ್ಕೆ ಹೋಲಿಸಿದರೆ ಒಳಭಾಗದ ಗರ್ಭಗುಡಿಯ ದ್ವಾರವು ತುಸು ವಿಶಾಲವಾಗಿದೆ. ಗುಹಾನ್ವೇಷಣೆಯ ಆರಂಭದಲ್ಲಿ ಕತ್ತಲು ನಮ್ಮನ್ನು ಆವರಿಸಿ ಭೀತಿಗೊಳಪಡಿಸುತ್ತದೆ. ಆದರೂ ಆತಂಕ ಬೇಡ, ಪ್ರವೇಶದ್ವಾರದ ಬೆಳಕು ನಮಗೆ ದಾರಿ ತೋರುತ್ತದೆ. ಒಳ ಪ್ರವೇಶಿಸುತ್ತಿದ್ದಂತೆಯೇ ಎರಡನೇ ಗರ್ಭಗುಡಿಯ ದ್ವಾರವು ನಮ್ಮ ಕಣ್ಣಿಗೆ ಗೋಚರಿಸುತ್ತದೆ. ಇದೇ ಸ್ಥಳದಲ್ಲೇ ಸಿದ್ಧರ ಕಾಲದಲ್ಲಿ ಪ್ರತಿಷ್ಠಾಪಿಸಿದ ಈಶ್ವರ ಲಿಂಗುವಿನ ದರುಶನವಾಗುತ್ತದೆ. ಭಕ್ತರು ಯಾವುದೇ ಆತಂಕವಿಲ್ಲದೆ ಬರಿಗಾಲಿನಲ್ಲಿ ಗರ್ಭಗುಡಿ ಪ್ರವೇಶಿಸಬಹುದು. ಈ ಗುಹೆಯ ವಿಸ್ತೀರ್ಣ ಚಿಕ್ಕದಾದರೂ, ಗುಹಾನ್ವೇಷಣೆ/ಒಳಹೊಕ್ಕುವ ಮುನ್ನ ಟಾರ್ಚ್ ವ್ಯವಸ್ಥೆ ಮಾಡಿಕೊಂಡು ವೀಕ್ಷಿಸುವುದು ಒಳಿತು.

ಪ್ರಮುಖವಾಗಿ ಬಾಳೇಕಾಯಿ ಸಿದ್ದಪ್ಪನ ಗುಹೆಯು ಸಮೀಪದ ಲಾಲ್ ಬತೇರಿಯ ಬುಡದಲ್ಲಿ ದೈತ್ಯಾಕಾರವಾದ ಬಂಡೆಗಳ ಆಶ್ರಯದಲ್ಲಿದೆ. ಇಲ್ಲಿನ ಒಂದೊಂದು ಬಂಡೆಗಳು ಕೂಡ ರಾಕ್ಷಸ ಗಾತ್ರದಲ್ಲಿದ್ದು, ಹಿಡಂಬಿ ದುರ್ಗಕ್ಕೆ ಪ್ರತೀಕವಾಗಿವೆ. ಅಷ್ಟೇ ಅಲ್ಲದೆ, ಕೆಲ ಬಂಡೆಗಳು ಕಿತ್ತಳೆ ವರ್ಣದಿಂದ ಕಂಗೊಳಿಸಿ ಚಿತ್ರವಿಚಿತ್ರ ಆಕೃತಿಯನ್ನು ಬಿಂಬಿಸುತ್ತವೆ. ಇದರ ಪ್ರಾಯೋಗಿದ ಅನುಭವವನ್ನು ನಾವಿಲ್ಲಿ ಪಡೆಯಬಹುದು. ಬಾಳೇಕಾಯಿ ಸಿದ್ದಪ್ಪನ ಗುಹೆಯ ಎರಡೂ ದ್ವಾರಗಳೂ ಸಂಪೂರ್ಣವಾಗಿ ಶಿಲೆಯಿಂದ ನಿರ್ಮಿತವಾಗಿದ್ದು, ಅಲ್ಲಲ್ಲಿ ಕುಸುರಿ ವಿನ್ಯಾಸವನ್ನು ಕಾಣಬಹುದು. ಈ ಗುಹೆಯ ನಿರ್ದಿಷ್ಟ ಐತಿಹಾಸಿಕ ಹಿನ್ನೆಲೆ ಮತ್ತು ಇದರ ನಾಮಕ್ಕೆ ಹೋಲಿಸಿದರೆ, ಬಾಳೇಕಾಯಿ ಸಿದ್ದಪ್ಪ ಯಾರು ಎಂಬ ಮಾಹಿತಿ ಇಲ್ಲಿ ಅಲಭ್ಯ. ಆದರೆ ಚಿತ್ರದುರ್ಗವು ಸಿದ್ಧರು ಹರಸಿದ ಮತ್ತು ವಾಸಿಸಿದ ಪವಿತ್ರ ನೆಲೆ. ಈ ಪ್ರದೇಶದ ಬಹುತೇಕ ಗುಹೆಗಳು ಪೂಜಾಕಾರ್ಯಗಳಿಗೆಂದೆ ಸಿದ್ಧರು ನಿರ್ಮಿಸಿಕೊಂಡಂತಹ ಗುಹಾಂತರ ದೇವಾಲಯಗಳು ಎಂಬುದು ವಾಸ್ತವ ಸಂಗತಿ. ಸ್ಥಳೀಯರು ರೂಢಿಯಂತೆ ಈ ಗುಹೆಯನ್ನು ಬಾಳೇಕಾಯಿ ಸಿದ್ದಪ್ಪನ ಗುಹೆ ಎಂದೇ ಗುರುತಿಸಿರುವುದು ವಾಡಿಕೆ. ಸ್ಥಳೀಯರ ವಾಡಿಕೆಯಂತೆ ಈ ಸ್ಥಳದಲ್ಲಿ ಇದೇ ಹೆಸರಿನ ನಾಮಫಲಕವೂ ಉಂಟು.

ಈ ಗುಹೆಯ ಸುತ್ತಲಿನ ಪರಿಸರ ಅತ್ಯಂತ ಸುರಮ್ಯವಾದದ್ದು. ತಿಮ್ಮಣ್ಣನಾಯಕನ ಕೆರೆಯ ದಂಡೆಯಲ್ಲಿರುವ ಗುಹೆಯು ಮಳೆಗಾಲದಲ್ಲಿ ಹಚ್ಚ ಹಸಿರಿನಿಂದ ಕಂಗೊಳಿಸಿ, ಕುರುಚಲು ವನದಲ್ಲಿ ಕಣ್ಮರೆಯಾದಂತೆ ಭಾಸವಾಗುತ್ತದೆ. ಸುತ್ತಲೂ ಎತ್ತರದ ಕುರುಚಲು ಗುಡ್ಡಗಾಡು ಮತ್ತು ಕಣ್ಮನಗಳನ್ನು ಸೂರೆಗೊಳಿಸುವ ಕೆರೆಯ ವಿಹಂಗಮ ನೋಟ ಹಾಗೂ ಸರ್ಪಗಲ್ಲಿನ ಪಕ್ಷಿನೋಟವು ನಮ್ಮ ಸಂತಸವನ್ನು ಇಮ್ಮಡಿಗೊಳಿಸುತ್ತದೆ. ಈ ಪ್ರದೇಶದ ಕಡಿದಾದ ಬಂಡೆ ಪೊಟರೆಗಳು ಸಾಹಸೀಯ ಮನೋಬಲವನ್ನು ಹೆಚ್ಚಿಸಲು ಸಹಕಾರಿಯಾಗುತ್ತವೆ.

ಇಲ್ಲಿ ಸುತ್ತಲೂ ಎತ್ತರದ ಗುಡ್ಡಗಳಿದ್ದು, ಮಧ್ಯದಲ್ಲಿ ಸಮತಟ್ಟಾದ ಜವುಗು ಪ್ರದೇಶವಿದೆ. ಒಂದೆಡೆ ಕೆರೆ, ಮಾವಿನ ತೋಪು ಮತ್ತು ವಡ್ಡುಗಳ (ಹೊಂಡ)ವರೆಗೂ ಇಳಿಜಾರು ಪ್ರಾಂಗಣವಾಗಿದೆ.





ಈ ಪ್ರದೇಶದಲ್ಲಿ ಕಂಡುಬರುವ ವನ್ಯಜೀವಿಗಳಿಗೆ ಇಲ್ಲಿನ ಕೆರೆ ನೀರು ಪೂರೈಸುತ್ತದೆ. ಆದರೆ ಪ್ರಸ್ತುತ ಪರಿಸ್ಥಿತಿಯಲ್ಲಿ ಕೆರೆ ನೀರಿನ ಸಂಗ್ರಹಣಾ ಸಾಮರ್ಥ್ಯವು ಸಂಪೂರ್ಣ ಕ್ಷೀಣಿಸಿದೆ. ಕಡೆಯದಾಗಿ ಕೆರೆ ಭರ್ತಿಯಾಗಿದ್ದು ೨೦೧೦ರಲ್ಲಿ ಮಾತ್ರ. ಕೆರೆಗೆ ಹರಿದು ಬರುವ ಮಳೆನೀರಿನ ಪಥಗಳನ್ನು ಬದಲಿಸಿ, ಚೆಕ್ ಡ್ಯಾಮ್‌ಗಳು ಮತ್ತು ಇಂಗುಗುಂಡಿಗಳ ನಿರ್ಮಾಣ ಇದಕ್ಕೆಲ್ಲ ಕಾರಣ. ಇದಕ್ಕೆ ನೇರ ಹೊಣೆ, ಕೆರೆಯ ವಿಚಾರದಲ್ಲಿ ಮಾನವನ ಹಸ್ತಕ್ಷೇಪ. ಸದ್ಯದ ಪರಿಸ್ಥಿತಿಯಲ್ಲಿ ತಿಮ್ಮಣ್ಣನಾಯಕನ ಕೆರೆ ಕಳೆಗುಂದಿದ ಪಳೆಯುಳಿಕೆಯಂತಾಗಿದೆ. ಬಾಳೇಕಾಯಿ ಸಿದ್ದಪ್ಪನ ಗುಹೆಯ ಆಕರ್ಷಣೆಗೆ ಕೆರೆಯ ಪಾತ್ರ ಮಹತ್ವದ್ದಾಗಿದೆ. ಕೆರೆ ತುಂಬಿದಲ್ಲಿ ಗುಹೆಯ ಸುತ್ತಲಿನ ವಾತಾವರಣ ಕಳೆಗಟ್ಟುತ್ತದೆ. ನೀರು ಮತ್ತು ಜಲಚರಗಳನ್ನರಸಿ ಪಕ್ಷಿಗಳ ಹಿಂಡು ಇಲ್ಲಿಗೆ ಧಾವಿಸುತ್ತವೆ. ಇಷ್ಟೆಲ್ಲಾ ವೈಭವವನ್ನು ಆಸ್ವಾದಿಸಲು ಕೆರೆ ತುಂಬಿರಬೇಕು.

ಸಾಹಸ ಮತ್ತು ಪರಿಸರ ಪೂರಕ ಚಟುವಟಿಕೆಗಳು : ಈ ಸ್ಥಳದಲ್ಲಿ ಗುಹಾನ್ವೇಷಣೆ ನಡೆಸುವುದೇ ಒಂದು ಸಾಹಸಮಯ ಚಟುವಟಿಕೆ. ಕೇವಲ ಕುತೂಹಲಕ್ಕಾಗಿ ಗುಹೆಯ ಪ್ರವೇಶ ರೋಮಾಂಚನಕಾರಿ ಅನುಭವ ನೀಡಿ ಮತ್ತೊಮ್ಮೆ ಗತಕಾಲದ ವೈಭವವನ್ನು ಸ್ಮರಿಸುತ್ತದೆ. ಗುಹೆಯ ಆವರಣದಲ್ಲಿ ಕೊಂಚ ವಿಶಾಲವಾದ ಪ್ರಾಂಗಣವಿದ್ದು, ಅಕ್ಕಪಕ್ಕದಲ್ಲಿ ಬೃಹದಾಕಾರವಾದ ಬಂಡೆಗಳು ಹಾಗೂ ಸಾಹಸಮಯ ಕಾರ್ಯಕ್ಕಾಗಿಯೇ ಹೇಳಿಮಾಡಿಸಿದಂತಹ ತುಸು ಬಾಗಿದ ಮರಗಿಡಗಳು ಸಾಹಸ ಚಟುವಟಿಕೆಗಳಿಗೆ ಪೂರಕವಾಗಿವೆ. ಇವುಗಳ ಆಧಾರದನ್ವಯ ವಿದ್ಯಾರ್ಥಿ ಗಳಿಗೆ ಹಗ್ಗದ ಸಹಾಯವಿಲ್ಲದೆ ಬಂಡೆಗಳನ್ನೇರುವ ಕೌಶಲ, ಮರವೇರುವ ಕೌಶಲ, ಆಪತ್ಕಾಲದಲ್ಲಿ ತಮ್ಮನ್ನು ಸಂರಕ್ಷಿಸಿಕೊಳ್ಳುವ ವಿಧಾನ, ಪ್ರಾಣಿ ಪಕ್ಷಿಗಳ ಸಂರಕ್ಷಣೆ, ವನ್ಯಜೀವಿಗಳ ಹೆಜ್ಜೆ ಗುರುತು ಮತ್ತು ಹಿಕ್ಕೆಗಳನ್ನು ಪತ್ತೆ ಹಚ್ಚುವುದು ಸೇರಿದಂತೆ ಜೈವಿಕ ವೈವಿಧ್ಯತೆಯ ಕುರಿತು ಹಲವು ಪರಿಸರ ಪೂರಕ ಚಟುವಟಿಕೆಗಳನ್ನು ನಾವಿಲ್ಲಿ ಆಯೋಜಿಸಬಹುದು. ಗುಹೆಯ ಆವರಣವು ವಯಸ್ಸಿನ ತಾರತಮ್ಯವಿಲ್ಲದೆ ಎಲ್ಲರಿಗೂ ಪರಿಸರ ಪಾಠ ಕಲಿಸುತ್ತದೆ. ಆಸಕ್ತರು ಇಲ್ಲಿಂದ ಟಿ.ಕೆ. ವೀವ್ ಪಾಯಿಂಟ್, ಚಂದ್ರವಳ್ಳಿಯ ಹದ್ದಿನ ಕಲ್ಲು ಮತ್ತು ಧವಳಗಿರಿಯ ಕಡೆಗೆ ಚಾರಣ ಬೆಳೆಸಬಹುದು.

ಆರಂಭದಲ್ಲಿ ವಿಘ್ನ ಎದುರಾಗಬಹುದು ! ಬಾಳೇಕಾಯಿ ಸಿದ್ದಪ್ಪನ ಗುಹಾಂತರ ದೇವಾಲಯಕ್ಕೆ ಅತ್ಯಂತ ಕಿರಿದಾದ ದ್ವಾರವನ್ನು ಹೊಂದಿದ್ದು ಒಳ ಪ್ರವೇಶಿಸುವುದು ಕೊಂಚ ಕ್ಲಿಷ್ಟಕರ. ಇತ್ತೀಚಿನ ದಿನಗಳಲ್ಲಿ ಈ ದ್ವಾರಕ್ಕೆ ಸಣ್ಣ ಬಾಗಿಲೊಂದನ್ನು ನಿರ್ಮಿಸಿ ಆಧುನಿಕ ಸ್ಪರ್ಶ ನೀಡಲಾಗಿದೆ. ಆದರೆ ಬಾಗಿಲಿಗೆ ಚಿಲಕ ಅಥವಾ ಬೀಗ ಹಾಕುವ ಯಾವ ವ್ಯವಸ್ಥೆಯೂ ಇಲ್ಲದ ಕಾರಣ, ಕರಡಿಗಳು ಹಾಗೂ ಇನ್ನಿತರೆ ವನ್ಯಜೀವಿಗಳು ಗುಹೆಯೊಳಗೆ ಪ್ರವೇಶಿಸಿರುವ ಸಾಧ್ಯತೆಗಳಿರುತ್ತವೆ. ಸ್ಥಳ ಭೇಟಿಗರು, ಗುಹೆಯ ಪ್ರವೇಶಕ್ಕೂ ಮುನ್ನ ಗುಹೆಯ ದ್ವಾರಕ್ಕೆ ೧೦ ಮೀಟರ್ ಅಂತರವನ್ನು ಕಾಯ್ದುಕೊಂಡು ಒಂದೆರಡು ಬಾರಿ ಗಟ್ಟಿ ಧ್ವನಿಯಲ್ಲಿ ಸದ್ದು ಮಾಡಬೇಕು. ಹಾಗೇನಾದರೂ ಗುಹೆಯೊಳಗೆ ವನ್ಯಜೀವಿಗಳಿದ್ದಲ್ಲಿ ಅವು ಹೊರಬರಲು ಪ್ರಯತ್ನಿಸುತ್ತವೆ. ತದನಂತರ ಧೃತಿಗೆಡದೆ ಗುಹೆಯನ್ನು ಪ್ರವೇಶಿಸಲು ಮುಂದಾಗಿ. ಈ ಕ್ರಮವನ್ನು ಹೊರತುಪಡಿಸಿ ಯಾವುದೇ ಮುಂಜಾಗರೂಕತೆ ಇಲ್ಲದ ಗುಹಾಪ್ರವೇಶ ಅತ್ಯಂತ ಅಪಾಯಕಾರಿಯಾಗಿರುತ್ತದೆ. ನಾವುಗಳು ಕೈಗೊಂಡ ಕಾರ್ಯಕ್ಕೆ ಆರಂಭದಲ್ಲೆ ವಿಘ್ನಬಾರದಂತೆ ಜಾಗೃತಿ ವಹಿಸುವುದು ಅತ್ಯಗತ್ಯವಾಗಿರುತ್ತದೆ.

**ಇಲ್ಲಿನ ವನ್ಯಜೀವಿಗಳು :** ಈ ಪ್ರದೇಶವು ಹೆಬ್ಬಂಡೆಗಳಿಂದ ಸುತ್ತುವರಿದಿರುವ ನೀರಿನ ಸೆಲೆಯುಳ್ಳ ಕಡಿದಾದ ಜವುಗು ಪ್ರದೇಶವಾದ್ದರಿಂದ ಇದು ಹೆಬ್ಬಾವುಗಳಿಗೆ ಪ್ರಮುಖ ಆವಾಸವಾಗಿದೆ. ಲೆಕ್ಕವಿಲ್ಲದಷ್ಟು ದೈತ್ಯ ಬಂಡೆಗಳ ರಾಶಿ ಮತ್ತು ಇಲ್ಲಿನ ಸಹಜ ನಿರ್ಮಿತ ಪೊಟರೆಗಳು ಕರಡಿ, ಚಿರತೆ ಮತ್ತು ಬಯಲು ಸೀಮೆಯ ಅಳಿವಿನಂಚಿನ ತೋಳಗಳಿಗೆ ಅತ್ಯಂತ ಪ್ರಶಸ್ತವಾಗಿವೆ. ಹೌದು, ಇದೇ ತಿಮ್ಮಣ್ಣನಾಯಕನ ಕೆರೆ ಆವರಣದ ವ್ಯಾಪ್ತಿಯಲ್ಲಿ ಜರ್ಮನ್ ಷಪರ್ಡ್ ತಳಿಯ ಶ್ವಾನವನ್ನು ಹೋಲುವ ತೋಳಗಳು ಮುಸ್ಸಂಜೆ ಮತ್ತು ರಾತ್ರಿ ಸಮಯಗಳಲ್ಲಿ ಸಂಚರಿಸುತ್ತವೆ. ನಾನು ಮೊದಲ ಬಾರಿ ತೋಳವನ್ನು ಕಂಡಿದ್ದು ಈ ಪ್ರದೇಶದಲ್ಲೆ. ಆಗ ಸಂಜೆ ೭.೩೦ರ ಸಮಯವಾಗಿತ್ತು. ಈ ಪ್ರದೇಶದ ಮತ್ತೊಂದು ಆಕರ್ಷಣೆ ಎಂದರೆ, ಥೇಟ್ ಕಾಂಗರೂ ಪ್ರಾಣಿಯ ದೇಹವನ್ನು ಹೋಲುವ ಇಲಿ ಪ್ರಭೇದ, ಇದಕ್ಕೆ ಕಂದು ಬಿಳಿ ಮೈಬಣ್ಣದ, ಉದ್ದನೆಯ ಹಿಂಬದಿಯ ಕಾಲುಗಳು ಮತ್ತು ದೇಹದ ಗಾತ್ರಕ್ಕಿಂತ ಉದ್ದನೆಯ ಬಾಲವನ್ನು ಹೊಂದಿದ್ದ ಕಾಂಗರೂ ಇಲಿಗಳು ಕಂಡು ಅಚ್ಚರಿ ಮೂಡಿಸುತ್ತವೆ. ಅಷ್ಟೇ ಅಲ್ಲದೆ, ಕಾಡುಹಂದಿ ಗಳಿಗೆ ಮತ್ತು ಹೆಚ್ಚಿನ ಸಂಖ್ಯೆಯಲ್ಲಿ ಮುಳ್ಳುಹಂದಿಗಳಿಗೆ ಈ ಪ್ರದೇಶವು ಆಶ್ರಯ ಕಲ್ಪಿಸಿಕೊಟ್ಟಿದೆ. ಜೊತೆಯಲ್ಲಿ ಕೆರೆ ಸುತ್ತಲಿನ ನೀಲಗಿರಿ ನೆಡುತೋಪು ಮತ್ತು ದಟ್ಟ ಕುರುಚಲು ಪೊದೆ ಸಸ್ಯಗಳನ್ನಾಶ್ರಯಿಸಿ ರಾಕ್ ಥ್ರಶ್, ಏಷಿಯನ್ ಪ್ಯಾರಡೈಸ್ ಫ್ಲೈಕ್ಯಾಚರ್, ಶಾರ್ಟ್‌ಟೋಡ್ ಸ್ನೇಕ್ ಈಗಲ್, ಈಜಿಪ್ಷಿಯನ್ ವಲ್ಚರ್, ಡಾರ್ಟರ್ ಹಾಗೂ ಪೇಂಟೆಡ್ ಸ್ಟಾರ್ಕ್‌ನಂತಹ ಅನೇಕ ವಿಶಿಷ್ಟ ಪಕ್ಷಿ ಪ್ರಭೇದಗಳು ಇಲ್ಲಿ ಕಲರವಿಸುತ್ತವೆ. ನಾವಿಲ್ಲಿಗೆ ಧಾವಿಸಿದರೆ ಕೇವಲ ಗುಹೆಯ ದರುಶನವಲ್ಲದೆ, ಒಟ್ಟಾರೆ ಪಾರದರ್ಶಕ ಪರಿಸರದ ಪಾಠವೇ ನಮ್ಮ ಅನುಭವಕ್ಕೆ ಬರುತ್ತದೆ.

**ತೆರಳುವುದು ಹೀಗೆ :** ಚಿತ್ರದುರ್ಗದ ಕೋಟೆ ಪ್ರವೇಶದ್ವಾರದ ರಸ್ತೆಯಲ್ಲಿ ನೇರವಾಗಿ ಕ್ರಮಿಸಿದರೆ, ಕರವರ್ತೀಶ್ವರ ದೇವಾಲಯ ಸಿಗುತ್ತದೆ. ಅಲ್ಲಿಂದ ವಡ್ಡು (ಹೊಂಡ) ಮತ್ತು ಮಾವಿನ ತೋಪು ಪಕ್ಕದ ಮಾರ್ಗ ವನ್ನು ಅನುಸರಿಸಿಕೊಂಡು ಸಾಗಿದರೆ, ತಿಮ್ಮಣ್ಣನಾಯಕನ ಕೆರೆಯ ದಿಬ್ಬವು ನಮ್ಮನ್ನು ಸ್ವಾಗತಿಸುತ್ತದೆ. ಇದೇ ಕೆರೆಯಂಚಿನ ಬಲಭಾಗದ ಕಾಲು ದಾರಿಯಲ್ಲಿ ಸಾಗಿ, ಪುನಃ ಬಲಕ್ಕೆ ತಿರುಗಿದರೆ ಬಾಳೇಕಾಯಿ ಸಿದ್ದಪ್ಪನ ಗುಹೆ ಸಿಗುತ್ತದೆ. ಕೋಟೆ ರಸ್ತೆಯಿಂದ ಹೋಗಿಬರುವ ಎರಡೂ ಕಡೆಯ ಚಾರಣ ಹಾದಿ ಸುಮಾರು ೩ ಕಿ.ಮೀ. ಆಗುತ್ತದೆ, ಅಷ್ಟೆ . ಜೊತೆಯಲ್ಲಿ ಸ್ಥಳ ಸ್ವಚ್ಛತೆಯ ಕುರಿತು ಹೆಚ್ಚಿನ ಕಾಳಜಿ ವಹಿಸಿ.

ಚಿತ್ರಲೇಖನ : **ಡಿ. ಎನ್. ರವಿಕುಮಾರ್**
ಚಿತ್ರಕಲಾ ಉಪನ್ಯಾಸಕರು, ಅಭಿರಾಮ್ ನಿಲಯದ ಹಿಂಭಾಗ
ಮೊದಲನೇ ಮಹಡಿ, ೨ನೇ ಮನೆ, ೬ನೇ ಕ್ರಾಸ್ ವೆಸ್ಟ್
ಜೆ. ಸಿ. ಆರ್. ಬಡಾವಣೆ, ಚಿತ್ರದುರ್ಗ – ೫೭೭ ೫೦೧

ವಿಜ್ಞಾನಿಗಳ ಪ್ರಕಾರ ಮಹಾಸ್ಫೋಟದಿಂದ ಸಿಡಿದು ವಿಸ್ತರಿಸುತ್ತಿರುವ ವಿಶ್ವದ ಒಂದು ಧೂಳಿನ ಕಣ ಈ ಭೂಮಿ. ಈ ಧೂಳು ಕಣ ಮೊದಲು ಬೃಹತ್ತಾದ ಅಗ್ನಿಗೋಳವಾಗಿತ್ತು. ನಂತರ ಹೊರಪದರ ಆರಿಕೊಳ್ಳುತ್ತಾ ಯುಗ–ಯುಗಾಂತರಗಳ ಮಳೆ ಸುರಿದು ಜಲಗೋಳವಾಗಿ ಮಾರ್ಪಟ್ಟಿತು. ಮುಂದೆ ಈ ಜಲಗೋಳವೇ ಸಸ್ಯಗೋಳವಾಗಿ ರೂಪುಗೊಂಡಿತು. ಎಷ್ಟೋ ಯುಗ–ಯುಗಗಳು ಕಳೆದಮೇಲೆ ಈ ಭೂಮಿ ಪ್ರಾಣಿಗೋಳವಾಗಿ ಬದಲಾಯಿತು. ಆಗ ಡೈನೋಸಾರ್‌ಗಳ ಯುಗ ಅಥವಾ ಜುರಾಸಿಕ್ ಯುಗ ಒಂದು ಹಂತದಲ್ಲಿ ಪ್ರಕಟವಾಯಿತು. ಇಂಥ ಎಷ್ಟೋ ಯುಗಾಂತರಗಳ ಪ್ರಳಯ ಕಳೆದಮೇಲೆ ಈ ಭೂಮಿಯು ಮನುಷ್ಯಗೋಳಕ್ಕೆ ದಾರಿಮಾಡಿತು.



# ‘ಜೀವಿವೈವಿಧ್ಯತೆ’ ಭೂಮಿತಾಯ ವೈಶಿಷ್ಟ್ಯತೆ

ಈ ಭೂಮಿಯಲ್ಲಿ ಮಾನವಕುಲದ ಉಗಮ ಮತ್ತು ವಿಕಾಸಗಳನ್ನು ಕುರಿತು ಕವಿ ಬೇಂದ್ರೆ ನುಡಿದಿರುವ ಮಾತೆಂಬ ಜ್ಯೋತಿರ್ಲಿಂಗವಿದು : “ಭೂಮಿತಾಯಿ ಮೈಯ ಹಿಡಿಮಣ್ಣ ಗುಡಿಗಟ್ಟಿ ನಿಂತಂಥ ಮೂರ್ತಿ ನಾನು...” ಜೀವಜಾಲದ ಮಾಯ ಬಜಾರ್‌ಅನ್ನು ತನ್ನ ಗರ್ಭದಲ್ಲಿ ಧರಿಸಿಕೊಂಡಿರುವ ಭೂಮಿತಾಯಿ ಮೈಯ ಒಂದು ಹಿಡಿ ಮಣ್ಣಿನಲ್ಲಿರುವ ಸಜೀವ ಮಾಂತ್ರಿಕ ಶಕ್ತಿಯ ಪ್ರತೀಕವಾಗಿ ಮನುಷ್ಯನನ್ನು ನಿರೂಪಿಸುತ್ತಿರುವ ಬೇಂದ್ರೆ ವಾಣಿಯು ಅಪೂರ್ವವಾದುದು. ಜೀವವಿಜ್ಞಾನಿಯಾದ ವಿಲಿಯಂ ಬೀಬ್ ಭೂಮಿತಾಯ ಒಂದು ಹಿಡಿ ಮಣ್ಣಿನಲ್ಲಿರುವ ಸೂಕ್ಷ್ಮಾಣುಜೀವಿಗಳ ಅಪೂರ್ವ ಮಾಹಿತಿಯನ್ನೇ ಒದಗಿಸಿದ್ದಾನೆ. ಸಸ್ಯಗಳು–ಪ್ರಾಣಿಗಳು–ಮನುಷ್ಯರು ಮಾತ್ರ ಜೀವಿಗಳೆಂದು ತಿಳಿಯಬಾರದು. ಈ ಭೂಮಿಯಲ್ಲಿರುವ ಒಂದು ಹಿಡಿ ಮಣ್ಣು, ಒಂದು ಬೊಗಸೆ ನೀರು, ಒಂದು ಮೂಗು ಗಾಳಿ ಕೂಡ ಜೀವಮಯವಾದುದು. ಹಿಮಭೂಮಿ, ಮರುಭೂಮಿ, ಧ್ರುವಭೂಮಿ, ಗಿರಿಭೂಮಿ ಎಂಬ ಭೇದವಿಲ್ಲದೆ ತನ್ನೊಡಲಿನ ಕಣ ಕಣದಲ್ಲೂ ಸೂಕ್ಷ್ಮಾಣು ಜೀವಿಗಳಿಂದ ಹಿಡಿದು ಸಕಲ ಜೀವರಾಶಿಯವರೆಗೆ ಜೀವದಾಯಿನಿಯಾಗಿ ಎಲ್ಲವನ್ನು ಪೊರೆಯುತ್ತಿರುವ ‘ಭೂಮಿತಾಯಿ’ಯನ್ನು ಸೌರವ್ಯೂಹದ ಜೀವಂತಗ್ರಹ ಎಂದು ಪರಿಭಾವಿಸಬೇಕು. ನಮ್ಮ ಸೌರವ್ಯೂಹದ ಇತರೆಲ್ಲ ಗ್ರಹಗಳು ನಿರ್ಜೀವವಾದುವು. ಸೂರ್ಯನಿಗೆ ಅತಿ ಹತ್ತಿರವೂ ಅಲ್ಲದೆ, ಅತಿ ದೂರವೂ ಅಲ್ಲದೆ ಮಧ್ಯಮ ಕಕ್ಷೆಯಲ್ಲಿರುವ ಭೂಮಿತಾಯಿಯ ಪಥವನ್ನು ಸೌರವ್ಯೂಹದ ಮಧ್ಯಮಮಾರ್ಗವೆಂದು ಕರೆಯಬಹುದು. ಈ ಮಧ್ಯಮಮಾರ್ಗವೇ ಭೂಮಿಯನ್ನು ಜೀವಂತಿಕೆ ಮತ್ತು ಜೀವಿ ವೈವಿಧ್ಯತೆಗಳಿಂದ ಬೆಳಗುತ್ತಿದೆಯೆಂಬುದು ಸತ್ಯಸ್ಯ ಸತ್ಯ !

**ವಿ. ಚಂದ್ರಶೇಖರ ನಂಗಲಿ**

ನಮ್ಮ ದೇಶದಲ್ಲಿ ವಿವಿಧ ಪಥಗಳು ಅಥವಾ ಪಂಥಗಳಿಂದ ಕೂಡಿದ ವಿವಿಧ ಧರ್ಮಗಳಿವೆ. ಹಿಂದೂ, ಬೌದ್ಧ, ಜೈನ, ಇಸ್ಲಾಂ, ಕ್ರೈಸ್ತ, ಪಾರಸಿ ಮುಂತಾದ ಧರ್ಮಗಳು ಅಸ್ತಿತ್ವದಲ್ಲಿದ್ದು, ಇವು ತಮ್ಮೊಳಗೆ ಬಗೆ ಬಗೆಯ ಪಂಥಗಳಾಗಿ ಸೀಳು ಧರ್ಮಗಳಾಗಿಬಿಟ್ಟಿವೆ. ದ್ವೈತ–ಅದ್ವೈತ–ವಿಶಿಷ್ಟಾದ್ವೈತ ಎಂಬ ತ್ರಿಮತಗಳು, ಮಹಾಯಾನ, ಹೀನಯಾನ, ಶ್ವೇತಾಂಬರ–ದಿಗಂಬರ, ಷಿಯಾ–ಸುನ್ನಿ, ಕ್ಯಾಥೊಲಿಕ್–ಪ್ರಾಟಿಸ್ಟೆಂಟ್ ಮುಂತಾದ ಸೀಳುಗಳಲ್ಲಿರುವ ಭಿನ್ನಮತಗಳು ಸುಪ್ರಸಿದ್ಧವಾದುವು. ಭಾರತದ ಜಾತಿಪದ್ಧತಿಯು ವಿಭಜನೆಗಳ ಮಹಾಸಾಗರ. ಒಂದೊಂದು ಜಾತಿಯೂ ಮೇಲು–ಕೀಳಿನ ಶ್ರೇಣೀಕರಣಕ್ಕೆ ಬದ್ಧವಾಗಿದ್ದು ಜನ್ಮಾಧಾರಿತ ಅಸಮಾನತೆಯನ್ನೇ ಎತ್ತಿ ಹಿಡಿಯುತ್ತಿದೆ. ಇಂಥ ಎಲ್ಲ ಕಡೆಗಳಲ್ಲಿ ಮಧ್ಯಮ ಮಾರ್ಗವನ್ನು ಕಂಡುಕೊಳ್ಳುವುದು ಬಹಳ ಪ್ರಯಾಸಕರವಾದುದು. ತನ್ನ ಕಾಲದ ವಿವಿಧ ಮತ–ಪಂಥಗಳ ಮಧ್ಯೆ ಮಧ್ಯಮಮಾರ್ಗವನ್ನು ಮನಗಂಡ ಭಗವಾನ್ ಬುದ್ಧದೇವನ ಕರುಣಾಮೈತ್ರಿಯು ಭೂಮಿತಾಯಿಯ ಮಧ್ಯಮಮಾರ್ಗದಷ್ಟೇ ಜೀವಂತವಾದುದು. ಈ ಜೀವಂತಿಕೆಯನ್ನು ಲಕ್ಷಿಸಿಯೇ ಬಾಬಾಸಾಹೇಬ್ ಅಂಬೇಡ್ಕರ್ ಅವರು ಯಾವೊಂದು ವಿಧವಾದ ನಿರ್ಜೀವ ಧರ್ಮದಲ್ಲಿರಲಾರೆನೆಂದು ‘ಬುದ್ಧಮಾರ್ಗ’ದಲ್ಲಿ ತಮ್ಮನ್ನು ಗುರುತಿಸಿಕೊಂಡರು. ಇದನ್ನು ಮತಧರ್ಮಗಳ ಮಧ್ಯಮಮಾರ್ಗವೆಂದು ಕರೆಯಬಹುದು.

ಸೌರವ್ಯೂಹದ ಮಧ್ಯಮಮಾರ್ಗವಾದ ಭೂಮಿತಾಯಿ

ತತ್ವ ಮತ್ತು ಮತಧರ್ಮಗಳ ಮಧ್ಯಮಮಾರ್ಗವಾದ ಬುದ್ಧದೇವನ ಕರುಣಾಮೈತ್ರಿಯನ್ನು ಆಧುನಿಕ ನಾಗರಿಕತೆ ತನ್ನ ಪ್ರಗತಿಪಥದಲ್ಲಿ ಅಳವಡಿಸಿಕೊಳ್ಳಬೇಕು. ಮನುಷ್ಯನೂ ಸೇರಿದಂತೆ ಸಕಲ ಜೀವರಾಶಿಯ ಕಾಲ್ತುಳಿತದಿಂದ ಪುಳಕಿತಗೊಳ್ಳುವ ಭೂಮಿತಾಯಿ ಮತ್ತು ಮಾನವನಿರ್ಮಿತ ವಿಕಾರಗಳಿಂದ ಪಾರಾಗಿ, ನಿಸರ್ಗ ಸಹಜವಾದ ವಿವೇಕವನ್ನು ಪ್ರತಿಪಾದಿಸುವ ಬುದ್ಧಮಾರ್ಗ ಪರಸ್ಪರ ಪೂರಕವಾದುವು. ಭೂಮಿಯನ್ನು ಒಂದು ಬೃಹತ್‌ಗಾತ್ರದ ಆಲೂಗಡ್ಡೆಯೆಂದು ಭಾವಿಸಿಕೊಂಡರೆ, ಭೂಮಿಯಲ್ಲಿರುವ ಜೀವಿವೈವಿಧ್ಯತೆಯ ತಾಣಗಳನ್ನು ಆಲೂಗಡ್ಡೆಯ ಕಣ್ಣುಗಳೆಂದು ತಿಳಿಯಬೇಕು. ಇಂಥ ತಾಣಗಳೆಲ್ಲ ಬಹುಮಟ್ಟಿಗೆ ಪರ್ವತಾರಣ್ಯಗಳೇ ಆಗಿರುತ್ತವೆ. ಭಾರತದ ಮಟ್ಟಿಗೆ ಹಿಮಾಲಯ ಗಿರಿಶ್ರೇಣಿ, ಪಶ್ಚಿಮಘಟ್ಟಗಳ ಗಿರಿಶ್ರೇಣಿ, ಪೂರ್ವಘಟ್ಟಗಳ ಗಿರಿಶ್ರೇಣಿ – ಇವು ಜೀವಿವೈವಿಧ್ಯತೆಯ ಗಂಗಾಮೂಲಗಳಾಗಿವೆ. ಇಲ್ಲಿ 'ಗಂಗಾಮೂಲ' – ಎಂಬ ನುಡಿಯನ್ನು ಉದ್ದೇಶಪೂರ್ವಕವಾಗಿ ಬಳಸಿದ್ದೇನೆ. ಏಕೆಂದರೆ, ಈ ಭೂಮಿಯಲ್ಲಿರುವ ಗಿರಿಶಿಖರಗಳೆಲ್ಲ ನದಿಜಾಲಕ್ಕೆ ಮತ್ತು ಜೀವಜಾಲಕ್ಕೆ 'ಗಂಗಾಮೂಲ'ಗಳಾಗಿವೆ. ಈ ದೃಷ್ಟಿಯಿಂದಲೇ ಕವಿ ಬೇಂದ್ರೆ ಅವರು "ಹೊಳೆಗೆ ತಾಯಿಮೊಲೆಯಾಗಿ ಬಾಳುತಿವೆ ಸರ್ವ ಪರ್ವತಾಗ್ರ..." ಎಂದು ನಿರೂಪಿಸಿದ್ದಾರೆ. ನಮ್ಮ ಸೌರವ್ಯೂಹದ ಯಾವೊಂದು ಗ್ರಹದಲ್ಲೂ ಇಲ್ಲದ ವಿಸ್ಮಯಕಾರಕ ಜೀವಜಾಲವನ್ನು ಹೊಂದಿರುವ ಭೂಮಿಯ ಧಾರಣಶಕ್ತಿ ವಿಶೇಷವಾದುದು. ಆದ್ದರಿಂದಲೇ ಭೂಮಿಯನ್ನು ಸಂಸ್ಕೃತದಲ್ಲಿ 'ಧಾರಿಣಿ' ಎಂದು ಕರೆಯಲಾಗಿದೆ. ಸಕಲಜೀವರಾಶಿ–ಜೀವಜಾಲ–ಜೀವಿವೈವಿಧ್ಯತೆಯನ್ನು ತನ್ನಲ್ಲಿ ಧರಿಸಿರುವ ಧಾರಿಣಿದೇವಿಯನ್ನೇ 'ಆದಿಶಕ್ತಿ' ಎಂದು ಕರೆಯಬಹುದು. ಮರುಭೂಮಿಯಲ್ಲು ಕೂಡ ಜೀವಿ ವೈವಿಧ್ಯತೆಯಿದೆ. ಇಂಗ್ಲಿಷಿನಲ್ಲಿ 'ಬ್ಯೂಟಿಫುಲ್ ಪೀಪಲ್' ಎಂಬ ಸಿನಿಮಾ ಇದೆ. ಈ ಸಿನಿಮಾಗೆ 'ಸಮ್ ಪೀಪಲ್ ಕಾಲ್ಡ್ ದೆಮ್ ಅನಿಮಲ್ಸ್' – ಎಂಬ ಉಪಶೀರ್ಷಿಕೆಯೂ ಇದೆ. ಇದರಲ್ಲಿ ಮರುಭೂಮಿಯಲ್ಲಿ ತಮ್ಮ ಅಸ್ತಿತ್ವಕ್ಕಾಗಿ ಹೋರಾಡುವ ಜೀವಜಾಲವನ್ನು ಬಹು ಅದ್ಭುತವಾಗಿ ದೃಶ್ಯೀಕರಿಸಲಾಗಿದೆ.



ಭೂಮಿಯಲ್ಲಿರುವ ಈ ಜೀವಿವೈವಿಧ್ಯತೆಯು ಯುಗ–ಯುಗಾಂತರಗಳ ಸೃಷ್ಟಿಯಾಗಿದೆ. ಜುರಾಸಿಕ್ ಯುಗದಲ್ಲಿ ಈ ಭೂಮಿಯ ಮೇಲೆ ಮನುಷ್ಯ ಇನ್ನೂ ಹುಟ್ಟಿರಲೇ ಇಲ್ಲ. ವಿಜ್ಞಾನಿಗಳ ಪ್ರಕಾರ ಮಹಾಸ್ಫೋಟದಿಂದ ಸಿಡಿದು ವಿಸ್ತರಿಸುತ್ತಿರುವ ವಿಶ್ವದ ಒಂದು ಧೂಳಿನ ಕಣ ಈ ಭೂಮಿ. ಈ ಧೂಳು ಕಣ ಮೊದಲು ಬೃಹತ್ತಾದ ಅಗ್ನಿಗೋಳವಾಗಿತ್ತು. ನಂತರ ಹೊರಪದರ ಆರಿಕೊಳ್ಳುತ್ತಾ ಯುಗ–ಯುಗಾಂತರಗಳ ಮಳೆ ಸುರಿದು ಜಲಗೋಳವಾಗಿ ಮಾರ್ಪಟ್ಟಿತು. ಮುಂದೆ ಈ ಜಲಗೋಳವೇ ಸಸ್ಯಗೋಳವಾಗಿ ರೂಪುಗೊಂಡಿತು. ಎಷ್ಟೋ ಯುಗ–ಯುಗಗಳು ಕಳೆದಮೇಲೆ ಈ ಭೂಮಿ ಪ್ರಾಣಿಗೋಳವಾಗಿ ಬದಲಾಯಿತು. ಆಗ ಡೈನೋಸಾರ್‌ಗಳ ಯುಗ ಅಥವಾ ಜುರಾಸಿಕ್ ಯುಗ ಒಂದು ಹಂತದಲ್ಲಿ ಪ್ರಕಟವಾಯಿತು. ಇಂಥ ಎಷ್ಟೋ ಯುಗಾಂತರಗಳ ಪ್ರಳಯ ಕಳೆದಮೇಲೆ ಈ ಭೂಮಿಯು ಮನುಷ್ಯಗೋಳಕ್ಕೆ ದಾರಿಮಾಡಿತು. ಅಗ್ನಿಗೋಳ, ಜಲಗೋಳ, ಸಸ್ಯಗೋಳ, ಪ್ರಾಣಿಗೋಳ, ಮನುಷ್ಯಗೋಳ ಎಂಬ ಕಾಲಚಕ್ರದ ಸರಪಳಿಯಲ್ಲಿ ಜೀವತತ್ವವು ಬೆಂಕಿಯಾಗಿ, ಜಲವಾಗಿ, ಮಣ್ಣಾಗಿ, ಗಿಡವಾಗಿ, ಮರವಾಗಿ, ಖಗವಾಗಿ, ಮೃಗವಾಗಿ ಕಡೆಗೆ ಮನುಷ್ಯನಾಗಿ ನಿತ್ಯವೂ ಅವತರಿಸುತ್ತಾ ಬಂದಿದೆ. ಇದು ಪ್ರಾಕೃತಿಕವಾದ ಸತ್ಯಾವತಾರ. ಪುರಾಣೋಕ್ತವಾದ ದಶಾವತಾರದ ಕತೆಗಳೇ ಬೇರೆ.

'ಕೊಡಲಿಯ ಕಾವು ಕುಲನಾಶಕ' – ಎಂಬಂತೆ, ಜೀವತತ್ವದ ಕೊನೆ ಅಥವಾ ಗೊನೆಯಾದ ಮನುಷ್ಯನು ಪ್ರಗತಿಯ ಕೊಡಲಿಗೆ ಕಾವಾಗಿ ಪರಿಣಮಿಸಿ, ಈ ಭೂಮಿಯ ಮಣ್ಣು, ಗಿಡ, ಮರ, ಪಕ್ಷಿ , ಪ್ರಾಣಿ ಮುಂತಾದ ಸಕಲಜೀವಜಾಲದ ಮಹಾವೃಕ್ಷವನ್ನು ಇನ್ನಿಲ್ಲದಂತೆ ಕತ್ತರಿಸಿ ಬಿಸಾಡುತ್ತಿದ್ದಾನೆ. ಪ್ರಗತಿಯ ಪೊರಕೆ ಹಿಡಿದು ಜೀವಿವೈವಿಧ್ಯತೆಯ ತಾಣಗಳಾದ ಕಾಡುಗಳು, ಬೆಟ್ಟಗಳು, ಮರಳಸಾಲು, ನದಿಗಳು, ಕೆರೆಸಾಲು ಮುಂತಾದವುಗಳನ್ನೆಲ್ಲ ವಂಶನಾಶವಾಗುವಂತೆ ಗುಡಿಸಿಹಾಕುತ್ತಾ ಸ್ವಚ್ಛ ಭಾರತವನ್ನು ಸೃಷ್ಟಿಸುತ್ತೇವೆಂಬುದೊಂದು ಭ್ರಾಂತಿ. ಜೀವಿವೈವಿಧ್ಯತೆಯ ಸಂರಕ್ಷಣೆ ಮತ್ತು ಅಭಿಯಾನವೇ ನಿಜವಾದ ಸ್ವಚ್ಛ ಭಾರತ. ಮೊದಲು ತತ್ವ ಸಿದ್ಧಾಂತಗಳು ಬದಲಾಗಬೇಕು. ಜೀವಿವೈವಿಧ್ಯತೆಯ ಸ್ಮಶಾನವನ್ನು ಸೃಷ್ಟಿಸಿದ ಮೇಲೆ ಸ್ವಚ್ಛ ಭಾರತ ನಿರ್ಮಾಣ ಹೇಗೆ ಸಾಧ್ಯ ? ಕಸಪೊರಕೆ ಹಿಡಿದು ತ್ಯಾಜ್ಯ ವಸ್ತುಗಳನ್ನು ಗುಡಿಸುವುದು ಮಾತ್ರ ಸ್ವಚ್ಛ ಭಾರತ ಅಭಿಯಾನ ಎಂದು ತಿಳಿಯಬಾರದು. ಜೀವಿವೈವಿಧ್ಯತೆಯು ಭೂಮಿತಾಯ ವೈಶಿಷ್ಟ್ಯತೆ. ಇದನ್ನು ಅಖಂಡವಾಗಿ ಗ್ರಹಿಸಬೇಕು.

ಆಧುನಿಕ ನಾಗರಿಕತೆ ಅಖಂಡವಾದುದನ್ನು ಖಂಡ–ಖಂಡವಾಗಿ ಕತ್ತರಿಸಿ ಕೊಡುತ್ತಿದೆ. ಆದ್ದರಿಂದಲೇ ಇಂದು ಬೇರೆ ಬೇರೆ ದಿನಾಂಕಗಳಲ್ಲಿ ವಿಶ್ವ ಜಲ ದಿನ, ವಿಶ್ವ ಸಾಗರ ದಿನ, ವಿಶ್ವ ಅರಣ್ಯ ದಿನ, ವಿಶ್ವ ಪರ್ವತ ದಿನ, ವಿಶ್ವ ಮಣ್ಣು ದಿನ, ವಿಶ್ವ ಭೂಮಿ ದಿನ, ವಿಶ್ವ ಓಝೋನ್ ದಿನ, ವಿಶ್ವ ಪ್ರಾಣಿ ಅಭ್ಯುದಯ ದಿನ, ವಿಶ್ವ ಆರೋಗ್ಯ ದಿನ ಎಂದು ಮುಂತಾದ ಆಚರಣೆಗಳನ್ನು ಜಾರಿಗೆ ತಂದು ಸುವಿಚಾರದಿಂದ ದೂರವಾಗಿದ್ದೇವೆ. ಮೇಲ್ಕಂಡ ಎಲ್ಲ ದಿನಗಳನ್ನೊಳಗೊಂಡ ಜೀವಿವೈವಿಧ್ಯತೆಯ ಅಖಂಡ ಜ್ಞಾನವೇ ಸಕಲ ಮಾನವರ ಮತ್ತು ಸಕಲ ವಿಶ್ವದ ಆರೋಗ್ಯಕ್ಕೆ ಮೂಲವಾದ ಶಕ್ತಿಯಾಗಿದೆ. ಈ ಜೀವಿವೈವಿಧ್ಯತೆಯ ಶಕ್ತಿಮೂಲಗಳೇ ರಾಮಾಯಣ ಮತ್ತು ಮಹಾಭಾರತಗಳಲ್ಲಿ ಅರಣ್ಯಕಾಂಡ ಮತ್ತು ಅರಣ್ಯ ಪರ್ವಗಳಲ್ಲಿ ಮೂಡಿಬಂದಿದೆ. ರಾಮ ಸೀತೆ ಲಕ್ಷ್ಮಣರು ಅಯೋಧ್ಯೆಯ ಅರಮನೆಯಲ್ಲಿ ನಾಲ್ಕು ಗೋಡೆಗಳ ಮಧ್ಯೆ ಬದುಕಿದ್ದರೆ ದುರ್ಬಲರಾಗಿರುತ್ತಿದ್ದರು. ಅವರ ಪಾಲಿಗೆ ಅರಣ್ಯ ಕಾಂಡವು ಶಕ್ತಿಗಳಿಕೆಯ ಮಹಾಯಾನ. ಇದರಿಂದ ಭರತಖಂಡದ ಮೂರು ಶಕ್ತಿಕೇಂದ್ರಗಳು ಅಯೋಧ್ಯೆ–ಕಿಷ್ಕಿಂದೆ–ಲಂಕೆ ಒಂದಾಗಲು ಕಾರಣವಾಯಿತು. ಹಸ್ತಿನಾವತಿಯಿಂದ ಹೊರಬಂದು ಅರಣ್ಯಪರ್ವದ ಒಳಹೊಕ್ಕು ಘನಗಟ್ಟಿಗಳಾದ ಪಾಂಡವರು ಕುರುಕ್ಷೇತ್ರದಲ್ಲಿ ವಿಜಯಶಾಲಿಗಳಾದರು. ಅಯೋಧ್ಯೆ ಮತ್ತು ಹಸ್ತಿನಾವತಿಗಳೆಂದರೆ ಇಂದಿನ ಮಹಾನಗರಗಳಿಗೆ ಪ್ರತೀಕವೆಂದು ತಿಳಿಯಬೇಕು. ಮಹಾನಗರಗಳಲ್ಲಿ ವಾಸ ಮಾಡುತ್ತಿರುವ ಮೂರು ಮತ್ತು ನಾಲ್ಕನೇ ತಲೆಮಾರುಗಳ ಮಕ್ಕಳು ನಿಸರ್ಗದಿಂದ ದೂರವಾಗಿ ಬದುಕುತ್ತಾ ದುರ್ಬಲರಾಗಿ ನರಳುತ್ತಿರುವುದು ಏಕೆ ? ಎಂದು ಎಲ್ಲರೂ ಆಲೋಚಿಸಬೇಕು.

ಪ್ರಗತಿಯ ಹೆದ್ದಾರಿ ಮತ್ತು ಅಪರಿಮಿತವಾದ ವೇಗ ಬುದ್ಧಿಯಿಂದ ಕನಿಷ್ಠ ಜೀವಿಗಳನ್ನು ಅಪ್ಪಚ್ಚಿ ಮಾಡುತ್ತಾ, ಅವುಗಳ ಮೇಲೆ ನಾಗರಿಕತೆಯ ಚಕ್ರಗಳನ್ನು ನಿರಂತರವಾಗಿ ಹಾಯಿಸುತ್ತಿರುವ ಆಧುನಿಕ ಮನುಷ್ಯ ನಿಜವಾದ ರಾಕ್ಷಸನಾಗಿ ಕಾಣುತ್ತಾನೆ. ನೆಲದಲ್ಲಿ ಮಣ್ಣುಹುಳದಿಂದ ಹಿಡಿದು ಆನೆಗಳವರೆಗೆ, ನೀರಿನಲ್ಲಿ ಕಿರು ಮೀನುಗಳಿಂದ ಹಿಡಿದು ತಿಮಿಂಗಿಲಗಳವರೆಗೆ, ಗಾಳಿ – ಆಕಾಶದಲ್ಲಿ ಮರಿದುಂಬಿಗಳಿಂದ ಹಿಡಿದು ರಣಹದ್ದುಗಳವರೆಗೆ ಸಕಲ ಜೀವಜಾಲವನ್ನು ಮಾರಣ ಹೋಮ ಮಾಡುತ್ತಿರುವ ಆಧುನಿಕ ನಾಗರಿಕತೆ ಹೃದಯಹೀನತೆಯಿಂದ ಕೂಡಿದೆ. ಇಂದು ಆಧುನಿಕ ಮನುಷ್ಯರಿಗೆ ಮತ್ತು ಆಧುನಿಕ ನಾಗರಿಕತೆಗೆ ಅರಣ್ಯಕಾಂಡ – ಅರಣ್ಯಪರ್ವಗಳೇ ಇಲ್ಲ. ಮನುಷ್ಯರಿಗೆ ಹಚ್ಚಹಸಿರು, ಸ್ವಚ್ಛ ಗಾಳಿ ಮತ್ತು ಶುಭ್ರ ಬೆಳಕಿನ ಪರಿಚಯವೇ ಇಲ್ಲ. ಎಷ್ಟೋ ಮಂದಿ ನಾಗರಿಕರಿಗೆ ಬೆಳದಿಂಗಳು ಅಥವಾ ಚಂದಮಾಮನ ಜೊತೆ ಒಡನಾಟವೇ ಇಲ್ಲ. ಕೃತ್ರಿಮವಾದ ಬದುಕು ಮತ್ತು ಕೃತಕ ಜೀವನಶೈಲಿಯ ಮಾರಿಹಬ್ಬಕ್ಕೆ ಕುರಿವಿಂಡುಗಳಂತೆ ಬಲಿಯಾಗುತ್ತಿರುವ ಆಧುನಿಕರಿಗೆ ನಿಸರ್ಗದ ನಿಜದುದಯ ಆಗುವುದಿಲ್ಲ.

ಹೃದಯಹೀನವಾಗಿರುವ ಆಧುನಿಕ ನಾಗರಿಕತೆಯ ಆಂತರ್ಯದಲ್ಲಿ ಕಾಡುಗಳೂ ಇಲ್ಲ, ಪರ್ವತಗಳೂ ಇಲ್ಲ, ನದಿಗಳೂ ಇಲ್ಲ. ನಿರಂತರವಾಗಿ ಅರಣ್ಯ ನಾಶ ಮಾಡುತ್ತಾ, ಏಕರೂಪಾತ್ಮಕವಾದ ನೆಡುತೋಪುಗಳನ್ನು ಬೆಳೆಸುತ್ತಿರುವ ಆಧುನಿಕ ನಾಗರಿಕತೆಯ ಹೃದಯದಲ್ಲಿ ಕಾಡುಗಳು ಇಲ್ಲವಾಗಿದ್ದು, ಜೀವನವು ತೋಪಾಗುತ್ತಿದೆ. ಜೀವಿವೈವಿಧ್ಯತೆಯನ್ನು ಬಲಿಗೊಟ್ಟು ಬೃಹತ್ತಾಗಿ ಗಗನಚುಂಬಿಯಾಗಿ ಬೆಳೆಯುತ್ತಿರುವ ನಮ್ಮ ದೇಶದ ಮಹಾನಗರಗಳು ಬೃಹತ್ತಾದ ಮಾನವ ತೋಪುಗಳೇ ಸರಿ ! ನೀಲಗಿರಿ ತೋಪುಗಳಲ್ಲಿ ಬೇರೇನೂ ಬೆಳೆಯುವುದಿಲ್ಲ. ಇವು ಮರವಲ್ಲದ ಮರಗಳು. ಕವಿ ಕೆ. ಎಸ್. ನರಸಿಂಹಸ್ವಾಮಿ

ಅವರು ಹೇಳಿರುವಂತೆ, "ಹಕ್ಕಿ ತಂಗುವುದಿಲ್ಲ, ಕೋತಿ ಜಗ್ಗುವುದಿಲ್ಲ, ಏನಿದರ ಅಮರಭಾವ" ಎನ್ನಬಹುದು. ಕನಿಷ್ಠ ಜೀವಿಗಳ ಸಾಹಿತ್ಯವನ್ನು ಕಳೆದುಕೊಂಡಿರುವ ನಮ್ಮ ದೇಶದ ಮಹಾನಗರಗಳು ಮನುಷ್ಯರಿಂದ ತುಂಬಿ ತುಳುಕುತ್ತಾ ಈ ನೀಲಗಿರಿ ತೋಪುಗಳ ರೀತಿಯಲ್ಲಿ ಬರಿಯ ಮಾನವ ತೋಪುಗಳಾಗಿ ಮೆರೆಯುತ್ತಿವೆ. ಭೂಗರ್ಭದಲ್ಲಿ ನಡೆಯುತ್ತಿರುವ ಖನಿಜ ಮೂಲದ ಗಣಿಗಾರಿಕೆಗಳು; ಭೂಮೇಲ್ಮೈಯಲ್ಲಿ ನಡೆಯುತ್ತಿರುವ ಕಲ್ಲು, ಮಣ್ಣು, ಮರಳು ಮೂಲದ ಗಣಿಗಾರಿಕೆಗಳು; ಮಹಾನಗರಗಳಿಂದ ವಿಪರೀತವಾಗಿ ಹೊಮ್ಮುತ್ತಿರುವ ಕಾರ್ಬನ್ ಮೂಲದ ಧೂಮಲೀಲೆಗಳು; ಬೀಜ-ಗೊಬ್ಬರ-ಔಷಧಗಳ ಮೂಲಕ ಮಣ್ಣಿನ ಫಲವಂತಿಕೆಯನ್ನು ನಾಶಗೊಳಿಸುತ್ತಿರುವ ಕೃಷಿ ಚಟುವಟಿಕೆಗಳು - ಇವೆಲ್ಲ ಸೇರಿ ಜೀವಿವೈವಿಧ್ಯತೆಯ ಮಾರಣಹೋಮ ನಿರ್ವಿಘ್ನವಾಗಿ ಸಾಗುತ್ತಿದೆ. ಒಂದೆಡೆ ವಂಶನಾಶಕ್ಕೆ ಸಲ್ಲುತ್ತಿರುವ ಜೀವಿವೈವಿಧ್ಯತೆಯ ತಾಣಗಳು, ಮತ್ತೊಂದೆಡೆ ಅತ್ಯಾಧುನಿಕ ಸೌಲಭ್ಯಗಳಿಂದ ಗಗನಚುಂಬಿಯಾಗಿ ಬೆಳೆಯುತ್ತಿರುವ ಮಹಾನಗರಗಳು, ಒಂದೇ ನಾಣ್ಯದ ಎರಡು ಮುಖಗಳಾಗಿರುವುದು ಗಾಬರಿ ಹುಟ್ಟಿಸುತ್ತವೆ. ಇದು ವಿಶೇಷವಾಗಿ ನಮ್ಮ ದೇಶದ ಮಹಾನಗರಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ವಿದ್ಯಮಾನವಾಗಿರುವುದು ಪ್ರಪಂಚದ ಬೇರೆ ಬೇರೆ ಮಹಾನಗರಗಳೊಂದಿಗೆ ಹೋಲಿಸಿದಾಗ ಮಾತ್ರ ಅರಿವಾಗುತ್ತದೆ.

ಪ್ರಸ್ತುತ, ಬೆಂಗಳೂರು ಮಹಾನಗರ ಕಾವೇರಿ ನೀರನ್ನು ಒಂದನೇ ಹಂತ, ಎರಡನೇ ಹಂತ ಎಂದು ವಿವಿಧ ಹಂತಗಳಲ್ಲಿ ಆಗಮ ಸಂಧಿ ಮಾಡಿ ಕೊಳ್ಳುತ್ತಿದೆಯೇ ಹೊರತು, ತನ್ನದೇ ಆದ ಸ್ಥಳೀಯ ಜಲವಲಯಗಳನ್ನು ಬಸ್‌ಸ್ಟ್ಯಾಂಡುಗಳು, ಬಡಾವಣೆಗಳು, ಕ್ರೀಡಾಂಗಣಗಳು ಮುಂತಾದ ಹಾಗೆ ನಗರೀಕರಣಗೊಳಿಸುತ್ತಾ ಲೋಪಸಂಧಿಗೊಳಪಡಿಸುತ್ತಿರುವುದು ನಿಜಕ್ಕೂ ದುರಂತಮಯ. ಕಾವೇರಿ ನೀರಿನ ಆಗಮಸಂಧಿ ಮತ್ತು ಸ್ಥಳೀಯ ಜಲವಲಯಗಳ ಲೋಪಸಂಧಿಯಿಂದ ಪರಾವಲಂಬಿಯಾಗುತ್ತಿರುವ ಬೆಂಗಳೂರು ಮಹಾನಗರವು ಸ್ವಾವಲಂಬಿಯಾಗಬೇಕಾದರೆ, ವ್ಯರ್ಥವಾಗಿ ಹರಿದು ಹೋಗುತ್ತಿರುವ ಮಳೆ ನೀರನ್ನು ಭೂಗರ್ಭದಲ್ಲಿ ಸಂಗ್ರಹಿಸುವುದು ಅಥವಾ ಇಂಗಿಸುವುದರ ಮೂಲಕ ಆದೇಶಸಂಧಿಯ ಕಾರ್ಯಾಚರಣೆ ಮಾಡಲೇಬೇಕಾಗಿದೆ. ಮಳೆನೀರಿನಿಂದ ಉಂಟಾಗುವ ಚರಂಡಿ ಪ್ರವಾಹಗಳು, ಮೇಲು ಸೇತುವೆಯ ಕೆಳಗಣ ಜಲಾಶಯಗಳು, ಡಾಂಬರು ರಸ್ತೆಯ ಮೇಲೆ ಹರಿಯುವ ಹೊಳೆಗಳು - ಮುಂತಾದ ಅನಾಹುತಗಳನ್ನು ತಪ್ಪಿಸಬೇಕಾದರೆ, ಪ್ರತಿಯೊಂದು ಮನೆ ಮತ್ತು ಕಟ್ಟಡದಲ್ಲಿ ಮಳೆನೀರಿನ ಕೊಯ್ಲು ಕಡ್ಡಾಯಗೊಳಿಸುವುದಲ್ಲದೆ ಅನುಷ್ಠಾನ ಗೊಳ್ಳುವಂತೆ ನೋಡಿಕೊಳ್ಳಬೇಕು. ಒಂದೇ ಒಂದು ಮಳೆಹನಿ ಮೋರಿಗಳು ಮತ್ತು ಒಳಚರಂಡಿಗಳನ್ನು ಸೇರದಂತೆ ಎಚ್ಚರವಹಿಸಬೇಕು. ಇದರಿಂದ ಸ್ಥಳೀಯ ಜಲವಲಯಗಳನ್ನು ಲೋಪಸಂಧಿ ಮಾಡಿಕೊಂಡಿರುವ ಬೆಂಗಳೂರು ಮಹಾನಗರಕ್ಕೆ ನಿರ್ಜಲೀಕರಣದ ಬಾಧೆ ತಪ್ಪುತ್ತದೆ. ಭೂಮಿಯಲ್ಲಿ ಅಂತರ್ಜಲದ ಮಟ್ಟ ಹೆಚ್ಚಿ ಭೂಕಂಪಗಳಿಂದಾಗುವ ಹೆಚ್ಚು ಹಾನಿಯನ್ನು ತಡೆಯುತ್ತದೆ. ಒಂದು ಹಿಡಿ ಒದ್ದೆಮಣ್ಣನ್ನು ಬಿಗಿಮುಷ್ಟಿಯಲ್ಲಿ ಬಿಗಿಮಾಡಿಬಿಟ್ಟರೆ ಅದು ಉಂಡೆಯಾಗಿಯೇ ಉಳಿದಿರುತ್ತದೆ. ಇದೇ ರೀತಿ ಒಣಮಣ್ಣನ್ನು ಬಿಗಿಮುಷ್ಟಿಯಲ್ಲಿ ಬಿಗಿಮಾಡಿಬಿಟ್ಟರೆ ಅದು ಸಡಿಲವಾಗಿ ಕುಸಿದುಹೋಗುತ್ತದೆ. ನಮ್ಮ ಪೂರ್ವಿಕರು ಮಣ್ಣಿನ ಗೋಡೆಗಳನ್ನು ಎಬ್ಬಿಸಿಯೇ ಮನೆಗಳನ್ನು ಕಟ್ಟಿಕೊಳ್ಳುತ್ತಿದ್ದರು. ಮಣ್ಣು ಮತ್ತು ನೀರಿನ ಸ್ನೇಹಸಂಬಂಧ ದೃಢವಾದುದು. ಆಧುನಿಕ ನಾಗರಿಕತೆಯು ಈ ಮಣ್ಣು ಮತ್ತು ನೀರಿನ ದೃಢವಾದ ಸ್ನೇಹಸಂಬಂಧಕ್ಕೆ ಧಕ್ಕೆಯನ್ನು ತರಬಾರದು. ಇಂದು ಸಾವಿರಾರು ಅಡಿಗಳಷ್ಟು ಕೆಳಕ್ಕೆ ಕುಸಿದಿರುವ ಅಂತರ್ಜಲದ ಮಟ್ಟ ಹೊಂದಿರುವ ನಗರಪ್ರದೇಶಗಳು ಮುಂದೊಮ್ಮೆ ಸಂಭವಿಸಲಿರುವ ಭೂಕುಸಿತ ಮತ್ತು ಭೂಕಂಪದ ಭೀಕರತೆಗೆ ತಕ್ಕ ಪೂರ್ವಸಿದ್ಧತೆಗಳನ್ನು ಈಗಿನಿಂದಲೇ ಮಾಡಿಕೊಳ್ಳಬೇಕು.

ಜೀವಿವೈವಿಧ್ಯತೆಯ ಜೊತೆ ಜೊತೆಯಲ್ಲೇ ಸಾಗುವ ಪ್ರಗತಿಪಥದ ಹೆಜ್ಜೆಗಳಿಗೆ ಭಯವಿಲ್ಲ. ಕನಿಷ್ಠ ಜೀವಿಗಳೊಂದಿಗೆ ಬೆಳೆಸಿಕೊಳ್ಳುವ ಸೋದರ ಸ್ನೇಹಕ್ಕೆ ಕಾಳಿದಾಸನ 'ಅಭಿಜ್ಞಾನ ಶಾಕುಂತಲ' ಉತ್ತಮ ನಿದರ್ಶನ. ಕಣ್ವಾಶ್ರಮದಲ್ಲಿ ತಪೋವನದಲ್ಲಿರುವ ಶಕುಂತಲೆ ಒಂದು ಮಾವಿನ ಮರ, ಒಂದು ಮಲ್ಲಿಗೆ ಬಳ್ಳಿ, ಒಂದು ಜಿಂಕೆಯ ಜೊತೆ ಹೇಗಿರುತ್ತಾಳೆಂದರೆ ಅನಸೂಯೆ, ಪ್ರಿಯಂವದೆ ಇವರ ಸಂಗದಲ್ಲಿರುವಂತೆ ಅವುಗಳೊಡನೆಯೂ ಇರುತ್ತಾಳೆ. ಶಕುಂತಲೆಗೆ ಸಸ್ಯ-ಪ್ರಾಣಿ-ಮನುಷ್ಯ ಎಂಬ ಭೇದಭಾವವೇ ಇಲ್ಲ. ಇದನ್ನು ಕಾಳಿದಾಸನು 'ಸೋದರ ಸ್ನೇಹ' (= ಭೂಮಿ ತಾಯಿಯ ಉದರದಲ್ಲೆ ಜನಿಸಿ ಬಂದ ಅಂಟಿನ ನಂಟು ಎಂಬರ್ಥದಲ್ಲಿ) ಎಂದು ಕರೆದಿದ್ದಾನೆ. 'ಅನಾಡಿ' ಎಂಬ ಹಿಂದಿ ಸಿನಿಮಾದಲ್ಲಿ ರಾಜ್‌ಕಪೂರ್ ಮತ್ತು ನೂತನ್ ಜೋಡಿಯಾಗಿ ನಟಿಸಿದ್ದಾರೆ. ರಾಜ್‌ಕಪೂರ್ ರಸ್ತೆಯಲ್ಲಿ ಹಾಡುತ್ತಾ ಕುಣಿಯುತ್ತಾ ಬರುತ್ತಿರುತ್ತಾನೆ. ಅವನ ಕಣ್ಣಿಗೆ ಆ ಡಾಂಬರ್ ರಸ್ತೆಯಲ್ಲಿ ಪುಟ್ಟದಾದ ಒನಕೆ ಹುಳು (= ಮಿಲಿಪೀಡ್) ತೆವಳುತ್ತಿರುವುದು ಕಂಡುಬರುತ್ತದೆ. ವೇಗವಾಗಿ ಮತ್ತು ಅವಸರದಿಂದ ಸರಿಯುವ ವಾಹನಗಳಿಗೆ ಸಿಕ್ಕಿ ಆ ಹುಳು ಜಜ್ಜಿಹೋಗುವುದನ್ನು ತಪ್ಪಿಸಲು ರಾಜ್‌ಕಪೂರ್ ಹಾಡುತ್ತಿರುವಂತೆಯೇ ಕೆಳಕ್ಕೆ ಬಾಗುತ್ತಾ ಒನಕೆ ಹುಳುವನ್ನು ಕೈಯಲ್ಲೆತ್ತಿಕೊಂಡು ಬದಿಯಲ್ಲಿದ್ದ ಹಸಿರು ಗಿಡಗಳ ಪೊದೆಯಲ್ಲಿ ಬಿಟ್ಟುಬಿಡುತ್ತಾನೆ. ಹುಳುವನ್ನು ಕನಿಷ್ಠ ಜೀವಿಯೆಂದು ತಿರಸ್ಕರಿಸದೆ ಈ ಭೂಮಿಯಲ್ಲಿ ಅದಕ್ಕೆ ಬದುಕಲು ಇರುವ ಹಕ್ಕನ್ನು ಗೌರವಿಸುತ್ತಿರುವ ಈ ದೃಶ್ಯ ನನ್ನ ಮನದ ಪರದೆಯಲ್ಲಿ ಅಚ್ಚೊತ್ತಿ ಉಳಿದುಬಿಟ್ಟಿದೆ. ಕಾಳಿದಾಸನು ಹೇಳುವ 'ಸೋದರ ಸ್ನೇಹ' ಮತ್ತು ರಾಜ್‌ಕಪೂರ್ ದೃಶ್ಯೀಕರಿಸಿದ 'ಕರುಣಾಮೈತ್ರಿ'ಗಳನ್ನು ಆಧುನಿಕ ನಾಗರಿಕತೆ ಇಡಿಯಾಗಿ ಸ್ವೀಕರಿಸಿ, ತನ್ನ ಪ್ರಗತಿ ಮೀಮಾಂಸೆಯಲ್ಲಿ ಮೊದಲು ಅಳವಡಿಸಿಕೊಳ್ಳಬೇಕು.

ಆಧುನಿಕ ಮನುಷ್ಯರನ್ನು ಪರಿಸರದಿಂದ ಪ್ರತ್ಯೇಕಗೊಂಡ ಮನುಷ್ಯರೆಂದು ವಿವರಿಸಬಹುದು. ಏಕೆಂದರೆ, ಸಹಜ ಪರಿಸರ ಮತ್ತು ಕನಿಷ್ಠ ಜೀವಿಗಳೊಂದಿಗೆ ಬೆರೆತು ಜೀವಿಸುವ ಬಗೆಯನ್ನೇ ಆಧುನಿಕ ಮನುಷ್ಯ ಕಳೆದುಕೊಂಡಿದ್ದು, ನಿಸರ್ಗದಿಂದ ಸಂಪೂರ್ಣವಾಗಿ ದೂರಸರಿಯುತ್ತಾ ಕುಂಡದ ಗಿಡದಂತೆ ಬದುಕುತ್ತಿದ್ದಾನೆ. ಮನುಷ್ಯರ ವ್ಯಕ್ತಿತ್ವದಲ್ಲಿ ಅರಣ್ಯಕಾಂಡ ಮತ್ತು ಅರಣ್ಯಪರ್ವಗಳು ಇರಬೇಕು. ಇದಕ್ಕೆ ಕುವೆಂಪು ವಿರಚಿತ ಸಮಗ್ರ ಸಾಹಿತ್ಯವೇ ಸಾಕ್ಷಿ. ನಾಯಿಗುತ್ತಿಯಿಂದ ಹಿಡಿದು ಗಿರಿವನಪ್ರಿಯ ರಾಮನವರೆಗೆ, ಪೀಂಚಲುವಿನಿಂದ ಹಿಡಿದು ಸೀತಾದೇವಿಯವರೆಗೆ ಕುವೆಂಪು ಅವರ ಸಮಗ್ರ ಸಾಹಿತ್ಯದಲ್ಲಿ ಅರಣ್ಯಮಯ ಚೇತನಗಳು ಸಮೃದ್ಧಿ ಯಾಗಿವೆ. ಮಾನವರ ವ್ಯಕ್ತಿತ್ವವು ನಿಸರ್ಗ ಸನ್ನಿಧಿಯಿಂದ ಪಾವನಗೊಳ್ಳುತ್ತಿದ್ದರೆ, ಅತ್ಯಾಧುನಿಕ ಐಷಾರಾಮಿ ಜೀವನಶೈಲಿಯಿಂದ ಪತಿತಗೊಳ್ಳುತ್ತಿರುತ್ತದೆ. ಸುಖಜೀವನವು ಸುಖವ್ಯಾಧಿಗಳಿಗೆ ಮೂಲಕಾರಣವೆಂಬುದನ್ನಿಲ್ಲಿ ಮರೆಯಬಾರದು, ಬೆಟ್ಟವನ್ನು ಏರುವುದು, ಬಂಡೆಗಳನ್ನು ಹತ್ತುವುದು, ಹೊಳೆಗಳಲ್ಲಿ ಈಜುವುದು, ಜಲಪಾತಗಳಿಗೆ ಮೈಯೊಡ್ಡುವುದು, ಹಳ್ಳಿಗಾಡುಗಳಲ್ಲಿ ಕಾಲ್ನಡಿಗೆಯಲ್ಲಿ ತಿರುಗಾಡುವುದು, ಕೋಳಿ-ಕುರಿ-ಮೇಕೆ-ಎಮ್ಮೆ-ಹಸು-ನಾಯಿಗಳ ಒಡನಾಟ ಮತ್ತು ಸಕಲಜೀವರಾಶಿಯ ಕೂಡಲಸಂಗಮದಲ್ಲಿ ಒಂದಾಗುವುದು - ಇವೆಲ್ಲ ನಿಸರ್ಗ ಸನ್ನಿಧಿಯಾಗಿದ್ದು ಮನುಷ್ಯರ ತನು-ಮನಗಳನ್ನು ಗಟ್ಟಿಗೊಳಿಸುತ್ತಿರುತ್ತವೆ. ಮನುಷ್ಯರು ಕುಂಡದ ಗಿಡಗಳಂತೆ ಪ್ರತ್ಯೇಕವಾಗಿ ಮತ್ತು ಒಂಟಿಯಾಗಿ ಜೀವಿಸಬಾರದು. ಸಕಲ ಜೀವರಾಶಿಯ ಕೂಡಲಸಂಗಮದಲ್ಲಿ ಮತ್ತು ಇಡೀ ಜೀವಿಸಂಕುಲ ಪರಿವೇಷ್ಟಿತನಾಗಿ ಬಾಳುವುದು ಸಾರ್ಥಕವೆನಿಸುತ್ತದೆ. ಇದಕ್ಕೆ ನಮ್ಮ ದೇಶದ ಹಳ್ಳಿಗಾಡುಗಳೇ ಹೆಚ್ಚು ಸೂಕ್ತ. "ಜೀವಗಿರಿ ಶೃಂಗದಲಿ ತುಂಗ ಗೋಪುರವಾಗಿ ಮೆರೆಯಯ್ಯ" - ಎಂಬ ಹಾರೈಕೆಯನ್ನು ಕುವೆಂಪು ಮನುಷ್ಯ ಜೀವನಕ್ಕೆ ಸಲ್ಲಿಸಿದ್ದಾರೆ. 'ಜೀವಗಿರಿ ಶೃಂಗ'ವೆಂದರೆ ಜೀವಿವೈವಿಧ್ಯತೆಯ ಬೆಟ್ಟಸಾಲಿನ ತುದಿಯಲ್ಲಿ ಮನುಷ್ಯರು 'ತುಂಗ ಗೋಪುರವಾಗಿ' ಎಂದರೆ ಅತ್ಯುನ್ನತ ವ್ಯಕ್ತಿತ್ವದವರಾಗಿ ಬಾಳುವುದು ಎಂದು ತಿಳಿಯಬೇಕು.

ಭಾರತ ದೇಶವು ಜೀವಿವೈವಿಧ್ಯತೆಯ ಪರ್ಯಾಯ ದ್ವೀಪವಾಗಿದೆ. ಮೂರು ದಿಕ್ಕು ಕಡಲು ಮತ್ತು ಒಂದು ದಿಕ್ಕು ಹಿಮಾಲಯದ ಬೆಟ್ಟಸಾಲುಗಳನ್ನು ಒಳಗೊಂಡಿರುವ ತಾಯಿ ಭಾರತಿಗೆ ಪಶ್ಚಿಮಘಟ್ಟ ಮತ್ತು ಪೂರ್ವಘಟ್ಟದ ಗಿರಿಶ್ರೇಣಿಗಳೆಂಬ ಶಿಲಾಹಾರವಿದೆ. ಗಂಗಾ ಮೈದಾನವೆಂಬ ಸುವಿಶಾಲ ವಕ್ಷಸ್ಥಳವಿದೆ. ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೆ ಹರಿಯುತ್ತಿರುವ ಬಹು ನದಿ-ಉಪನದಿಗಳ ಜಾಲವು ಭೂಮಿತಾಯಿಯ ಕ್ಷೀರಗ್ರಂಥಿಗಳಂತಿದ್ದು ಸಕಲ ಜೀವರಾಶಿಗೆ ನೀರೆಂಬ ಎದೆಹಾಲನ್ನು ಉಳಿಸುತ್ತಿವೆ. ಇಂಥ ತಾಯಿ ಭಾರತಿಯನ್ನು ನಾವಿಂದು ಮನೆಮಕ್ಕಳಾಗಿ ಕಾಪಾಡಿಕೊಳ್ಳಬೇಕು. ಜೀವಿವೈವಿಧ್ಯತೆಯ ಬಗ್ಗೆ ಎಷ್ಟು ಹೇಳಿದರೂ ಸಾಲದೆನಿಸುತ್ತದೆ. ನಮ್ಮ ದೇಶದ ಜೀವಿವೈವಿಧ್ಯತೆಯು ಸಾಗರಕ್ಕೆ ಸಮಾನವಾದುದು.

**ವಿ. ಚಂದ್ರಶೇಖರ ನಂಗಲಿ**
ನಂ. ೧೬, 'ಶ್ರೀಗೌರಿ', ಆನೇ ಕ್ರಾಸ್, ಕನಕನಗರ, ಹೊಸಕೋಟೆ
ಬೆಂಗಳೂರು ಗ್ರಾಮಾಂತರ - ೫೬೨ ೧೧೪





# ಯಶಸ್ಸಿನ ಗುಟ್ಟು ಆತ್ಮಶಕ್ತಿಯಲ್ಲಿದೆ

ಹಾರಿ ಬಂದ ಹಕ್ಕಿ ರೆಂಬೆ ಮೇಲೆ ಕುಳಿತುಕೊಳ್ಳುವುದು ರೆಂಬೆಯ ಶಕ್ತಿಯನ್ನು ನಂಬಿ ಅಲ್ಲ, ರೆಂಬೆ ಮುರಿದರೂ ಭಯಬೀಳದೆ ಮೇಲೆ ಹಾರಬಲ್ಲೆ ಎಂಬ ಆತ್ಮವಿಶ್ವಾಸದಿಂದ. ಎಲ್ಲ ಜೀವಗಳ ಆಧಾರ ಆತ್ಮಶಕ್ತಿಯೆ. ಅದನ್ನು ಎಲ್ಲ ಜೀವಿಗಳಿಗೂ ಯಾವ ತರತಮ ಭಾವವಿಲ್ಲದೆ ನಿಸರ್ಗವೆ ಕರುಣಿಸಿದೆ. ಸುಪ್ತವಾಗಿರುವ ಆ ಆತ್ಮಶಕ್ತಿಯನ್ನು ಜಾಗೃತಗೊಳಿಸಿಕೊಳ್ಳುವ ವಿವೇಕ ನಮ್ಮದಾಗಿರಬೇಕು, ಅಷ್ಟೆ. ಯಾರಲ್ಲಿ ಪರಿಶುದ್ಧತೆ ಇದೆಯೋ, ಯಾರು ಸತ್ಕರ್ಮವನ್ನು ಮಾಡುವರೋ, ಯಾರು ಜಿತೇಂದ್ರಿಯನಾಗಿ ಇರುವನೋ ಅವನಲ್ಲಿ ಆತ್ಮಶಕ್ತಿ ಪ್ರಕಟಗೊಳ್ಳುತ್ತದೆ. ಯಾರು ದುಷ್ಕರ್ಮಿಗಳೋ, ಅಶಾಂತರೋ, ಅಹಿತವನ್ನೇ ಚಿಂತಿಸುವರೋ ಅವರು ಎಂದಿಗೂ ಆತ್ಮಶಕ್ತಿಯನ್ನು ಹೊಂದಲಾರರು.

ಎಲ್ಲರ ಅಂತರಾತ್ಮವೂ ನಿತ್ಯಮುಕ್ತವಾಗಿದೆ. ಅದು ಸ್ವಾತಂತ್ರ್ಯದಲ್ಲಿ, ಸತ್ಯದಲ್ಲಿ ಹಾಗೂ ಜ್ಞಾನದಲ್ಲಿ ಐಕ್ಯವಾಗಿದೆ. ಸ್ವಾತಂತ್ರ್ಯವೇ ಅದರ ಹೃದಯ ಪಲ್ಲವಿ. ಸಚ್ಚಿದಾನಂದವೇ ಅದರ ಸ್ವಭಾವ. ಅದು ಅದರ ಆಜನ್ಮಸಿದ್ಧ ಹಕ್ಕು. ಪ್ರತಿಯೊಬ್ಬರೂ ತಮ್ಮ ನಿಜ ಸ್ವರೂಪವನ್ನು ತಾವೆ ಅರಿತುಕೊಳ್ಳಬೇಕು. ವಿವೇಕಾನಂದರು 'ನಿನ್ನ ಸ್ವಸ್ವರೂಪವನ್ನು ನೀನೆ ತಿಳಿದುಕೊ. ಅದನ್ನು ಇತರರಿಗೂ ತಿಳಿಯ ಹೇಳು. ಸುಪ್ತವಾಗಿರುವ ಆತ್ಮಶಕ್ತಿಯತ್ತ ಚಿತ್ತ ಹರಿಸು. ಆಗ ನೋಡು ಅದು ಹೇಗೆ ಜಾಗೃತವಾಗುವುದೆಂದು! ಸುಪ್ತ ಶಕ್ತಿ ಜಾಗೃತಗೊಂಡು ಅಂತರಂಗದ ಕ್ರಿಯೆಗೆ ತೊಡಗಿಕೊಂಡ ಕ್ಷಣದಲ್ಲಿ ಚೈತನ್ಯ ಹೊರಹೊಮ್ಮುತ್ತದೆ, ಭವ್ಯತೆ ಬರುತ್ತದೆ, ಒಳ್ಳೆಯತನ ಉದ್ದೀಪನಗೊಳ್ಳುತ್ತದೆ, ಪಾವಿತ್ರ್ಯತೆ ಪುಟಿದು ಬರುತ್ತದೆ ಹಾಗೂ ಯಾವುದು ಅತ್ಯುತ್ಕೃಷ್ಟವೋ ಅದೆಲ್ಲವೂ ಉಕ್ಕಿ ಹರಿಯುತ್ತದೆ' ಎಂದಿದ್ದಾರೆ.

ಈ ಲೋಕದ ಜೀವನ ಕಠಿಣ ಎಂಬುದು ನಿಜ. ಆದರೆ ಅದಕ್ಕಾಗಿ ಎದೆಗುಂದಬೇಕಾಗಿಲ್ಲ. ಬರುವ ಸಂಕಷ್ಟಗಳನ್ನು ಧೈರ್ಯದಿಂದ ಎದುರಿಸಿ ಮುನ್ನಡೆದಾಗ ಮಾತ್ರ ಅದರ ಸಿದ್ಧಿ. ಅದು ಅಭೇದ್ಯವೆನಿಸಬಹುದು. ಆದರೆ ಆತ್ಮಶಕ್ತಿಯ ಎದುರು ಅದು ನಿಲ್ಲಲಾರದು. ಏಕೆಂದರೆ ಪ್ರತಿಯೊಬ್ಬರಲ್ಲಿಯೂ ಪೂರ್ಣ ಋಷಿತ್ವವನ್ನು ಪಡೆಯುವ ಶಕ್ತಿಸಾಮರ್ಥ್ಯಗಳು ಅವನಲ್ಲಿಯೆ ಹುದುಗಿವೆ. ಯಾವ ವ್ಯಕ್ತಿಯೇ ಆಗಿರಲಿ ತಾನು ಯಶಸ್ಸು ಸಾಧಿಸಬೇಕಿದ್ದರೆ ದೃಢನಿಶ್ಚಯ ಬೇಕು, ಅಪಾರ ಇಚ್ಛಾಶಕ್ತಿ ಇರಬೇಕು. ತನ್ನ ಸಂಕಲ್ಪದ ಮುಂದೆ ಪರ್ವತಗಳೂ ಪುಡಿಪುಡಿಯಾಗುತ್ತವೆ ಎಂಬ ದೃಢವಿಶ್ವಾಸವಿರಬೇಕು. ಆಗ ಫಲ ಸಿಗುತ್ತದೆ ಎಂಬುದು ನಿಸರ್ಗ ಸತ್ಯ.

ಯಾರು ಪರಹಿತಕ್ಕಾಗಿ ಮನಸ್ಸಿಟ್ಟು ದುಡಿಯುವರೋ ಅವರು ನಿತ್ಯ ಸುಖಿಗಳು. ಅವರನ್ನು ಜಗತ್ತಿನ ಯಾವ ಶಕ್ತಿಯೂ ಎದುರುಗೊಳ್ಳಲು ಸಾಧ್ಯವಿಲ್ಲ. ಯಾವುದಾದರೂ ಕೇಡು ಉಂಟಾದರೆ ಅದು ನಮ್ಮಿಂದ ನಾವೇ ಮಾಡಿಕೊಳ್ಳುವುದು. ಅದು ಸ್ವಯಂಕೃತ ಅಪರಾಧ. ನಮ್ಮ ದುಃಖಗಳಿಗೆ ನಾವೇ ಜವಾಬ್ದಾರರು, ಅನ್ಯರಲ್ಲ. ಆದರೆ ಅದನ್ನು ನಾವು ಅನ್ಯತಾ ಅನ್ಯರ ಮೇಲೆ ಹೊರಿಸುತ್ತೇವೆ. ಅದು ನಿಶ್ಶಕ್ತ ಮನಸ್ಸಿನ ಕಳಂಕ ಕ್ರಿಯೆ.

ದೇಶದಿಂದ ದೇಶಕ್ಕೆ ಸಮುದ್ರದ ಮೇಲೆ ಸಾವಿರಾರು ಮೈಲಿ ನಿರಂತರ ಹಾರಿಹೋಗುವ ಹಕ್ಕಿಯ ರೆಕ್ಕೆಗೆ ಶಕ್ತಿ ಸಂಚಯವಾಗುವುದು ಅದರ ಆತ್ಮಶಕ್ತಿಯಿಂದಲೆ. ಈ ಸತ್ಯ ಸದಾ ನಮ್ಮ ಕಣ್ಣ ಮುಂದಿರಬೇಕು. ಮೊಟ್ಟಮೊದಲು ಪ್ರಪಂಚದ ಅತ್ಯುನ್ನತ ಶಿಖರ ಹಿಮಾಲಯ ಪರ್ವತವನ್ನೇರಿದ ಹಿಲರಿ ಮತ್ತು ತೇನ್ ಸಿಂಗ್‌ರ ಶಕ್ತಿಮೂಲವೂ ಆತ್ಮದ್ದೆ. ಪ್ರಬಲ ಬ್ರಿಟಿಷ್ ಚಕ್ರಾಧಿಪತ್ಯವೂ ತಲೆಬಾಗುವಂತೆ ಮಾಡಿದ ಹಾಗೂ ವಿಶ್ವಕ್ಕೆ ಅಹಿಂಸಾತತ್ವವನ್ನು ಸಾರುವ ಧೀಶಕ್ತಿ ಗಾಂಧೀಜಿಯವರಿಗೆ ಬಂದದ್ದು ಅವರ ಅಂತರಂಗದಿಂದಲೆ. ಅಷ್ಟೇ ಏಕೆ, ಕನಿಷ್ಠ ಎಂದು ಕಡೆಗಣಿಸುವ ಹುಲ್ಲುಗರಿಕೆಗೆ ಬಂಡೆಯನ್ನೂ ಭೇದಿಸಿಕೊಂಡು ಹೊರಹೊಮ್ಮುವ ಶಕ್ತಿ ಸುಪ್ತವಾಗಿರುವುದು ಅದರ ಅಂತರಂಗದಲ್ಲಿಯೆ.

ನಿಸರ್ಗ ಕರುಣಿಸಿರುವ ಅಂತಃಶಕ್ತಿಯಿಂದ ಗಿಡಮರ ಬಳ್ಳಿಗಳೂ ಹೊರತಾಗಿಲ್ಲ. ಎಲ್ಲವೂ ಪರಸ್ಪರ ಹೊಂದಾಣಿಕೆಯಿಂದ ತಮ್ಮ ಜೀವಲಕ್ಷಣಗಳಿಗೆ ಅನುಗುಣವಾಗಿ ಹೊಂದಿಕೊಂಡು ಬದುಕಿ ಸಾರ್ಥಕತೆಯನ್ನು ಕಂಡುಕೊಳ್ಳುತ್ತವೆ. ಹೊಂದಾಣಿಕೆ ಎಂಬುದು ಸೃಷ್ಟಿಯ ಅಂತರ್‌ನಿಯತಿ. ಅದಕ್ಕೆ ಅನುಗುಣವಾಗಿ ಅವು ಹೊಂದಿಕೊಂಡು ಬದುಕುತ್ತವೆ. ಇದರಿಂದ ಮನುಷ್ಯನೂ ಹೊರತಾಗಿಲ್ಲ, ಹೊರತಾಗಬಾರದು. ಹೊರತಾದರೆ ಅದು ನಿಸರ್ಗ ವಿರೋಧಿ. ಸಂಕಷ್ಟಗಳು ಸುತ್ತಿಕೊಳ್ಳುತ್ತವೆ, ಅನಗತ್ಯ ಸಮಸ್ಯೆಗಳು ಮುತ್ತಿಕೊಳ್ಳುತ್ತವೆ. ನಿಸರ್ಗ ತತ್ವದೊಂದಿಗೆ ಹೊಂದಿಕೊಂಡರೆ ಹೃದಯದಲ್ಲೆ ಸುಪ್ತವಾಗಿರುವ ಶ್ರೀಶಕ್ತಿ ಜಾಗೃತವಾಗಿ ಹೃನ್ಮನಗಳು ಚಿನ್ಮಯ ಬೆಳಕಿನಿಂದ ಕಂಗೊಳಿಸುತ್ತವೆ.

ನಮ್ಮ ಶಕ್ತಿಯನ್ನು ಮೀರಿದ ಪರೀಕ್ಷೆಗಳು ಬದುಕಿನಲ್ಲಿ ಬರುವುದುಂಟು. ಅದಕ್ಕಾಗಿ ಬೆದರಬಾರದು, ಕುಗ್ಗಿ ಕುಸಿಯಬಾರದು. ಬದುಕಿನಲ್ಲಿ ಸಂಕಷ್ಟಗಳು ಬರುವುದು ಬದುಕನ್ನು ಮತ್ತಷ್ಟು ಬಲಿಷ್ಠಗೊಳಿಸಲೆ ಹೊರತು ಅದನ್ನು ಬಲಿಗೊಳ್ಳಲಲ್ಲ ಎಂಬ ನಿಸರ್ಗ ತತ್ವದಲ್ಲಿ ದೃಢವಾದ ನಂಬಿಕೆ ಇರಬೇಕು.

**ಜ. ಹೊ. ನಾರಾಯಣಸ್ವಾಮಿ**
ವಕೀಲರು, ಸಾಹಿತಿ, ನಂ. ೨೦೬೪/ಅ, 'ಮಾನವ'
ಉತ್ತರ ಬಡಾವಣೆ, ಹಾಸನ – ೫೭೩ ೨೦೧

